

ಶ್ರೀ ವ್ಯಾಸಮಹರ್ಷಿ ಪ್ರಣೀತಂ

# ಶ್ರೀ ಶಿವಮಹಾಪುರಾಣ



ಶ್ರೀ ಸ್ಕಾಂದಪುರಾಣಾಂತರ್ಗತ
ಶಿವಪುರಾಣಮಹಾತ್ಮ್ಯ ಸಹಿತ
( ಮೂಲ ಸಂಸ್ಕೃತ, ಕನ್ನಡ ಅನುವಾದ )

ಸಂಪುಟ.೧

ವಿದ್ಯೇಶ್ವರ ಸಂಹಿತ

ಅನುವಾದಕರು

*ವಿದ್ವಾನ್ ಮನೋಹರ ದೀಕ್ಷಿತರು*

*ಪ್ರಕಾಶಕರು*

ಪುರಾಣ ಸಮುಚ್ಚಯ ಪ್ರಕಾಶನ

ಶ್ರೀ ಶ್ರೀಕಂಠೇಶ್ವರಸ್ವಾಮಿ ದೇವಸ್ಥಾನದ ಬೀದಿ,
ನಂಜನಗೂಡು,

ಒಂದನೇ ಸಂಪುಟ, ಪ್ರಥಮ ಮುದ್ರಣ ೧೯೯೭,
ಪ್ರತಿಗಳು : ೧೦೦೦



ಬೆಲೆ. ೬೦ ರೂ.ಗಳು

ಪ್ರಕಾಶಕರು
ಆರ್.ನಾಗರಾಜ ದೀಕ್ಷಿತರು
ಪುರಾಣ ಸಮುಚ್ಚಯ ಪ್ರಕಾಶನ
ಶ್ರೀಕಂಠೇಶ್ವರ ಸ್ವಾಮಿ ದೇವಸ್ಥಾನದ ಬೀದಿ
ನಂಜನಗೂಡು. ೫೭೧೩೦೧

ಡಿ.ಟಿ.ಪಿ. ಅಕ್ಷರ ಜೋಡನೆ
ಸುಷ್ಮಾಗ್ರಾಫಿಕ್ಸ್
ಮೈಸೂರು

ಶ್ರೀ ವೈದ್ಯನಾಥ ಪ್ರಿಂಟರ್ಸ್
ನಂಜನಗೂಡು

# ವಿಜ್ಞಾಪನೆ - ಪ್ರಸ್ತಾವನೆ

ಪುಣ್ಯಭೂಮಿಯೂ ಕರ್ಮಭೂಮಿಯೂ ಆದ ನಮ್ಮ ಭರತಖಂಡದಲ್ಲಿ ನೆಲೆಯಾಗಿ ನಿಂತಿರುವ ಸನಾತನ ಧರ್ಮ, ಸಂಸ್ಕೃತಿಯು ಇಡೀ ವಿಶ್ವಕ್ಕೆ ಅಲ್ಲದೆ ಸಕಲ ಲೋಕಗಳ ಅಸ್ತಿತ್ವಕ್ಕೆ ಕಾರಣರೂಪವಾಗಿದೆ. ಈ ಸನಾತನ ಧರ್ಮ ಸಂಸ್ಕೃತಿಯು ಅಪೌರುಷೇಯವೂ, ಅನಂತವೂಆದ ಮಹರ್ಷಿಗಳು ಕಂಡುಕೊಂಡ ವೇದಗಳಿಂದ ಅವಿರ್ಭವಿಸಿ ಇಡೀ ಜಗತ್ತಿಗೆ ಧರ್ಮ-ಅಧರ್ಮದ ವಿವೇಚನೆ, ನಡೆ, ನುಡಿ, ಸಭ್ಯತೆ, ಜ್ಞಾನ, ವಿಜ್ಞಾನದ ದೀವಿಗೆಯಾಗಿ ಸತ್ಕರ್ಮಗಳ ಆಚರಣೆಯಿಂದ ಐಹಿಕ ಸುಖಭೋಗಗಳು, ಜ್ಞಾನ ಸಂಪಾದನೆಯಿಂದ ಆನಂದ - ಬ್ರಹ್ಮಾನಂದ ಭೋಗವು ಲಭ್ಯವಾಗಲು ಕಾರಣವಾಯಿತು ಕಾಲ ಸರಿದಂತೆ ಅತ್ಯಂತ ಕ್ಲಿಷ್ಟವೂ ಅನವರತ ಸಾಧನ ಮಾರ್ಗವೂ ಅನಿವಾರ್ಯವಾಗಿ ಶಾಶ್ವತವಾದ ಸುಖಭೋಗವು ಜ್ಞಾನಿಗಳಿಗೆ ಮಾತ್ರ ಸೀಮಿತವಾಗಿ ಪಾಮರರಿಗೆ ಎಟುಕದಂತಾದುದನ್ನು ಕಂಡು ಕೊಂಡ ಋಷಿಗಣಗಳು ವೇದಸಾರವಾಗಿ ಉಪನಿಷತ್ತು ಮತ್ತು ಭಗವದ್ಗೀತಾದಿ ಸ್ಮೃತಿ ಗ್ರಂಥಗಳು ಸಾಂಖ್ಯ ಯೋಗಾದಿದರ್ಶನಗಳ ಮೂಲಕ ಪರೋಪಕಾರ ಮಾಡಿದರು. ಇವಗಳನ್ನೂ ಸಹ ಅರಗಿಸಿಕೊಳ್ಳಲು ಕ್ಲಿಷ್ಟತೆ ಕಂಡುಬಂದಾಗ ವ್ಯಾಸಾದಿ ಮುನಿಗಳ ಮೂಲಕವಾಗಿ ವೇದದಸಾರವನ್ನೇ ಪೂರ್ಣವಾಗಿ ತುಂಬಿದ, ಪಂಡಿತ ಪಾಮರರಾದಿಯಾಗಿ ಅನುಸರಿಸಲು ಯೋಗ್ಯವಾದ, ಅತ್ಯಂತ ಸುಲಭ ಸರಳವೂ ಆದ, ಉಪದೇಶಾತ್ಮಕರೂಪವಾದ ಇತಿಹಾಸ ಪುರಾಣಾದಿಗಳು ಅವಿರ್ಭವಿಸಿದವು. ವಿಶ್ವದಲ್ಲೇ ಅತ್ಯಂತ ಮಹತ್ವದಿಂದ ಕೂಡಿ ಬೃಹತ್ತಾದ ಅನ್ಯತಮದ ಗ್ರಂಥವಾಗಿ ೧೮ ಪರ್ವಗಳಾಗಿ ಮಹಾಭಾರತವು ಪ್ರಕಟಗೊಂಡರೆ, ಮಹಾಭಾರತದ ೧೮ ಪರ್ವಗಳಂತೆಯೇ ಅಷ್ಟಾದಶ ಪುರಾಣಗಳೂ ಸಹ ಲೋಕಕಲ್ಯಾಣಕ್ಕಾಗಿ ಉದಯವಾದವು. ವೈದಿಕವಾಙ್ಮಯದಲ್ಲಿ ಅತ್ಯಂತ ಪ್ರಾಶಸ್ತ್ಯವನ್ನು ಪಡೆದಿರುವ ಈ ಅಷ್ಟಾದಶಪುರಾಣಗಳು ಭಾರತೀಯ ಜನಜೀವನದ ಮೇಲೆಯೇ ಮಾತ್ರವಲ್ಲದೆ ಇಡೀ ವಿಶ್ವದ ಮೇಲೆ ವಿಶೇಷ ಪ್ರಭಾವ ಬೀರುವುದರೊಂದಿಗೆ ಸನ್ಮಾರ್ಗಪ್ರವರ್ತನೆಗೆ, ವಿಶ್ವಶಾಂತಿಗೆ ದಾರಿದೀಪವಾಗಿ ವಿಶ್ವಮಾನ್ಯವಾಯಿತು.

ಬಹುಭಾಷಾ ಜನರಿರುವ ನಮ್ಮ ಭಾರತದೇಶದಲ್ಲಿ ಇಂತಹ ಅನ್ಯತಮವೂ ಅಪೂರ್ವವೂ ಪರಮ ಪವಿತ್ರ್ಯವೂ ಆದ ಈ ಪುರಾಣಗಳ ಸವಿಯನ್ನು ಪ್ರತಿಯೊಬ್ಬ ಪಾಮರಜನರೂ ಉಣಲೋಸುಗ ಪ್ರಸಿದ್ಧವಾದ ಮತ್ತು ಪ್ರಮುಖವಾದ ಭಾರತೀಯ ಭಾಷೆಗಳಲ್ಲಿ ಭಾಷಾಂತರ ಪಡೆಯಿತು.

ಈ ವತಿಯಲ್ಲಿ ಮುಕ್ಕೋಟಿ ಕನ್ನಡಿಗರ ಶ್ರೇಯಸ್ಕಾಮಿಗಳಾಗಿ ಮೈಸೂರು ಸಂಸ್ಥಾನವನ್ನಾಳಿದ ಮಹಾರಾಜರು ಶ್ರೀ ಶ್ರೀ ಜಯಚಾಮರಾಜ ಒಡೆಯರ್ ಬಹಾದ್ದೂರ್‌ರವರು ಈ ಅಷ್ಟಾದಶಪುರಾಣಗಳನ್ನು ವಿದ್ವಜನರಿಂದ ಸಂಸ್ಕೃತ ದಿಂದ ಕನ್ನಡ ಕಸ್ತೂರಿ ಭಾಷೆಗೆ ಭಾಷಾಂತರಿಸಿ ಕನ್ನಡ ಜನತೆಯ ಉತ್ಥಾನಕ್ಕೆ ನಾಂದಿ ಮಾಡಿದರು.

ಆದರೆ ಪ್ರಕೃತದಲ್ಲಿ ಆ ಗ್ರಂಥಗಳು ಅಲಭ್ಯವಾಗಿರುವುದರಿಂದ, ಅಸ್ತಿಕ ಮಹೋದಯರು ಸಮಾಜ ಸೇವಾ ಧುರೀಣರು ಹಾಗು ಜನಹಿತ ಚಿಂತಕರು ಜನತೆಗೆ ಈ ಪುರಾಣ ಗ್ರಂಥಗಳ ಅನಿವಾರ್ಯತೆಯನ್ನು ಕಂಡುಕೊಂಡು ಭಕ್ತರ ನಂಜನ್ನು ಉಣುವ ಶ್ರೀ ನಂಜುಂಡೇಶ್ವರನ ಸನ್ನಿಧಿಗೆ ಬಂದು ಪುರಾಣಗ್ರಂಥಗಳ ಪ್ರಕಟಣೆ ಹಾಗೂ ಪ್ರಚಾರಕ್ಕೆ ಮುಂದಾಗಬೇಕೆಂದು ಕಡ್ಡಾಯ ಪಡಿಸಿದರು. ಈ ಮಹನೀಯರುಗಳ ಒತ್ತಾಯವು ಸಾಕ್ಷಾತ್ ಪಾರ್ವತೀ ಸಮೇತ ಪರಮೇಶ್ವರನ ಪ್ರೇರಣೆ ಹಾಗೂ ದಿವ್ಯಾಜ್ಞೆಯೆಂದು ಸ್ವೀಕರಿಸಿ ನಿಷ್ಕಾಮ ಕರ್ಮದಲ್ಲಿ ನಿರತರಾಗಿರುವ ಅಸ್ತಿಕಸಮಾಜದಲ್ಲಿ ಮೇಘಾವೃತ ತಾರೆಯಂತೆ ಕಂಗೊಳಿಸುತ್ತಿರುವ ಮಹನೀಯರನ್ನೊಳಗೊಂಡ ಸದಸ್ಯತ್ವದೊಂದಿಗೆ ಈ ಮಹತ್ಕಾರ್ಯದ ಪೂರ್ಣತೆಯನ್ನು ಪಡೆಯಲು ೧೯೮೩ ರಲ್ಲಿ ಪುರಾಣ ಸಮುಚ್ಚಯ ಪ್ರಕಾಶನ ವೆಂಬ ಸಂಸ್ಥೆಯು ಉದಯವಾಯಿತು. ಈ ಸಂಸ್ಥೆಯು ಜನತೆಯಲ್ಲಿ ಜನಾರ್ದನನ ಕಾಣಬೇಕೆಂಬ ಏಕೈಕ ಉದ್ದೇಶದಿಂದ ಯಾವುದೇ ಪ್ರತಿಫಲಾ ಅಪೇಕ್ಷೆಯಿಲ್ಲದೆ ಅನವರತ ದುಡಿಮೆಯ ಫಲವಾಗಿ ಗಣೇಶ ಪುರಾಣ ೮ ಭಾಗ, ಶಿವ ಪುರಾಣ ಒಂದನೇ ಭಾಗ, ಸಂಕ್ಷಿಪ್ತ ಶಂಕರ ವಿಜಯ, ಶಿವ ಸಹಸ್ರನಾಮ ಸ್ತೋತ್ರ ಶ್ರೀ ದೇವೀ ಸ್ತೋತ್ರ ರತ್ನಮಾಲ ಮುಂತಾದ ಗ್ರಂಥಗಳನ್ನು ನಮ್ಮ ಪ್ರಕಾಶನದ ವತಿಯಿಂದ ಪ್ರಕಟಗೊಂಡಿದೆ ಎಂದು ತಿಳಿಸಲು ಹರ್ಷಿಸುತ್ತೇವೆ.

ನಾಡಿನ ಪ್ರಸಿದ್ಧ ವೈದಿಕ ಸಾಹಿತಿಗಳೂ ಶೃಂಗೇರಿ ಮಹಾಸಂಸ್ಥಾನದ

ಜಗದ್ಗುರುಗಳು ಶ್ರೀ ಶ್ರೀ ಚಂದ್ರಶೇಖರ ಭಾರತೀ ಮಹಾಸ್ವಾಮಿಗಳ ಪರಮ ಶಿಷ್ಯರೂ ಆಸ್ಥಾನ ಪಂಡಿತರೂ ಆದ ವೇ.ಬ್ರ.ಶ್ರೀ. ಶೃಂಗಗಿರಿ ನರಸಿಂಹಶರ್ಮರಿಂದ ಶ್ರೀ ಗಣೇಶ ಪುರಾಣದ ೮ ಭಾಗ ಮತ್ತು ಸಂಕ್ಷಿಪ್ತ ಶಂಕರ ವಿಜಯ ಎರಡು ಗ್ರಂಥಗಳು ಸರಳ ಕನ್ನಡಕ್ಕೆ ಅನುವಾದಿಸಲ್ಪಟ್ಟು ನಮ್ಮ ಸಂಸ್ಥೆಯ ವತಿಯಿಂದ ಪ್ರಕಾಶನಕ್ಕೆ ಬಂದಿದೆ. ಪ್ರಕಾಂಡ ವೇದಾಂತ ಶಿರೋಮಣಿಗಳಾದ ವೇ.ಬ್ರ.ಶ್ರೀ. ನವೀನಂ ವೆಂಕಟೇಶ ಶಾಸ್ತ್ರಿಗಳವರ ಚರಣದಡಿದಾವರೆಗಳಲ್ಲಿ ವೇದಾಂತ ಶಾಸ್ತ್ರಾಭ್ಯಾಸ ಮಾಡಿದ ಶರ್ಮರು ಶ್ರೀ ಮಚ್ಛಂಕರ ಭಗವತ್ಪಾದರ ವೇದಾಂತ ತತ್ವಗಳು ಪುರಾಣಗಳು ಮತ್ತಿತರ ಗ್ರಂಥಗಳನ್ನು ಕನ್ನಡಕ್ಕೆ ಅನುವಾದಿಸಿ ಕನ್ನಡ ಜನತೆಗೆ ಮಹೋಪಕಾರ ಮಾಡಿರುತ್ತಾರೆ.

ಶ್ರೀ ಚಾಮುಂಡೇಶ್ವರಿ ದೇವಸ್ಥಾನದ ಪ್ರಧಾನ ಆಗಮೀಕರು ಆಗಮಾಚಾರ್ಯರಾದ ವೇ.ಬ್ರಂ.ಶ್ರೀ.ದಿ.ನಾರಾಯಣದೀಕ್ಷಿತರ ಸಂಪಾದಕತ್ವದಲ್ಲಿ ದೊರೆತ ಶ್ರೀ ಶಿವ ಸಹಸ್ರನಾಮ ಸ್ತೋತ್ರವು ನಮ್ಮ ಸಂಸ್ಥೆಯ ವತಿಯಿಂದ ಪ್ರಕಟಗೊಂಡಿದೆ.

ಲಲಿತೋಪಾಖ್ಯಾನದ ಪೂರ್ವೋತ್ತರ ಭಾಗಗಳಾದಿಯಾಗಿ ಹಲವಾರು ಗ್ರಂಥಗಳನ್ನು ಕನ್ನಡ ಭಾಷೆಗೆ ಅನುವಾದಿಸಿ ಪ್ರಕಾಶನಕ್ಕೆ ತಂದಿರುವ ಪರಮ ಪೂಜ್ಯರಾದ ಶ್ರೀ ಶ್ರೀ ಬಾಲಕೃಷ್ಣಾನಂದ ಸರಸ್ವತಿ ಸ್ವಾಮಿಗಳ ಮಾರ್ಗದರ್ಶದಲ್ಲಿ ಹಾಗೂ ಅವರ ಅನ್ಯತರೂ ಅನುಗ್ರಹದಿಂದ ಶ್ರೀ ದೇವೀ ಸ್ತೋತ್ರರತ್ನಮಾಲಾ ಗ್ರಂಥವು ನಮ್ಮ ಸಂಸ್ಥೆಯಿಂದ ಪ್ರಕಟಗೊಂಡು ಪ್ರಚಂಡವಾದ ಜನಾದರಣೆಯನ್ನು ಕಂಡಿದೆ.

ಈ ಪ್ರಕೃತ ಶಿವಮಹಾಪುರಾಣದ ಮೊದಲಭಾಗವನ್ನು ಆದಿಚುಂಚನಗಿರಿ ಸಂಸ್ಕೃತ ಪಾಠಶಾಲೆಯ ಮಹಾಶೈವಾಗಮ ವಿಭಾಗದ ಪ್ರಾಧ್ಯಾಪಕರಾಗಿರುವ ವೇ.ಬ್ರಂ.ಶೀ. ವಿದ್ವಾನ್. ಮನೋಹರ ದೀಕ್ಷಿತರು ಸುಂದರ ಕನ್ನಡ ಭಾಷೆಗೆ ಅನುವಾದಿಸಿ ಉಪಕರಿಸಿದ್ದಾರೆ.

ಮಹಾರಾಜ ಸಂಸ್ಕೃತ ಪಾಠಶಾಲೆಯಲ್ಲಿ ಶೈವಾಗಮ ಜ್ಯೋತಿಷ್ಯ ಅಲಂಕಾರ ಶಾಸ್ತ್ರಾಧೀತರಾದುದರೊಂದಿಗೆ ಸಂಸ್ಕೃತದಲ್ಲಿ ಸ್ನಾತಕೋತ್ತರ ಪದವಿಯನ್ನು ಪಡೆದಿರುವ ಶ್ರೀ ದೀಕ್ಷಿತರು ಸಾತ್ವೀಕ ಸಜ್ಜನ ಸಾಕಾರರೂ, ಸರ್ವ

ಸುಲಭರೂ ಆಗಿ ಪ್ರಕಾಶಿಸುತ್ತಿದ್ದಾರೆ.

ಮೇಲ್ಕಂಡ ಗ್ರಂಥಗಳ ಪ್ರಕಟಣೆಗೆ ತಮ್ಮ ಅಮೋಘ ಕೊಡುಗೆ, ಕಾಣಿಕೆ ನೀಡಿರುವ ಮೇಲ್ಕಂಡ ಮಹನೀಯರೆಲ್ಲರಿಗೂ ನಮ್ಮ ಸಂಸ್ಥೆಯವತಿಯಿಂದ ಅತ್ಯಂತ ಕೃತಜ್ಞತಾಂಜಲಿಯನ್ನು ಈ ಮೂಲಕ ಸಲ್ಲಿಸುತ್ತೇವೆ.

ಪ್ರಸ್ತುತ ಶ್ರೀ ಶಿವಮಹಾ ಪುರಾಣದ ಬಗ್ಗೆ ಕೆಲವು ವಿಚಾರಗಳನ್ನು ಸಂಕ್ಷಿಪ್ತಲಾಗಿ ತಮ್ಮ ಮುಂದಿಡುವುದು ನಮ್ಮ ಅದ್ಯ ಕರ್ತವ್ಯವೆಂದು ಭಾವಿಸುತ್ತೇವೆ.

ಈ ಮಹಾಪುರಾಣದಲ್ಲಿ ಪ್ರತಿಪಾದಿತವಾಗಿರುವ ವಿಷಯಗಳನ್ನು ಕಥಾಭಾಗ, ಕರ್ಮ ಅಥವ ಉಪಾಸನಾ ಭಾಗ, ತತ್ವನಿರೂಪಣಾ ಭಾಗ ಎಂದು ೩ ವಿಭಾಗಗಳಾಗಿ ವಿಭಾಗಿಸಬಹುದು. ಮಹರ್ಷಿ ಪ್ರಣೀತವಾದ ಈ ಮಹಾಗ್ರಂಥವು ಏಳು ಸಂಹಿತೆಗಳಾಗಿ ವಿಭಾಗಿಸಲ್ಪಟ್ಟು ೨೪ ಸಹಸ್ರಗ್ರಂಥ ಪರಿಮಾಣವುಳ್ಳದ್ದಾಗಿದೆ ಮೊದಲನೆಯದಾದ ವಿದ್ಯೇಶ್ವರ ಸಂಹಿತೆಯಲ್ಲಿ ಶಿವರಾಧನ ಕ್ರಮವೂ, ೨ನೇ ರುದ್ರ ಸಂಹಿತೆಯಲ್ಲಿ ಶಿವಕಥಾ ನಿರೂಪಣೆಯೂ ೩ ನೇ ಶತರುದ್ರಸಂಹಿತೆಯಲ್ಲಿ ಲೋಕೋಪಕಾರಕ್ಕಾಗಿ ಪರಮೇಶ್ವರನು ಕೈಗೊಂಡ ೧೦೦ ಅವತಾರಗಳ ವರ್ಣನೆಯೂ ನಾಲ್ಕನೆಯು ಕೋಟಿರುದ್ರ ಸಂಹಿತೆಯಲ್ಲಿ ಪ್ರಪಂಚದಲ್ಲಿರುವ ಶೈವ ಸಂಬಂಧವಾದ ತೀರ್ಥ ಕ್ಷೇತ್ರ ಮಹಾತ್ಮೆಯ ವರ್ಣನೆಯೂ ಐದನೆಯ ಉಮಾ ಸಂಹಿತೆಯಲ್ಲಿ ಪುಣ್ಯ ಪಾಪಗಳ ಫಲರೂಪವಾದ ಸ್ವರ್ಗ ನರಕಾದಿಗಳ ವಿವರಣೆಯೂ ಆರನೆಯ ಮತ್ತು ಏಳನೆಯ ಸಂಹಿತೆಯಲ್ಲಿ ಕೈಲಾಸ ಮತ್ತು ವಾಯುವ್ಯ ಸಂಹಿತೆಗಳಲ್ಲಿ ಪ್ರಣವ ಸ್ವರೂಪ ತತ್ವನ್ಯಾಸಾದಿ ಮಹಾಕಾವ್ಯಗಳ ನಿರೂಪಣೆಯು ಶ್ರೀ ಮಚ್ಛಂಕರ ಭಗವತ್ಪಾದರು ಪ್ರಾಮಾಣ್ಯವಾಗಿ ಪಡೆದಿರುವ ದಶೋಪನಿಷತ್ತುಗಳ ವಾಕ್ಯಗಳ ಮೂಲಕ ವಿವರಿಸಲ್ಪಟ್ಟಿದೆ. ಶ್ರೀ ಮಚ್ಛಂಕರ ಭಗವತ್ಪಾದರೂ ಕೂಡ ತಮ್ಮ ಸೂತ್ರ ಭಾಷ್ಯದಲ್ಲಿ ಈ ಪುರಾಣದ ಅನೇಕ ಶ್ಲೋಕಗಳನ್ನೂ ವಾಕ್ಯಗಳನ್ನೂ ಪ್ರಾಮಾಣ್ಯವಾಗಿ ಉದಾಹರಿಸಿರುತ್ತಾರೆ. ಸತ್ಕಾರ್ಮಾನುಷ್ಠಾನ ವೇದಾಂತ ವಿಚಾರವನ್ನು ತಿಳಿದುಕೊಳ್ಳಲು ಅಪೇಕ್ಷೆಯುಳ್ಳವರಿಗೆ ಇದಕ್ಕಿಂತ ಉತ್ತಮವಾದ ಗ್ರಂಥ ಬೇರೊಂದಿಲ್ಲ. ಆದ ಕಾರಣ ಈ ಪುರಾಣದಲ್ಲಿ

ಪ್ರತಿಪಾದಿಸಲ್ಪಟ್ಟಿರುವ ವಿಷಯಗಳು ಎಷ್ಟು ಮಹತ್ವಪೂರಿತ ವಾದವುಗಳೆಂದು ಉಲ್ಲೇಖಿಸುವುದು ಸೂರ್ಯನಿಗೆ ಬೆಳಕು ತೋರಿದಂತಾಗುವುದು.

ಈ ಗ್ರಂಥದ ಪ್ರಕಾಶನಕ್ಕೆ ಶ್ರೀ ತಿರುಪತಿ ತಿರುಮಲ ದೇವಸ್ಥಾನವು ತಮ್ಮ ಧಾರ್ಮಿಕ ಪುಸ್ತಕ ಪ್ರಕಾಶನದ ವತಿಯಿಂದ ಧನ ಸಹಾಯ ನೀಡಿ ಉಪಕರಿಸಿರುತ್ತಾರೆ. ತಿರುಪತಿ ದೇವಸ್ಥಾನದ ಕಾರ್ಯನಿರ್ವಾಹಕರಿಗೂ ಪ್ರಕಾಶನ ಸಮಿತಿ ಆಡಳಿತ ವರ್ಗಕ್ಕು ನಮ್ಮ ಹೃತ್ಪೂರ್ವಕ ಕೃತಜ್ಞತೆಗಳನ್ನು ಅರ್ಪಿಸುತ್ತೇವೆ . ಹಲವಾರು ಸಂತರ ಮಹಾತ್ಮರ ಆಚಾರ್ಯಶ್ರೇಷ್ಟರ ಜೀವನ ಚರಿತ್ರೆಯನ್ನು ಬರೆದು ಆಧ್ಯಾತ್ಮಿಕ ಸಾಹಿತ್ಯವನ್ನು ಶ್ರೀಮಂತಗೊಳಿಸಿರುವ ಪೂಜ್ಯರಾದ ಹುರಗಲವಾಡಿ ವೇ.ಬ್ರಂ.ಶ್ರೀ. ಲಕ್ಷ್ಮಿನರಸಿಂಹಶಾಸ್ತ್ರಿಗಳವರು ಮತ್ತು ಅನೇಕ ಧಾರ್ಮಿಕ ಗ್ರಂಥಗಳನ್ನು ಬರೆದು ಅನುವಾದಿಸಿ ಪ್ರಕಾಶಪಡಿಸಿರುವ ನಮ್ಮ ಆತ್ಮೀಯ ಮಿತ್ರರು ಪಾಂಚರಾತ್ರಾಗಮ ಪ್ರವೀಣ ವಿದ್ವಾನ್. ವೇ.ಬ್ರಂ.ಶ್ರೀ. ಕಸ್ತೂರಿರಂಗರಾಜನ್ ಈ ಗ್ರಂಥದ ಮುದ್ರಣ ಕಾರ್ಯದಲ್ಲಿ ತಪ್ಪುಶೋಧನೆಯೊಂದಿಗೆ ಪರಿಷ್ಕರಿಸಿ ಉಪಕರಿಸಿರುತ್ತಾರೆ. ಈ ಉಭಯರಿಗೂ ಅಂಜಲಿಬದ್ಧ ಪ್ರಣಾಮಗಳನ್ನು ತಿಳಿಸುತ್ತೇವೆ. ಈ ಹೊತ್ತಿಗೆಯ ಪ್ರಕಾಶನ ಕಾರ್ಯದಲ್ಲಿ ಅತ್ಯಂತ ಶ್ರದ್ಧಾಭಕ್ತಿಯಿಂದ ಡಿ.ಟಿ.ಪಿ. ಕಾರ್ಯವನ್ನು ಅಂದವಾಗಿ ಮಾಡಿಕೊಟ್ಟಿರುವ ಸುಷ್ಮಾಗ್ರಾಫಿಕ್ಸ್ ಕಂಪ್ಯೂಟರ್ ಮಾಲೀಕರಾದ ಚಿ.ನಾಗರಾಜುರವರಿಗೆ ಅನಂತ ಧನ್ಯವಾದಗಳು.

ಮುದ್ರಿತವಾಗಿರುವ ಈ ಗ್ರಂಥದಲ್ಲಿ ಅನಿವಾರ್ಯವಾಗಿ ಸಂಭವಿಸಿರಬಹುದಾದ ಲೋಪದೋಷಗಳನ್ನು ಸಹೃದಯರು ಸಮೀಕರಿಸಿಕೊಳ್ಳುವರೆಂದು ನಂಬಿರುತ್ತೇವೆ.

ಮತ್ತೂ ಹಲವಾರು ಗ್ರಂಥಗಳ ಪ್ರಕಾಶನ ಕಾರ್ಯದಲ್ಲಿ ಮುಂದುವರೆದಿರುವ ನಮ್ಮ ಪ್ರಕಾಶನದ ಸಮಿತಿಗೆ ಮಹಾದಾನಿಗಳೂ ಆಸ್ತೀಕ ಮಹನೀಯರೂ ತನು ಮನ ಧನದ ಸಹಕಾರನೀಡಿ ಉಪಕರಿಸಲು ಈ ಮೂಲಕ ಪ್ರಾರ್ಥಿಸುತ್ತೇವೆ.

ನಮ್ಮ ಮುಂದಿನ ಪ್ರಕಾಶನ ಕಾರ್ಯಗಳನ್ನು ಯಶಸ್ವಿಯಾಗಿ ನೆರವೇರುವಂತೆ ಅನುಗ್ರಹಿಸಲು ತ್ರಿಕಾಲದಲ್ಲಿಯೂ ಅಂತರಂಗದಲ್ಲಿ

ಬೇಡುತ್ತಾ ಅಖಿಲ ಜಗದೊಡೆಯ ಪಾರ್ವತಿ ಸಮೇತ ಶ್ರೀ ಶ್ರೀಕಂಠೇಶ್ವರಸ್ವಾಮಿ ದಿವ್ಯಚರಣ ಸನ್ನಿಧಾನದಲ್ಲಿ ಈ ಸಾಹಿತ್ಯ ಕುಸುಮವನ್ನು ಅರ್ಪಿಸುತ್ತಿದ್ದೇವೆ.

ಈಶ್ವರನಾಮ ಸಂವತ್ಸರ
ಕಾರ್ತೀಕ ಶುದ್ಧ ದಶಮಿ

ಇಂತಿ ಸಜ್ಜನ ವಿಧೇಯ
*ಆರ್.ನಾಗರಾಜ ದೀಕ್ಷಿತರು*
ನಿರ್ವಾಹಕರು
ಪುರಾಣ ಸಮುಚ್ಚಯ ಪ್ರಕಾಶನ
ನಂಜನಗೂಡು
ಕರ್ನಾಟಕ ರಾಜ್ಯ.

ಶ್ರೀ

ಕಲ್ಯಾಣಾದ್ಭುತಗಾತ್ರಾಯ ಕಾಮಿತಾರ್ಥಪ್ರದಾಯಿನೇ।
ಶ್ರೀಮದ್ವೆಂಕಟನಾಥಾಯ ಶ್ರೀನಿವಾಸಾಯ ಮಂಗಳಮ್॥



THIS BOOK IS PUBLISHED WITH THE FINANCIAL ASSISTANCE OF TIRUMULA TIRUPATHI DEVASTHANAMS UNDER THEIR SCHEME "AID TO PUBLISH RELIGIOUS BOOKS."

# ವಿಷಯಾನುಕ್ರಮಣಿಕೆ

## ಶ್ರೀ ಶಿವಪುರಾಣಮಹಾತ್ಮ್ಯಂ

### ಮೊದಲನೆ ಅಧ್ಯಾಯ

ಕಲಿಯುಗದಲ್ಲಿ ಜನರು ಸದ್ಗತಿಯನ್ನು ಪಡೆಯಲು ಸಾಧನಗಳಾವುವೆಂದು ಶೌನಕನು ಸೂತಮುನಿಯನ್ನು ಪ್ರಶ್ನಿಸುವನು ಸೂತನು ಶಿವಪುರಾಣದ ಮಹಿಮೆಯನ್ನು ವಿವರಿಸುವುದು. ಶಿವಪುರಾಣವನ್ನು ಶ್ರವಣಮಾಡಿದರೆ ಲಭಿಸುವ ಫಲಾದಿಗಳು. ಶಿವಪುರಾಣದಲ್ಲಿರುವ ಏಳು ಸಂಹಿತೆಗಳ ನಾಮಾದಿವಿವರಣೆ. ಮೋಕ್ಷಾಭಿಲಾಷಿಗಳಿಗೆ ಶಿವಪುರಾಣಶ್ರವಣವೇ ಉತ್ತಮವಾದ ಸಾಧನವು

### ಎರಡನೆಯ ಅಧ್ಯಾಯ

ಶಿವಪುರಾಣಶ್ರವಣದಿಂದ ಯಾರಾರು ಸದ್ಗತಿಯನ್ನು ಹೊಂದಿರುವರೆಂದು ಶೌನಕಋಷಿಯ ಪ್ರಶ್ನೆ. ಸೂತನು ದೇವರಾಜನೆಂಬ ಬ್ರಾಹ್ಮಣನ ಉಪಾಖ್ಯಾನವನ್ನು ವಿವರಿಸುವುದು. ದೇವರಾಜನು ದುರಾಚಾರಿಯಾಗಿದ್ದರೂ ಶಿವಪುರಾಣಶ್ರವಣದಿಂದ ಅವನಿಗೆ ಕೈಲಾಸಪ್ರಾಪ್ತಿಯು.

### ಮೂರನೆಯ ಅಧ್ಯಾಯ

ಬಿಂದುಗ ಮತ್ತು ಇವನ ಪತ್ನಿ ಚಂಚುಲೆಯ ವೃತ್ತಾಂತವು ಚಂಚುಲೆಯು ತನ್ನ ಪಾಪಕ್ಕಾಗಿ ಪಶ್ಚಾತ್ತಾಪಪಟ್ಟು ದೇವಾಲಯದಲ್ಲಿ ಶಿವಕಥೆಯನ್ನು ಹೇಳುತ್ತಿರುವ ಬ್ರಾಹ್ಮಣನನ್ನು ಉದ್ಧಾರ ಮಾಡೆಂದು ಪ್ರಾರ್ಥಿಸುವುದು.

### ನಾಲ್ಕನೆಯ ಅಧ್ಯಾಯ

ಚಂಚುಲೆಗೆ ಬ್ರಾಹ್ಮಣನ ಉಪದೇಶವು. ಶಿವಕಥಾಶ್ರವಣದಿಂದ ಚಂಚುಲೆಗೆ ಸದ್ಗತಿಪ್ರಾಪ್ತಿಯು.

## ಐದನೆಯ ಅಧ್ಯಾಯ

ಚಂಚುಲೆಯು ತನ್ನ ಪತಿಯಾದ ಬಿಂದುಗನಿಗೆ ಸದ್ಗತಿಯುಂಟಾಗುವಂತೆ ಮಾಡಬೇಕೆಂದು ಪಾರ್ವತಿಯನ್ನು ಪ್ರಾರ್ಥಿಸುವುದು.

ಪಾರ್ವತಿಯು ತುಂಬುರು ಎಂಬ ಗಂಧರ್ವನನ್ನು ಪಿಶಾಚಜನ್ಮ ತಾಳಿದ ಬಿಂದುಗಳ ಬಳಿಗೆ ಕಳುಹಿಸಿ ಅವನಿಗೆ ಶಿವಪುರಾಣ ಶ್ರವಣ ಮಾಡಿಸುವುದು. ಶಿವಪುರಾಣಶ್ರವಣ ಫಲದಿಂದ ಬಿಂದುಗನಿಗೆ ಸದ್ಗತಿ ಪ್ರಾಪ್ತಿಯು.

## ಆರನೆಯ ಅಧ್ಯಾಯ

ಶಿವಪುರಾಣಶ್ರವಣವಿಧಿ ನಿರೂಪಣೆ

## ಏಳನೆಯ ಅಧ್ಯಾಯ

ಶಿವಪುರಾಣಶ್ರವಣದಲ್ಲಿ ಪುರಾಣ ಹೇಳುವವನು, ಕೇಳುವವರು ಅನುಸರಿಸಬೇಕಾದ ವಿಧಿನಿಯಮನಿಷೇಧಾದಿಗಳು. ಪುಸ್ತಕಪೂಜೆ, ಆಚಾರ್ಯಪೂಜೆ, ಶಿವಪುರಾಣಶ್ರವಣಾನಂತರದಲ್ಲಿ ಶಿವಪ್ರೀತಿಗಾಗಿ ಆಚರಿಸಬೇಕಾದ ವ್ರತಹೋಮದಾನಾದಿಗಳ ವಿವರಣೆ.

# ಶ್ರೀಶಿವಪುರಾಣದ ವಿದ್ಯೇಶ್ವರ ಸಂಹಿತಾ

## ಮೊದಲನೆ ಅಧ್ಯಾಯ

ಋಷಿಗಳು ಮಾಡುವ ಯಜ್ಞಾವಲೋಕನಾರ್ಥವಾಗಿ ಸೂತಮುನಿಯು ನೈಮಿಷಾರಣ್ಯಕ್ಕೆ ಬರುವುದು. ಕಲಿಯುಗದಲ್ಲಿ ವರ್ಣಾಶ್ರಮ ಧರ್ಮರಹಿತರಾದ ಜನರಿಗೆ ಶ್ರೇಯಸ್ಸಾಧನಯಾವುದೆಂದು ಋಷಿಗಳು ಸೂತನನ್ನು ಪ್ರಶ್ನಿಸುವುದು.

## ಎರಡನೆಯ ಅಧ್ಯಾಯ

ಕಲಿಯುಗದಲ್ಲಿ ಸಮಸ್ತ ಪಾಪಗಳನ್ನು ಧ್ವಂಸಮಾಡುವ ಸಾಮರ್ಥ್ಯವು ಶಿವಪುರಾಣಕ್ಕೆ ಮಾತ್ರ ಇರುವುದು. ಶಿವಪುರಾಣದಲ್ಲಿರುವ ಸಂಹಿತೆಗಳ ಸಂಖ್ಯೆ ಮತ್ತು ವಿವರಣೆ.

## ಮೂರನೆಯ ಅಧ್ಯಾಯ

ಋಷಿಗಳಲ್ಲಿ ಸಾಧ್ಯ ಸಾಧನಸಾಧಕವಿಚಾರವಾಗಿ ಪರಸ್ಪರವಾದ ವಿವಾದವು. ಬ್ರಹ್ಮನು ಅವರ ಸಂದೇಹಗಳನ್ನು ಪರಿಹರಿಸುವುದಕ್ಕಾಗಿ ಸಧ್ಯ ಸಾಧನ ವಿಚಾರವನ್ನು ವಿವರಿಸುವುದು.

## ನಾಲ್ಕನೆಯ ಅಧ್ಯಾಯ

ಸನತ್ಕುಮಾರನು ವ್ಯಾಸಮುನಿಗೆ ಶಿವನ ಶ್ರವಣಕೀರ್ತನಮನನಗಳು ಮುಕ್ತಿಸಾಧನವೆಂದು ಉಪದೇಶಿಸುವುದು.

## ಐದನೆಯ ಅಧ್ಯಾಯ

ಸಾಧನತ್ರಯಗಳನ್ನು ಅಭ್ಯಸಿಸಲು ಅಶಕ್ತನಾದವನಿಗೆ ಶಿವಲಿಂಗ ಮತ್ತು ವಿಗ್ರಹಗಳ ಪೂಜೆಯೇ ಮುಕ್ತಿಸಾಧನವು. ಲಿಂಗಪೂಜಾ ವಿಧಾನದಲ್ಲಿ ನಂದಿಕೇಶ್ವರನು ಹೇಳುವ ಕಾರಣನಿರೂಪಣ.

## ಆರನೆಯ ಅಧ್ಯಾಯ

ಪರಸ್ಪರಾಭಿಮಾನದಿಂದ ಬ್ರಹ್ಮವಿಷ್ಣುಗಳು ಯುದ್ಧಮಾಡುತ್ತಿರುವಾಗ ಒಬ್ಬರ ಮೇಲೊಬ್ಬರು ಮಾಹೇಶ್ವರ ಪಾಶುಪತಾಸ್ತ್ರಗಳನ್ನು ಪ್ರಯೋಗಿಸಲು ಅದನ್ನು ನೋಡಿ ಭೀತಿಗೊಂಡ ದೇವತೆಗಳು ಕೈಲಾಸಕ್ಕೆ ಹೋಗುವುದು.

## ಏಳನೆಯ ಅಧ್ಯಾಯ

ಕೈಲಾಸಕ್ಕೆ ಹೋದ ದೇವತೆಗಳು ವಿಷ್ಣುಬ್ರಹ್ಮರ ಯುದ್ಧವಿಚಾರವನ್ನು ಪರಮೇಶ್ವರನಿಗೆ ವಿಜ್ಞಾಪಿಸುವುದು. ಪರಶಿವನು ವಿಷ್ಣುಬ್ರಹ್ಮರ ಮಧ್ಯದಲ್ಲಿ ಜ್ವಾಲಾಸ್ತಂಭರೂಪವಾಗಿ ಅವಿರ್ಭವಿಸುವುದು. ಸ್ತಂಭದ ಅದ್ಯಂತಗಳನ್ನು ಪರೀಕ್ಷಿಸಬೇಕೆಂದು ಬ್ರಹ್ಮವಿಷ್ಣುಗಳು ಬಯಸಿ ಅದಕ್ಕಾಗಿ ಪ್ರಯತ್ನಿಸುವುದು. ಮೂಲವನ್ನು ನೋಡಲು ಹೊರಟ ವಿಷ್ಣುವು ಕೃತಕೃತ್ಯನಾಗದೆ ಹಿಂತಿರುಗಲು, ಬ್ರಹ್ಮನು ಸಹ ಅಗ್ರಭಾಗವನ್ನು ನೋಡಲು ಎಷ್ಟು ಸಹಸ್ರ ವರ್ಷಗಳು ಪ್ರಯತ್ನಪಟ್ಟರೂ ಸಾಧ್ಯವಾಗದೆ, ಶಿವಶಿರಸ್ಸಿನಿಂದ ಕೆಳಕ್ಕೆ ಬೀಳುತ್ತಲಿರುವ ಕೇತಕಿಪುಷ್ಪವನ್ನು ಕಂಡು ಅದರಿಂದ ವಿಷ್ಣುವಿನ ಎದುರಿಗೆ ಸುಳ್ಳುಸಾಕ್ಷಿ ಹೇಳಿಸುವುದು. ಶಿವನು ವಿಷ್ಣುವಿನ ಸತ್ಯತೆಗೆ ಮೆಚ್ಚಿ ಅವನಿಗೆ ತನ್ನಂತೆಯೇ ಪೂಜಾದಿಗಳನ್ನು ಜನರು ಮಾಡವಂತೆ ಅನುಗ್ರಹಿಸುವುದು.

## ಎಂಟನೆಯ ಅಧ್ಯಾಯ

ಶಿವಜ್ಞೆಯಿಂದ ಉತ್ಪನ್ನನಾದ ಭೈರವನು ಬ್ರಹ್ಮನನ್ನು ವಧಿಸಲು ಪ್ರವೃತ್ತನಾಗಲು, ವಿಷ್ಣುವಿನ ಪ್ರಾರ್ಥನೆಯನ್ನು ಮನ್ನಿಸಿ ಶಿವನು ಯಜ್ಞಗಳಲ್ಲದೆ ಇತರ ದೇವಾಲಯಾದಿಗಳಲ್ಲಿ ಪೂಜೆಗೆ ಅಯೋಗ್ಯನಾಗೆಂದು ಬ್ರಹ್ಮನಿಗೆ ಶಾಪವನ್ನು ಕೊಟ್ಟು, ಕೇತಕೀಪುಷ್ಪಕ್ಕು ಶಾಪಾನುಗ್ರಹಗಳನ್ನು ಅನುಗ್ರಹಿಸುವುದು.

## ಒಂಭತ್ತನೆಯ ಅಧ್ಯಾಯ

ವಿಷ್ಣುಬ್ರಹ್ಮರು ಶಿವನನ್ನು ಭಕ್ತಿಯಿಂದ ಪೂಜಿಸುವುದು. ಅವರು ಪೂಜಿಸಿದ ದಿನವು ಶಿವರಾತ್ರಿಯೆಂದು ಪ್ರಸಿದ್ಧವಾಗಿ ಜನರಿಗೆ ಮಹಾಫಲವನ್ನುಂಟುಮಾಡಲೆಂದು ಪರಮೇಶ್ವರನು ಅನುಗ್ರಹಿಸುವುದು.

## ಹತ್ತನೆಯ ಅಧ್ಯಾಯ

ಪರಶಿವನು ವಿಷ್ಣುಬ್ರಹ್ಮರಿಗೆ ಪಂಚಕೃತ್ಯಸ್ವರೂಪವನ್ನು ವಿವರಿಸಿ, ಓಂಕಾರಮಂತ್ರೋಪದೇಶವನ್ನು ಮಾಡಿ ಅಂತರ್ಧಾನವನ್ನೈಯುವುದು.

## ಹನ್ನೊಂದನೆಯ ಅಧ್ಯಾಯ

ಶಿವಲಿಂಗಸ್ಥಾಪನ, ಪೂಜನ, ದಾನ, ಪ್ರಣವಜಪವಿಧಾನ ಇವುಗಳ ವಿವರಣೆಯು.

## ಹನ್ನೆರಡನೆಯ ಅಧ್ಯಾಯ

ಶಿವಕ್ಷೇತ್ರ ವರ್ಣನೆ

## ಹದಿಮೂರನೆಯ ಅಧ್ಯಾಯ

ಸದಾಚಾರವರ್ಣನೆ

## ಹದಿನಾಲ್ಕನೆಯ ಅಧ್ಯಾಯ

ಅಗ್ನಿಯಜ್ಞಾದಿ ವರ್ಣನೆ

## ಹದಿನೈದನೆಯ ಅಧ್ಯಾಯ

ದೇವಯಜ್ಞಾದಿಗಳಲ್ಲಿ ದೇಶಕಾಲಪಾತ್ರಾದಿಗಳ ನಿರೂಪಣೆ

## ಹದಿನಾರನೆಯ ಅಧ್ಯಾಯ

ಪಾರ್ಥಿವಪೂಜಾ ವಿಧಾನ. ಪಾರ್ಥಿವಪೂಜಾಫಲ ಪ್ರಾಪ್ತಿ

||ಶ್ರೀ||

ಶ್ರೀ ಗಣೇಶ ಶಾರದಾ ಗುರುಭ್ಯೋನಮಃ

ಶ್ರೀ ಪ್ರಸನ್ನ ಪಾರ್ವತಾಂಬಾ ಸಮೇತ ಶ್ರೀಶ್ರೀಕಂಠೇಶ್ವರ ಸ್ವಾಮಿ ಪ್ರಸನ್ನ

# ಸ್ಕಾಂದ ಪುರಾಣಾಂತರ್ಗತಂ

# ॥ಶ್ರೀ ಶಿವಪುರಾಣಮಹಾತ್ಮ್ಯಂ ॥

||ಶ್ರೀ ಶೌನಕ ಉವಾಚ||

**ಹೇ ಹೇ ಸೂತ ಮಹಾಪ್ರಾಜ್ಞಸರ್ವಸಿದ್ಧಾಂತವಿತ್ಪ್ರಭೋ**

**ಆಖ್ಯಾಹಿ ಮೇ ಕಥಾಸಾರಂ ಪುರಾಣಾನಾಂ ವಿಶೇಷತಃ ||೧||**

ಶ್ರೀ ಶೌನಕ ಮಹರ್ಷಿಗಳು ಹೇಳುತ್ತಾರೆ

೧ ಶೌನಕ ಮಹರ್ಷಿಗಳು ಸೂತ ಪುರಾಣಿಕರನ್ನು ಪ್ರಶ್ನೆ ಮಾಡುತ್ತಾರೆ.

ಎಲೈ ಸೂತನೇ ನೀನು ಮಹಾಪ್ರಾಜ್ಞನು. ಸಮಸ್ತ ಶಾಸ್ತ್ರಗಳ ತತ್ತ್ವಾರ್ಥಗಳನ್ನು ಸ್ಪಷ್ಟವಾಗಿ ತಿಳಿದಿರುವವನು. ಆದ ಕಾರಣ ನನಗೆ ಪುರಾಣಗಳ ಕಥಾಸಾರವನ್ನು ವಿಶೇಷವಾಗಿ ವಿವರಿಸಿ ತಿಳಿಸು.

**ಸುಪುಣ್ಯಶ್ಚಾಥ ಸದ್ಭಕ್ತಿರ್ವಿವೇಕೋ ವರ್ಧತೇ ಕಥಂ|**

**ಸ್ವವಿಕಾರನಿರಾಸಶ್ಚ ಸಜ್ಜನೈಃ ಕ್ರಿಯತೇ ಕಥಂ ||೨||**

೨ ಶ್ರೇಷ್ಠವಾದ ಪುಣ್ಯವೂ ಒಳ್ಳೆಯ ದೈವಭಕ್ತಿಯೂ, ಇಂತಹ ಕಾರ್ಯ ಪ್ರವೃತ್ತವಾಗುವಂತಹ ವಿವೇಕವೂ ಹೇಗೆ ಅಭಿವೃದ್ಧಿ ಹೊಂದುತ್ತದೆ. ಮನಸ್ಸಿನ ಕಲ್ಮಷವನ್ನು ನಾಶ ಮಾಡಿಕೊಳ್ಳುವಿಕೆಯೂ ಸಜ್ಜನರಿಂದ ಹೇಗೆ ಮಾಡಲ್ಪಡುತ್ತದೆ ಎಂದು ಪ್ರಶ್ನೆ. ಇಲ್ಲಿ ವಿಚಾರವೇನೆಂದರೆ ದೈವಭಕ್ತಿ ಇದ್ದರೆ ಮಾತ್ರ ಸಾಲದು ಅದರಲ್ಲಿ ಮನಸ್ಸು ಕೇಂದ್ರೀಕೃತವಾಗಬೇಕು. ಇದನ್ನೇ ಸಕಲ ಶಾಸ್ತ್ರ ಪುರಾಣಗಳು ಏಕಾಗ್ರತೆ ಎಂದು ತಿಳಿಸುತ್ತವೆ. ಈ ರೀತಿ ಮನಸ್ಸು ಪ್ರವೃತ್ತವಾಗಬೇಕಾದರೆ ಮನಶುದ್ಧಿ ಅಗತ್ಯ. ಆ ರೀತಿಯಾದ ಮನಶುದ್ಧಿ ಎಂದರೆ ಆಂತರಿಕವಾದ ಕಲ್ಮಷಗಳನ್ನು ನಿವಾರಿಸಿಕೊಳ್ಳುವಿಕೆ ಈ ರೀತಿ ಎಲ್ಲಾ

ಸತ್ಕಾರ್ಯಗಳಿಗೆ ಮನಸ್ಸನ್ನು ಸಜ್ಜನರು ಹೇಗೆ ಸಿದ್ಧಪಡಿಸಿಕೊಳ್ಳುತ್ತಾರೆ ಎಂಬ ವಿಚಾರಗಳನ್ನು ಈ ಶ್ಲೋಕದಲ್ಲಿ ಹೇಳಿದ್ದಾರೆ.

ಜೀವಾಶ್ಚಾಸುರತಾಂ ಪ್ರಾಪ್ತಾಃ ಪ್ರಾಯೋ ಘೋರೇ ಕಲಾವಿಹೌ ।
ತಸ್ಯ ಸಂಶೋಧನೇ ಕಿಂ ಹಿ ವಿದ್ಯತೇ ಪರಮಾಯನಂ ॥೩॥

೩ ಎಲ್ಲಾ ಯುಗಗಳಿಗಿಂತ ಘೋರವಾದ ಈ ಕಲಿಯುಗದಲ್ಲಿ ಪ್ರಾಯಃ ಎಲ್ಲಾ ಜೀವಿಗಳೂ ರಾಕ್ಷಸತ್ವವನ್ನು ಹೊಂದಿ ಅಂದರೆ ಪತಮೋಗುಣಪ್ರಧಾನಪರಾಗಿ ದುಷ್ಟ ಸ್ವಭಾವ ವುಳ್ಳವರಾಗಿರುವರು. ಇದನ್ನು ಹೋಗಲಾಡಿಸಿ ಅವರನ್ನು ಸನ್ಮಾರ್ಗದಲ್ಲಿ ಪ್ರವರ್ತಿಸಲು ಉತ್ತಮ ಮಾರ್ಗವಿರುವುದೇ ಎಂದು ಪ್ರಶ್ನಿಸುತ್ತಿದ್ದಾರೆ. ಗುಣಗಳು ಮೂರು ಸತ್ವ, ರಜೋ, ತಮೋಗುಣಗಳೆಂದು 'ಸತ್ವಗುಣ 'ಯುಕ್ತರು ಶಾಂತಿ, ಸಂಯಮ, ಸತ್ಕಾರ್ಯನಿಷ್ಠರಾಗಿ ಉತ್ತಮರಾಗಿರುತ್ತಾರೆ.

'ರಜೋಗುಣ' ಯುಕ್ತರು ನ್ಯಾಯನಿಷ್ಠುರತೆಯುಳ್ಳವರಾಗಿ ಶಿಕ್ಷಾರ್ಹರಿಗೆ ಮಾತ್ರ ಶಿಕ್ಷಿಸುತ್ತಾ ಸಜ್ಜನರನ್ನು ಆದರಿಸುತ್ತಾ ಮಧ್ಯಮ ಸ್ವಬಾವದವರಾಗಿ ವಿನಾಕಾರಣ ಅನ್ಯರಿಗೆ ತೊಂದರೆ ನೀಡದೇ ಇರುವವರಾಗಿರುತ್ತಾರೆ.

'ತಮೋಗುಣಾದಿಕರು' ರಾಕ್ಷಸರಂತೆ ಸಜ್ಜನ ದುರ್ಜನರ ಭೇದವಿಲ್ಲದೇ, ಎಲ್ಲರನ್ನೂ ಕಾರಣವಿಲ್ಲದಿದ್ದರೂ ಹಿಂಸಿಸುತ್ತಾ ಭಯಂಕರರಾಗಿರುತ್ತಾರೆ.

ಯದಸ್ತಿ ವಸ್ತು ಪರಮಂ ಶ್ರೇಯಸಾಂ ಶ್ರೇಯ ಉತ್ತಮಂ ।
ಪಾವನಂ ಪಾವನಾನಾಂ ಚ ಸಾಧನಂ ತದ್ವದಾಧುನಾ ॥೪॥

೪ ಮೇಲೆ ಹೇಳಿದ ರೀತಿಯಲ್ಲಿರುವ ಜನರು ಸನ್ಮಾರ್ಗ ಪ್ರವೃತ್ತರಾಗಲು ಈ ಪ್ರಪಂಚದಲ್ಲಿ ಶ್ರೇಯಸ್ಸೆಂದು ಯಾವುದಿದೆಯೋ ಅದಕ್ಕಿಂತಲೂ ಉತ್ತಮವಾದ ಶ್ರೇಯಸ್ಸುಳ್ಳ, ಹಾಗೂ ಪವಿತ್ರವಾದುದು ಯಾವುದು ಇದೆಯೋ ಅದಕ್ಕಿಂತಲೂ ಪವಿತ್ರವಾದ ಸಾಧನೆಗಳನ್ನು ನನಗೆ ಈಗ ಹೇಳು.

ಇಲ್ಲೊಂದು ಸೂಕ್ಷ್ಮವಿಚಾರ ಮೇಲ್ನೋಟಕ್ಕೆ ಅಂತಹ ಅರ್ಥವಿಲ್ಲವೆಂದು ಕಂಡರೂ ಸೂಕ್ಷ್ಮವಾಗಿ ಅವಲೋಕಿಸಿದಾಗ 'ಶ್ರೇಯನಾಂ ಶ್ರೇಯಃ' ಎಂಬಲ್ಲಿ ಗಾಢವಾದ ಅರ್ಥವಿದೆ. 'ಕಠೋಪನಿಷತ್ತಿ' ನಲ್ಲಿ ಯಮನಚಿಕೇತರ ಸಂವಾದದಲ್ಲಿ 'ಶ್ರೇಯಸ್ಸಿನ ವಿಚಾರ' ವನ್ನು ಯಮದೇವನು ಚೆನ್ನಾಗಿ ವಿವರಿಸಿದ್ದಾನೆ. 'ಪ್ರೇಯಸ್ಸು' 'ಶ್ರೇಯಸ್ಸು'

ಎಂದು ಎರಡು ವಿಧ. 'ಪ್ರೇಯಸ್ಸೆಂದರೆ' ಯಜ್ಞದಾನಾತಪ, ಜಪಾದಿ ಕರ್ಮ ಶಾಸ್ತ್ರ ವಿಹಿತ ಕಾಮ್ಯ ಕರ್ಮಗಳಿಂದ ದೊರೆಯುವುದು. ಸ್ವರ್ಗಾದಿ ಐಹಿಕ ಫಲವುಳ್ಳದ್ದು.

'ಶ್ರೇಯಸ್ಸೆಂದರೆ': ಶಾಶ್ವತವಾದ ಜ್ಞಾನ ರೂಪವುಳ್ಳ ಮೋಕ್ಷ ಫಲವುಳ್ಳದ್ದು ಎಂದರ್ಥ. ಆದ್ದರಿಂದ ಜನ್ಮಮರಣರಹಿತವಾದ ಮೋಕ್ಷವನ್ನು ನೀಡುವಂತಹದ್ದೇ ಶ್ರೇಯಸ್ಸು ಅಜ್ಞಾನ ನಿವೃತ್ತಿಯಾಗಿ ಅಂತಹ ಶ್ರೇಯಃಪ್ರದವಾದ ಸಾಧನವನ್ನು ನನಗೆ ತಿಳಿಸು ಎಂದು ಅಂತರಾರ್ಥ

**ಯೇನ ತತ್ಸಾಧನೇನಾಶು ಶುಧ್ಯತ್ಯಾತ್ಮಾ ವಿಶೇಷತಃ|**

**ಶಿವಪ್ರಾಪ್ತಿರ್ಭವೇತ್ತಾತ ಸದಾ ನಿರ್ಮಲಚೇತಸಃ ||೫||**

೫ ಯಾವ ಅಂತಹ ಶ್ರೇಯಃಪ್ರದವಾದ ಸಾಧನದಿಂದ ಬೇಗನೇ, ನಿರ್ಮಲ ಮನಸ್ಸುಳ್ಳವನಾಗಿ ಆತ್ಮಶುದ್ಧಿಯನ್ನು ಹೊಂದಿ ನಂತರ ಶಿವಪ್ರಾಪ್ತಿಯನ್ನು ಪಡೆಯಲು ಸಾಧ್ಯವಾದ ಸಾಧನವನ್ನು ನನಗೆ ಎಲೈ ಪೂಜ್ಯನೇ ತಿಳಿಸು. 'ಮೋಕ್ಷಪ್ರಾಪ್ತಿಗೆ ಚಿತ್ತಶುದ್ಧಿ ಅವಶ್ಯ' ವೆಂಬುದನ್ನು ಮತ್ತೆ ತಿಳಿಸಿದಂತಾಯ್ತು.

**||ಸೂತ ಉವಾಚ||**

**ಧನ್ಯಸ್ತ್ವಂ ಮುನಿಶಾರ್ದೂಲ ಶ್ರವಣಪ್ರೀತಿಲಾಲಸಃ|**

**ಅತೋ ವಿಚಾರ್ಯ ಸುಧಿಯಾ ವಚ್ಮಿ ಶಾಸ್ತ್ರಂ ಮಹೋತ್ತಮಂ ||೬||**

ಸೂತ ಉವಾಚ ಸೂತರು ಹೇಳುತ್ತಾರೆ.

೬ ಎಲೈ ಮುನಿಶ್ರೇಷ್ಠನೇ, ನೀನೇ ಧನ್ಯನು ಏಕೆಂದರೆ ಶಿವಸಂಬಂಧವಾದ ಶಾಸ್ತ್ರವನ್ನು ಕೇಳಬೇಕೆಂಬ ಪ್ರೀತಿ, ಆದರಗಳುಳ್ಳವನಾಗಿರುವೆ. ಆದ್ದರಿಂದ ಚೆನ್ನಾಗಿ ಆಲೋಚಿಸಿ ಅತ್ಯಂತ ಉತ್ತಮವಾದ ಶಾಸ್ತ್ರವನ್ನು ಹೇಳುವೆನು. ಸತ್ಕರ್ಮದಲ್ಲಿ, ಸಚ್ಛಾಸ್ತ್ರದಲ್ಲಿ ಆಸಕ್ತಿಯು ಅನೇಕವಾದ ಪುಣ್ಯದಿಂದ ಲಭ್ಯವಾಗುವಂತಹದು. ಅದಕ್ಕಾಗಿಯೇ ಸೂತರು 'ಧನ್ಯ' ಎಂದು ಹೇಳಿದ್ದಾರೆ. ಇನ್ನು 'ಶಾಸ್ತ್ರವೆಂದರೆ, ಇದೇನು ಇಲ್ಲಿ 'ಯಾವ ಶಾಸ್ತ್ರ ಪ್ರಾರಂಭ' ಎಂದು ಸಂಶಯ ಬರಬಹುದು. ಶಾಸ್ತ್ರವೆಂದರೆ 'ಶಾಸ್ತೀ ಇತಿ ಶಾಸ್ತ್ರ'ಎಂದು. ಹೀಗೆಯೇ ಮಾಡಬೇಕೆಂದು ವಿಧಿಸುವುದೇ 'ಶಾಸ್ತ್ರ'ಎಂದು ಕರೆಯಲ್ಪಡುತ್ತದೆ. ಸರ್ವಸಿದ್ಧಾಂತನಿಷ್ಪನ್ನಂ ಭಕ್ತ್ಯಾದಿಕವಿವರ್ಧನಂ|

**ಶಿವತೋಷಕರಂ ದಿವ್ಯಂ ಶೃಣು ವತ್ಸ ರಸಾಯನಂ ||೭|**

೭ ಸಮಸ್ತವಾದ ಶಾಸ್ತ್ರ, ಪುರಾಣಗಳಲ್ಲಿ ಅಂತಿಮ ತೀರ್ಮಾನವೇನಿದೆಯೋ, ಅವುಗಳ

ಮೂಲೋದ್ದೇಶ ಫಲವೇನಿದೆಯೋ ಅವುಗಳ ಸಾರವನ್ನು ಒಳಗೊಂಡಿರುವ, ಭಕ್ತಿ, ಜ್ಞಾನ ವೈರಾಗ್ಯಗಳನ್ನು ವಿಶೇಷವಾಗಿ ಅಭಿವೃದ್ಧಿಗೊಳಿಸುವಂತಹ, ಶಿವಪ್ರೀತಿಕರವಾದಂತಹ ಮಧುರವಾದಂತಹ ಈ ಶಿವಪುರಾಣವನ್ನು ಎಲೈವತ್ಸನೇ ಕೇಳು ಎಂದು ಹೇಳುತ್ತಾರೆ.

**ಕಾಲವ್ಯಾಲಮಹಾತ್ರಾಸವಿಧ್ವಂಸಕರಮುತ್ತಮಂ।**
**ಶೈವಂ ಪುರಾಣಂ ಪರಮಂ ಶಿವೇನೋಕ್ತಂ ಪುರಾ ಮುನೇ ॥೮॥**

ಕಾಲವೆಂಬ ಮಹಾಸಮರ ಭಯದಿಂದ ಕೂಡಿರುವ ಮನುಷ್ಯರಿಗೆ, ಮಹಾಭಯವನ್ನು ನಿವಾರಿಸುವಂತಹ ಉತ್ತಮವಾದ ಹಿಂದೆ ಈಶ್ವರನಿಂದಲೇ ಉಪದೇಶಿಸಲ್ಪಟ್ಟ 'ಶಿವ' ಪುರಾಣವನ್ನು ಹೇಳುತ್ತೇನೆ.

**'ಸತ್ಕುಮಾರಸ್ಯ ಮುನೇರುಪದೇಶಾತ್ಪರಾದರಾತ್ ।**
**ವ್ಯಾಸೇನೋಕ್ತಂ ತು ಸಂಕ್ಷೇಪಾತ್ಕಲಿಜಾನಾಂ ಹಿತಾಯ ಚ ॥೯॥**

೯ ಸನತ್ಕುಮಾರ ಮುನಿಗಳು ಅತ್ಯಂತ ಆದರದಿಂದ ಈ ಪುರಾಣವನ್ನು ವ್ಯಾಸರಿಗೆ ಉಪದೇಶಿಸಿದರು. ಹಾಗೆ ಉಪದೇಶ ಹೊಂದಿದ ವ್ಯಾಸರು ಕಲಿಯುಗದ ಜನರ ಏಳಿಗೆಗೋಸ್ಕರ ಹೇಳಿದ್ದಾರೆ.

**ಏತಸ್ಮಾದಪರಂ ಕಿಂಚಿತ್ಪುರಾಣಾಚ್ಛೈವತೋ ಮುನೇ ।**
**ನ ವಿದ್ಯತೇ ಮನಃಶುದ್ಧ್ಯೈ ಕಲಿಜಾನಾಂ ವಿಶೇಷತಃ ॥೧೦॥**

೧೦ ಅಂತಹ ಈ ಶಿವಪುರಾಣಕ್ಕಿಂತ ಶ್ರೇಷ್ಠವಾದ ಮತ್ತೊಂದು ಪುರಾಣವಿಲ್ಲ. ಅದರಲ್ಲೂ ಈ ಕಲಿಯುಗದಲ್ಲಿ ಜನರಿಗೆ ಮನಶುದ್ಧಿಯನ್ನುಂಟುಮಾಡಲು ಇದಕ್ಕಿಂತ ಶ್ರೇಷ್ಠವಾದದ್ದು ಯಾವುದೂ ಇಲ್ಲ. ಅಂದರೆ ಶಿವಪುರಾಣ ಪಠನ, ಶ್ರವಣ ಅತ್ಯಂತ ಮುಖ್ಯ ಸಾಧನೆಯಾಗಿರುವುದು.

**ಜನ್ಮಾಂತರೇ ಭವೇತ್ಪುಣ್ಯಂ ಮಹತ್ತಸ್ಯ ಸುಧೀಮತಃ ।**
**ತಸ್ಯ ಪ್ರೀತಿರ್ಭವೇತ್ತತ್ರ ಮಹಾಭಾಗ್ಯವತೋ ಮುನೆ ॥೧೧॥**

೧೧ ಶಿವಪುರಾಣ ಶ್ರವಣದಿಂದ ಈ ಜನ್ಮದಲ್ಲೂ ಮುಂದಿನ ಜನ್ಮಗಳಲ್ಲೂ ಶಿವನಲ್ಲಿ ಭಕ್ತಿಯುಂಟಾಗಿ ಮಹಾಪುಣ್ಯವೂ ಲಬಿಸುವುದು. ಹಾಗೆ ಮಹಾಭಾಗ್ಯಶಾಲಿಯೂ

ಆಗುವನು ಎಂದು ಎಲ್ಲೈ ಮುನಿಯೇ ಪುರಾಣವಿಚಾರಗಳನ್ನು ಚೆನ್ನಾಗಿ ತಿಳಿಸಿರುವ ಮಹರ್ಷಿಗಳ ಅಭಿಪ್ರಾಯವು.

ಏತಚ್ಛಿವಪುರಾಣಂ ಹಿ ಪರಮಂ ಶಾಸ್ತ್ರಮುತ್ತಮಂ ।
ಶಿವರೂಪಂ ಕ್ಷಿತೌಜ್ಞೇಯಂ ಸೇವನೀಯಂ ಚ ಸರ್ವಥಾ ॥೧೨॥

೧೨ ಈ ಶಿವಪುರಾಣವು ಅತ್ಯಂತ ಪವಿತ್ರವೂ ಶ್ರೇಷ್ಠವಾದ ಶಾಸ್ತ್ರವೂ ಆಗಿದೆಯಷ್ಟೆ. ಈ ಶಿವಪುರಾಣವು ಭೂಮಿಯಲ್ಲಿ ಸಾಕ್ಷಾತ್ತಾಗಿರುವ ಶಿವಸ್ವರೂಪವೇ ಆಗಿದೆ. ಆದ್ದರಿಂದ ಶಿವಸ್ವರೂಪವಾದ ಈ ಶಿವಪುರಾಣವನ್ನು ಸರ್ವ ಪ್ರಯತ್ನದಿಂದಲೂ ಸೇವಿಸಬೇಕು.

ಪಠನಾಚ್ಛ್ರವಣಾದಸ್ಯ ಭಕ್ತಿಮಾನ್ನರಸತ್ತಮಃ ।
ಸದ್ಯಃ ಶಿವಪದಪ್ರಾಪ್ತಿಂ ಲಭತೇ ಸರ್ವಸಾಧನಾತ್ ॥೧೩॥

೧೩ ಈ ಶ್ರೇಷ್ಟವಾದ ಶಿವಪುರಾಣದ ಕೇಳುವಿಕೆ, ಓದುವಿಕೆಯಿಂದ ದೇಹನಾಶಾನಂತರ ಶಿವ ಭಕ್ತಿಯುಳ್ಳ ಇಂತಹ ಮಾನವರು ಶಿವಸಾಯುಜ್ಯವನ್ನು ಪಡೆಯುವರು. ಆದ್ದರಿಂದ ಶಿವ ಸಾಯುಜ್ಯ ಪಡೆಯಲು ಸಾಧನವಾದ ಶ್ರವಣ / ಪಠಣಗಳನ್ನು ಮಾಡಬೇಕು.

ತಸ್ಮಾತ್ಸರ್ವಪ್ರಯತ್ನೇನ ಕಾಂಕ್ಷಿತಂ ಪಠನಂ ನೃಭಿಃ ।
ತಥಾಸ್ಯ ಶ್ರವಣಂ ಪ್ರೇಮ್ಣಾ ಸರ್ವಕಾಮಫಲಪ್ರದಂ ॥೧೪॥

೧೪ ಆದ್ದರಿಂದ ಸರ್ವಪ್ರಯತ್ನದಿಂದಲೂ ಪಠಣಮಾಡಬೇಕು. ಸರ್ವಪ್ರಯತ್ನದಿಂದಲೂ ಈ ಪುರಾಣವನ್ನು ಪಠಣ ಮಾಡಿದ ಮನುಷ್ಯನು ಸಮಸ್ತ ಕಾಮನೆಗಳನ್ನು ಹೊಂದುವನು. ಪ್ರೀತಿಯಿಂದ ಪುರಾಣವನ್ನು ಕೇಳಿದವನು ಸಹ ಸರ್ವಇಷ್ಟಾರ್ಥಗಳನ್ನು ಪಡೆಯುವನು.

ಪುರಾಣಶ್ರವಣಾಚ್ಛಂಭೋರ್ನಿಷ್ಪಾಪೋ ಜಾಯತೇ ನರಃ ।
ಭುಕ್ತ್ವಾಭೋಗಾನ್ ಸುವಿಪುಲಾಂಶಿವಲೋಕಮವಾಪ್ನುಯಾತ್ ॥೧೫॥

೧೫ ಶಿವಪುರಾಣದ ಶ್ರವಣದಿಂದ ಮನುಷ್ಯನು ಸಮಸ್ತ ಪಾಪಗಳಿಂದ ಬಿಡಲ್ಪಡುವನು ಹಾಗೆಯೇ ಬಹಳವಾದ ಶ್ರೇಷ್ಟವಾದ ಸುಖವನ್ನು ಅನುಭವಿಸಿ ಕೊನೆಗೆ ಶಿವಲೋಕವನ್ನು ಹೊಂದುವನು.

**ತತ್ಪುಣ್ಯ ಲಭತೇ ಶಂಭೋಃ ಕಥಾಶ್ರವಣಮಾತ್ರ ತಃ ।**
**ರಾಜಸೂಯೇನ ಯತ್ಪುಣ್ಯಮಗ್ನಿಷ್ಟೋಮಶತೇನ ಚ ॥16॥**

೧೬ ರಾಜಸೂಯ ಯಾಗವನ್ನು ಮಾಡುವಿಕೆಯಿಂದ ನೂರು ಅಗ್ನಿಷ್ಟೋಮ ಯಾಗವನ್ನು ಮಾಡುವಿಕೆಯಿಂದ ಯಾವ ಮಹತ್ತರ ಪುಣ್ಯ ಲಭ್ಯವಾಗುವುದೋ ಅಂತಹ ಶ್ರೇಷ್ಟವಾದ ಪುಣ್ಯವು ಶಿವಪುರಾಣ ಶ್ರವಣದಿಂದಲೇ ಲಭಿಸುವುದು.

**ಯೇ ಶೃಣ್ವಂತಿ ಮುನೇ ಶೈವಂ ಪುರಾಣಂ ಶಾಸ್ತ್ರಮುತ್ತಮಂ ।**
**ತೇ ಮನುಷ್ಯಾ ನ ಮಂತವ್ಯಾ ರುದ್ರಾ ಏವ ನ ಸಂಶಯಃ ॥೧೭॥**

೧೭ ಈ ಲೋಕದಲ್ಲಿ ಯಾರು ಈ ಶಿವಸಂಬಂಧವಾದ, ಉತ್ತಮವಾದ, ಶಿವಪುರಾಣವನ್ನು ಕೇಳುವರೋ, ಅವರು ಮನುಷ್ಯರಲ್ಲ (ಎಂದು ತಿಳಿಯಬೇಕು.) ಅಂತಹವರು ಸಾಕ್ಷಾತ್ ಶಿವಸ್ವರೂಪರೇ ಆಗಿದ್ದಾರೆ ಎಂದು ಅರಿಯಬೇಕು. ಎಲೈ ಮುನಿಯೇ ಈ ವಿಚಾರದಲ್ಲಿ ಸಂಶಯಬೇಡ.

**ಶೃಣ್ವತಾಂ ತತ್ಪುರಾಣಂ ಹಿ ತಥಾ ಕೀರ್ತಯತಾಂ ಚ ತತ್ ।**
**ಪಾದಾಂಬುಜರಜಾಂಸ್ಯೇವ ತೀರ್ಥಾನಿ ಮುನಯೋ ವಿದುಃ ॥೧೮॥**

೧೮ ಈ ಪುರಾಣವನ್ನು ಕೇಳುವವರು, ಕೀರ್ತಿಸುವವರುಗಳ ಪಾದಕಮಲಗಳ ಧೂಳೇ, ಸಕಲ ಪುಣ್ಯ ತೀರ್ಥಗಳ ಸ್ವರೂಪವೆಂದು ಮುನಿಗಳು ಹೇಳಿರುವರು .

**ಗಂತುಂ ನಿಃಶ್ರೇಯಸಂ ಸ್ಥಾನಂ ಯೇಽಭಿವಾಂಛಂತಿ ದೇಹಿನಃ ।**
**ಶೈವಂ ಪುರಾಣಮಮಲಂ ಭಕ್ತ್ಯಾ ಶೃಣ್ವಂತು ತೇ ಸದಾ ॥೧೯॥**

೧೯ ಯಾರು ಮೋಕ್ಷವನ್ನು ಹೊಂದಲು ಅಪೇಕ್ಷಿಸುವರೋ ಅಂತಹವರು ಯಾವಾಗಲೂ ಶ್ರೇಷ್ಟವಾದ ಈ ಶಿವಪುರಾಣವನ್ನು ಭಕ್ತಿಯಿಂದ ಕೇಳಬೇಕು. ಮುಕ್ತಿಯನ್ನು ಹೊಂದಲು ಇದಕ್ಕಿಂತ ಶ್ರೇಷ್ಟವಾದ ಸಾದನ ಬೇರೊಂದಿಲ್ಲ.

ಇಲ್ಲಿ 'ಮುಕ್ತಿ ' ಎಂದರೆ 'ಬಿಡುಗಡೆ ' ಎಂದರ್ಥ. ಎಂದರೆ ಯಾವುದರಿಂದ ಜನ್ಮ ಮರಣಗಳಿಂದ ಬಿಡಲ್ಪಟ್ಟು, ಶಿವನಲ್ಲಿ ಸೇರುವುದು. ಇಂತಹ ಸುಖವನ್ನೇ ಮೋಕ್ಷ ' ವೆಂದು ಸಕಲ ಶಾಸ್ತ್ರಗಳಲ್ಲಿ ವಿವರಿಸಿರುವುದು.

ಸದಾ ಶ್ರೋತುಂ ಯದ್ಯಶಕ್ತೋ ಭವೇತ್ವಮುನಿಸತ್ತಮೇ ।
ಯದಿ ಪ್ರತಿದಿನಂ ಶೃಣುಯಾದ್ವಾ ಮುಹೂರ್ತಕಂ॥೨೦॥

೨೦ ಯಾವಾಗಲೂ ಈ ಶಿವಪುರಾಣವನ್ನು ಕೇಳಲು ಸಾಧ್ಯವಿಲ್ಲದವನು ಎಲೈ ಮುನಿಶ್ರೇಷ್ಟನೇ ನಿಯಮಪುರಸ್ಸರನಾಗಿ ಪ್ರತಿದಿನದಲ್ಲೂ ಮುಹೂರ್ತಕಾಲವಾದರೂ ಕೇಳಬಹುದು. ಮುಹೂರ್ತವೆಂದರೆ 48 ನಿಮಿಷಗಳು

ಸದಾ ಶ್ರೋತುಂ ಯದ್ಯಶಕ್ತೋ ಭವೇತ್ವಮುನಿಸತ್ತಮೇ ।
ನಿಯತಾತ್ಮಾ ಪ್ರತಿದಿನಂ ಶೃಣುಯದ್ವಾ ಮುಹೂರ್ತಕಂ ॥೨೦॥
ನಿಯತಾತ್ಮಾ ಪ್ರತಿದಿನಂ ಶ್ರೋತುಮಶಕ್ತೋ ಮಾನವೋ ಭವೇತ್ ।
ಪುಣ್ಯಮಾಸಾದಿಷು ಮುನೇ ಶೃಣುಯಾಚ್ಛಿವಪುರಾಣಕಂ ॥೨೧॥

ಒಂದು ವೇಳೆ ಪ್ರತಿದಿನ ಶ್ರವಣಮಾಡಲು ಸಾಧ್ಯವಿಲ್ಲದೇ ಹೋದರೆ ಅಂತಹ ಮನುಷ್ಯನು ಪುಣ್ಯಕರವಾದ ಮಾಸ, ತಿಥಿ, ನಕ್ಷತ್ರಗಳಲ್ಲಿ ಶಿವಪುರಾಣವನ್ನು ಕೇಳಬೇಕು. 'ಪುಣ್ಯಕರವಾದ ಮಾಸಗಳೆಂದರೆ 'ಕಾರ್ತಿಕ ಮಾಸ ' ಅಷ್ಟಮಿ, ಚತುರ್ದಶಿ, ಸಂಕ್ರಮಣ, ಪೂರ್ಣಿಮಾ, ಇಂತಹ ಶಿವಪ್ರೀತಿಕರವಾದ ಪರ್ವತಿಥಿಕಾಲಗಳಲ್ಲಿ ಆರಿದ್ರಾ ನಕ್ಷತ್ರ ದಿವಸಗಳಲ್ಲಿ ಶಿವಪುರಾಣ ಶ್ರವಣ ಶಿವಸೇವೆ ಉತ್ತಮವಾದುದು

ಮುಹೂರ್ತಂ ವಾ ತದರ್ಧಂ ವಾ ತದರ್ಧಂ ವಾ ಕ್ಷಣಂ ಚ ವಾ ।
ಯೇ ಶೃಣ್ವಂತಿ ಪುರಾಣಂ ತನ್ನ ತೇಷಾಂ ದುರ್ಗತಿರ್ಭವೇತ್ ॥೨೨॥

೨೨ ಒಂದು ಮುಹೂರ್ತವಾಗಲಿ, ಅರ್ಧ ಮುಹೂರ್ತವಾಗಲಿ, ಕಾಲು ಮುಹೂರ್ತವಾಗಲಿ ಒಂದು ಕ್ಷಣವಾಗಲಿ, ಯಾರು ಈ ಶ್ರೇಷ್ಟವಾದ ಶಿವಪುರಾಣವನ್ನು ಕೇಳುವರೋ ಅಂತಹವರಿಗೆ ದುರ್ಗತಿಯು ಉಂಟಾಗುವುದಿಲ್ಲ.

ತತ್ಪುರಾಣಂ ಚ ಶೃಣ್ವಾನಃ ಪುರುಷೋ ಯೇ ಮುನೀಶ್ವರ ।
ಸ ನಿಸ್ತರತಿ ಸಂಸಾರಂ ದಗ್ಧ್ವಾ ಕರ್ಮಮಹಾಟವೀಂ ॥೨೩॥

೨೩ ಯಾವ ಮನುಷ್ಯರು ಈ ಶಿವಪುರಾಣವನ್ನು ಕೇಳುವರೋ ಎಲೈ ಮುನೀಶ್ವರನೇ ಅಂತಹವರು ಕರ್ಮಗಳೆಂಬ ಮಹಾರಣ್ಯವನ್ನು ಸುಟ್ಟು ದಾಟಲಸಾಧ್ಯವಾದ ಸಂಸಾರವೆಂಬ ಸಾಗರವನ್ನು ದಾಟಿ ಮುಕ್ತಿಯನ್ನು ಹೊಂದುವರು. ಕರ್ಮವೆಂಬುದು ಎರಡು ವಿಧ ' ೧

ನಿಷ್ಕಾಮ '೨.ಸಕಾಮ ' ಎಂದು '೧ ' ನಿಷ್ಕಾಮಕರ್ಮದಿಂದ ' ಮುಕ್ತಿ ಪ್ರಾಪ್ತಿ '೨ ಸಕಾಮ ಕರ್ಮದಿಂದ ಪುಣ್ಯಲಭಿಸಿ ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ ಎಂಬಂತೆ ಪುಣ್ಯವಿರುವವರೆಗೆ ಆ ಪುಣ್ಯಕ್ಕೆ ತಕ್ಕಂತಹ ಭೋಗ ಅನುಭವಿಸಿ ಪುಣ್ಯ ಮುಗಿದೊಡನೇ ಪುನಃ ಮನುಷ್ಯ ಲೋಕಪ್ರಾಪ್ತಿಯಾಗುತ್ತದೆ. ಹೀಗೇ ಚಕ್ರದಂತೆ ಸುತ್ತುತ್ತಿರುವುದು. ಆದ್ದರಿಂದಲೇ ಸಂಸಾರ ಸಾಗರ ಎಂದೂ 'ದಾಟಲಶಕ್ಯ' ಎಂದೂ ವಿವರಿಸುವುದು. ಆದ್ದರಿಂದ ಮೋಹಾದಿಗಳನ್ನು ತ್ಯಜಿಸಿ ನಿಷ್ಕಾಮ ಕರ್ಮ ಮಾಡಬೇಕು. ಅದಕ್ಕೆ ಗೀತೆಯಲ್ಲೂ ಶ್ರೀ ಕೃಷ್ಣನು ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ ಎಂದರೆ ಕರ್ಮದಲ್ಲಿ ಮಾತ್ರ ನಿನಗೆ ಅಧಿಕಾರ ಫಲದಲ್ಲಿಲ್ಲ ಎಂದು ಎಂದರೆ ಕರ್ಮಕ್ಕೆ ತಕ್ಕಂತಹ ಉತ್ತಮ ಫಲ ನಾನು ನೀಡುತ್ತೇನೆ ಎಂದು ಶ್ರೀ ಕೃಷ್ಣನ ಅಭಿಪ್ರಾಯ. ಆದ್ದರಿಂದ 'ಕಾಮನೆ ಇಲ್ಲದ ಕರ್ಮ ಬಂಧನವಿಲ್ಲದ' 'ಮೋಕ್ಷಪ್ರದವಾದುದು' ಆದ್ದರಿಂದಲೇ ಮೇಲಿನ ಶ್ಲೋಕದಲ್ಲಿ 'ಕರ್ಮವೆಂಬ ಮಹಾರಣ್ಯವನ್ನು ' ಸುಟ್ಟು ಎಂದು ವಿವರಿಸಿರುವುದು.

**ತತ್ಪುಣ್ಯಂ ಸರ್ವದಾನೇಷು ಸರ್ವಯಜ್ಞೇಷು ವಾ ಮುನೇ ।**
**ಶಂಭೋಃ ಪುರಾಣಶ್ರವಣಾತ್ತತ್ಫಲಂ ನಿಶ್ಚಲಂ ಭವೇತ್ ॥೨೪॥**

೨೪ ಎಲ್ಲಾ ದಾನಗಳಿಂದಲೂ, ಸರ್ವಯಜ್ಞಗಳಿಂದಲೂ ಯಾವ ಪುಣ್ಯವು ಲಭ್ಯವಾಗುವುದೋ ಎಲೈ ಮುನಿಯೇ ಅಂತಹ ಶ್ರೇಷ್ಟವಾದ ಪುಣ್ಯಗಳೆಲ್ಲವೂ ಶಿವಪುರಾಣದ ಶ್ರವಣದಿಂದಲೇ ನಿಶ್ಚಯವಾಗಿಯೂ ಉಂಟಾಗುವುದು.

**ವಿಶೇಷತಃ ಕಲೌ ಶೈವಪುರಾಣಶ್ರವಣಾದೃತೇ ।**
**ಪರೋ ಧರ್ಮೋ ನ ಪುಂಸಾಂ ಹಿ ಮುಕ್ತಿ ಸಾಧನಕೃನ್ಮುನೇ ॥೨೫॥**

೨೫ ವಿಶೇಷವಾಗಿ ಹೇಳುವುದಾದರೆ ಈ ಕಲಿಯುಗದಲ್ಲಿ ಶಿವಪುರಾಣವನ್ನು ಬಿಟ್ಟು ಮುಕ್ತಿಸಾಧನೆಗೆ ಬೇರೆ ಮಾರ್ಗವಿಲ್ಲ. 'ಮುಕ್ತಿ ಸಾಧನೆಗೆ ಉಪಯುಕ್ತವಾದ ಬೇರೆ ಧರ್ಮವು ಮನುಷ್ಯರಿಗೆ ಶಿವಪುರಾಣವನ್ನು ಬಿಟ್ಟು ಇರುವುದಿಲ್ಲ '

**ಪುರಾಣಶ್ರವಣಂ ಶಂಭೋರ್ನಾಮಸಂಕೀರ್ತನಂ ತಥಾ ।**
**ಕಲ್ಪದ್ರುಮಫಲಂ ಸಮ್ಯಙ್ಮನುಷ್ಯಾಣಾಂ ನ ಸಂಶಯಃ ॥೨೬॥**

೨೬ ಶಿವಪುರಾಣಶ್ರವಣವೂ ಶಿವನಾಮಸ್ಮರಣೆಯೂ ಮನುಷ್ಯರಿಗೆ ಕಲ್ಪದ್ರುಮಕ್ಕೆ

ಸಮನಾದುದು ಎಂದರೆ ಈ ಎರಡೂ ಮನುಷ್ಯರಿಗೆ ಸಕಲ ಕಾಮನೆಗಳನ್ನೂ ಕೊಡತಕ್ಕವುಗಳಾಗಿವೆ. ಇದರಲ್ಲಿ ಸಂಶಯವಿಲ್ಲ.

**ಕಲೌ ದುರ್ಮೇಧಸಾಂ ಪುಂಸಾಂ ಧರ್ಮಾಚಾರೋಚಿತಾತ್ಮನಾಂ ।**
**ಹಿತಸ್ಯ ವಿದಧೇ ಶಂಭುಃ ಪುರಾಣಾಖ್ಯಂ ಸುಧಾರಸಂ ॥೨೭॥**

೨೭ ಈ ಕಲಿಯುಗದಲ್ಲಿ ಮಂದಬುದ್ಧಿಯುಳ್ಳವರು, ಧರ್ಮಾಚಾರರಹಿತರು ಇಂತಹವರು ಸದ್ಗತಿಯನ್ನು ಹೊಂದಲೆಂದೇ ಶಿವಪುರಾಣವೆಂಬ ಅಮೃತವನ್ನು ಉಂಟುಮಾಡಿರುವನು.

'ಅಮೃತ ಎಂದರೆ ಅಮರಣ ಧರ್ಮವುಳ್ಳದ್ದು ಎಂದರೆ ಮರಣವೆಂಬ ಧರ್ಮವಿಲ್ಲದ್ದು ಮರಣವಿಲ್ಲವೆಂದರೆ ಜನ್ಮವೂ ಇಲ್ಲವೆಂಬು ಅರ್ಥ ಎಂದರೆ ಮೋಕ್ಷಪ್ರದವು ಎಂದರ್ಥ.

**ಏಕೋಽಜರಾಮರಃ ಸ್ಯಾದ್ವೈ ಪಿಬನ್ನೇವಾಮೃತಂ ಪುಮಾನ್ ।**
**ಶಂಭೋಃ ಕಥಾಮೃತಂ ಕುರ್ಯಾತ್ಕುಲಮೇವಾಜರಾಮರಂ ॥೨೮॥**

೨೮ ಅಮೃತ ಪಾನಮಾಡಿದನೊಬ್ಬನೇ ಮುಪ್ಪು, ಸಾವುಗಳಿಲ್ಲದವನಾಗುವನು ಆದರೆ ಶಿವಪುರಾಣವೆಂಬ ಅಮೃತಪಾನಮಾಡಿದವನು ತನ್ನ ಕುಲವನ್ನೇ ಅಜರಾಮರವನ್ನಾಗಿ ಮಾಡುವನು. ಎಂದರೆ ತನ್ನ ಕುಲಕ್ಕೆಲ್ಲಾ ಸದ್ಗತಿ ಉಂಟಾಗುವಂತೆ ಮಾಡುವನು.

**ಸದಾ ಸೇವ್ಯಾ ಸದಾ ಸೇವ್ಯಾ ಸದಾ ಸೇವ್ಯಾ ವಿಶೇಷತಃ ।**
**ಏತಚ್ಛಿವಪುರಾಣಸ್ಯ ಕಥಾ ಪರಮಪಾವನೀ ॥೨೯॥**

೨೯ ಪರಮ ಪವಿತ್ರವಾದ ಈ ಶಿವಪುರಾಣದ ಎಲ್ಲಾ ಕಥೆಗಳೂ ಮೋಕ್ಷಪ್ರದವಾದುವು. ಆದ್ದರಿಂದ ಎಲ್ಲರಿಂದಲೂ ಯಾವಾಗಲೂ ಸೇವಿಸಲ್ಪಡತಕ್ಕದ್ದಾಗಿದೆ. ಸದಾಸೇವ್ಯಂ ಎಂದು ೩ ಬಾರಿ ಹೇಳಿದ್ದರಿಂದ ಉದಾಸೀನ ಮಾಡದೇ ಖಂಡಿತವಾಗಿಯೂ ವಿಶೇಷ ಕಾರ್ಯವೆಂದು ಪರಿಗಣಿಸಿ ಸೇವಿಸಬೇಕು ಎಂದು ಅರ್ಥ.

**ಏತಚ್ಛಿವಪುರಾಣಸ್ಯ ಕಥಾಶ್ರವಣಮಾತ್ರತಃ ।**
**ಕಿಂ ಬ್ರವೀಮಿ ಫಲಂ ತಸ್ಯ ಶಿವಶ್ಚಿತ್ತಂ ಸಮಾಶ್ರಯೇತ್ ॥೩೦॥**

೩೦ ಈ ಶಿವಪುರಾಣ ಶ್ರವಣದ ಫಲವನ್ನು ಏನೆಂದು ಹೇಳಲಿ ಈ ಪುರಾಣ ಶ್ರವಣಪುಣ್ಯದಿಂದ ಶ್ರವಣ ಮಾಡುವವನ ಮನಸ್ಸಿನಲ್ಲಿ ಶಿವನೇ ಸಾಕ್ಷಾತ್ತಾಗಿ ವಾಸಿಸುವನು.

ಚತುರ್ವಿಂಶತಿಸಾಹಸ್ರೋ ಗ್ರಂಥೋऽಯಂ ಸಪ್ತಸಂಹಿತಃ ।
ಭಕ್ತಿತ್ರಿಕಸುಸಂಪೂರ್ಣ ಶೃಣುಯಾತ್ತಂ ಪರಾದರಾತ್ ॥೩೧॥

೩೧ ಈ ಗ್ರಂಥವು ಇಪ್ಪತ್ತುನಾಲ್ಕು ಸಾವಿರ ಶ್ಲೋಕಗಳಿಂದ ಕೂಡಿ ಏಳು ಸಂಹಿತೆಗಳಿಂದ ಕೂಡಿದೆ. ಭಕ್ತಿ, ಜ್ಞಾನ, ವೈರಾಗ್ಯಗಳನ್ನು ತಿಳಿಸುವ ಈ ಪುರಾಣವನ್ನು ಅತ್ಯಂತ ಭಕ್ತಿ ಶ್ರದ್ಧೆಗಳಿಂದ ಕೇಳಬೇಕು.

ವಿದ್ಯೇಶ್ವರಸಂಹಿತಾದ್ಯಾ ದ್ವಿತೀಯಾ ರುದ್ರಸಂಹಿತಾ ।
ತೃತೀಯಾ ಶತರುದ್ರಾಖ್ಯಾ ಕೋಟಿರುದ್ರಾ ಚತುರ್ಥಿಕಾ ॥೩೨॥
ಪಂಚಮ್ಯು ಮಾಸಂಹಿತೋಕ್ತಾ ಷಷ್ಠೀ ಕೈಲಾಸಸಂಹಿತಾ ।
ಸಪ್ತಮೀ ವಾಯುವೀಯಾಖ್ಯಾ ಸಪ್ತೈವಂ ಸಂಹಿತಾ ಇಹ ॥೩೩॥

೩೨, ೩೩. ಈ ಪುರಾಣದಲ್ಲಿ ವಿದ್ಯೇಶ್ವರ ಸಂಹಿತೆ ಎಂಬುದು ಮೊದಲನೆಯದು, ಎರಡನೆಯದು ರುದ್ರ ಸಂಹಿತಾ, ಮೂರನೆಯದು ಶತರುದ್ರ ಸಂಹಿತಾ, ನಾಲ್ಕನೆಯದು ಕೋಟಿ ರುದ್ರಸಂಹಿತಾ, ಐದನೆಯದು ಉಮಾಸಂಹಿತಾ, ಆರನೆಯದು ಕೈಲಾಸ ಸಂಹಿತಾ, ಏಳನೆಯದು ವಾಯುವೀಯ ಸಂಹಿತಾ ಹೀಗೆ ಏಳು ಸಂಹಿತೆಗಳು ಇಲ್ಲಿವೆ.

ಸಸಪ್ತಸಂಹಿತಂ ದಿವ್ಯಂ ಪುರಾಣಂ ಶಿವಸಂಜ್ಞಕಂ ।
ವರೀವರ್ತಿ ಬ್ರಹ್ಮತುಲ್ಯಂ ಸರ್ವೋಪರಿಗತಿಪ್ರದಂ ॥೩೪॥

೩೪ ಈ ಏಳು ಸಂಹಿತೆಗಳಿಂದ ಕೂಡಿದ ಶ್ರೇಷ್ಠವಾದ ಈ ಶಿವಪುರಾಣವು ಪರಬ್ರಹ್ಮ ಸ್ವರೂಪವಾದುದು. ಎಲ್ಲ ವಿಧದಿಂದಲೂ ಶ್ರೇಷ್ಠವಾದ ಗತಿಯನ್ನು ನೀಡುವುದು.

ಏತಚ್ಛಿವಪುರಾಣಂ ಹಿ ಸಪ್ತಸಂಹಿತಮಾದರಾತ್ ।
ಪರಿಪೂರ್ಣಂ ಪಠೇದ್ಯಸ್ತು ಸ ಜೀವನ್ಮುಕ್ತ ಉಚ್ಯತೇ ॥೩೫॥

೩೫ ಈ ರೀತಿಯ ಉತ್ತಮ ಮಹಿಮೆಯುಳ್ಳ ಸಪ್ತ ಸಂಹಿತೆಗಳಂದೊಡಗೂಡಿದ ಶಿವಪುರಾಣವನ್ನು ಸಂಪೂರ್ಣವಾಗಿ ಯಾವನು ಭಕ್ತಿಯಿಂದ ಓದುವನೋ ಅವನು ಜೀವನ್ಮುಕ್ತನೆಂದು ಹೇಳಲ್ಪಡುತ್ತಾನೆ.

ಪುಮಾನಜ್ಞಾನತಸ್ತಾವದ್ಭ್ರಮತೇऽಸ್ಮಿನ್ಭವೇ ಮುನೇ ।
ಯಾವತ್ಕರ್ಣಗತಂ ನಾಸ್ತಿ ಪುರಾಣಂ ಶೈವಮುತ್ತಮಂ ॥೩೬॥

೩೬ ಮನುಷ್ಯನು ಇಂತಹ ಉತ್ತಮವಾದ ಶಿವಪುರಾಣವನ್ನು ಕೇಳದೇ ಇರುವವರೆಗೆ ಸಂಸಾರದಲ್ಲಿ ತೊಳಲಾಡುತ್ತಿರುತ್ತಾನೆ. ಯಾವಾಗ ಶಿವಪುರಾಣ ಶ್ರವಣವನ್ನು ಮಾಡುವನೋ ಕೂಡಲೇ ಅವನಿಗೆ ಜ್ಞಾನೋದಯವಾಗುವುದು.

ವಿಶೇಷ ವಿಚಾರ ಎಂದರೆ ಎಲ್ಲಾ ಮನುಷ್ಯರಿಗೆ ಅಜ್ಞಾನದ ವಾಸನೆಯಿಂದ ಸಂಸಾರ ಬಂಧನವೂ ಜ್ಞಾನದ ಸಂಬಂಧದಿಂದ ಸಂಸಾರದಲ್ಲಿ ವೈರಾಗ್ಯವು ಉಂಟಾಗುವುದು. ಅಜ್ಞಾನ ವೆಂದರೆ ಮಾಯೆಯಿಂದ ಆವರಿಸಿರುವುದು. ಜ್ಞಾನವೆಂದರೆ ಮಾಯೆಯ ನಿವಾರಣೆ ಇದು ಜ್ಞಾನಿಗಳಿಗೂ ಸಂಬಂಧವಿರುತ್ತದೆ. ಇದನ್ನೇ ಮಾರ್ಕಂಡೇಯ ಪುರಾಣದಲ್ಲಿ ಹೀಗೆ ವಿವರಿಸಿದ್ದಾರೆ.

**ಜ್ಞಾನಿನಾಮಪಿ ಚೇತಾಂಸಿ ದೇವೀ ಭಗವತೀಸಾ ।**
**ಬಲಾದಾಕೃಷ್ಯ ಮೋಹಾಯಾ ಮಹಾಮಾಯಾ ಪ್ರಯಚ್ಛತಿ॥**

ಎಂದರೆ ಜ್ಞಾನಿಯಾದಂತಹವನ ಮನಸ್ಸನ್ನೂ ಸಹ ದೇವಿಯು ಬಲವಂತವಾಗಿ ಆಕರ್ಷಿಸಿ ಸೆಳೆದು ಮಹಾಮಾಯೆಯ ಅಧೀನವವನ್ನಾಗಿ ಮಾಡಿ ಮೋಹಾದಿಗಳಲ್ಲಿ ಸೇರುವಂತೆ ಮಾಡುತ್ತಾಳೆ ಎಂದು ಅಭಿಪ್ರಾಯವು.

**ಕಿಂ ಶ್ರುತೈರ್ಬಹುಭಿಃ ಶಾಸ್ತ್ರೈಃ ಪುರಾಣೈಶ್ಚ ಭ್ರಮಾವಹೈಃ ।**
**ಶೈವಂ ಪುರಾಣಮೇಕಂ ಹಿ ಮುಕ್ತಿದಾನೇನ ಗರ್ಜತಿ ॥೩೭॥**

೩೭ ಈ ಪ್ರಪಂಚದಲ್ಲಿ ಭ್ರಮೆಯನ್ನು ಉಂಟುಮಾಡುವಂತಹ ಅನೇಕ ಶಾಸ್ತ್ರಗಳೂ ಪುರಾಣಗಳೂ ಅನೇಕವಿದೆ. ಅವುಗಳ ಶ್ರವಣದಿಂದ ಏನು ಪ್ರಯೋಜನ ? ಒಂದೇ ಒಂದಾದ ಶಿವಪುರಾಣ ಶ್ರವಣದಿಂದ ಮುಕ್ತಿಪ್ರಾಪ್ತಿ ಎಂದು ಶಿವಪುರಾಣವು ಗರ್ಜಿಸುತ್ತಿರುವುದು ಎಂದರೆ ಸ್ಪಷ್ಟವಾಗಿ ತಿಳಿಸುತ್ತಿರುವುದು ಎಂದರ್ಥ.

**ಏತಚ್ಛಿವಪುರಾಣಸ್ಯ ಕಥಾ ಭವತಿ ಯದ್ಗೃಹೇ ।**
**ತೀರ್ಥಭೂತಂ ಹಿ ತದ್ಗೇಹಂ ವಸತಾಂ ಪಾಪನಾಶನಂ ॥೩೮॥**

೩೮ ಈ ರೀತಿಯ ಮಹಾಮಹಿಮೆಯುಳ್ಳ ಶಿವಪುರಾಣದ ಕಥೆಯು ಯಾವ ಮನೆಯಲ್ಲಿ ನಡೆಯುವುದೋ ಅಂತಹ ಮನೆಯು ಪವಿತ್ರವಾದ ತೀರ್ಥಗಳಿಂದ ಕೂಡಿದ್ದಾಗಿರುತ್ತದೆ. ಅಂತಹ ಮನೆಯಲ್ಲಿ ವಾಸಿಸುವವರೆಲ್ಲರ ಪಾಪಗಳೂ ಸಹ ನಾಶವಾಗುತ್ತದೆ.

ಅಶ್ವಮೇಧಸಹಸ್ರಾಣಿ ವಾಜಪೇಯಶತಾನಿ ಚ ।
ಕಲಾಂ ಶಿವಪುರಾಣಸ್ಯ ನಾಹರ್ಂತಿ ಖಲು ಷೋಡಶೀಂ ||೩೯||

೩೯ ಅಶ್ವಮೇಧ ಯಾಗಗಳು ಸಾವಿರ, ವಾಜಪೇಯಗ ನೂರು ಇವುಗಳನ್ನು ಆಚರಿಸುವುದರಿಂದ ಯಾವ ಫಲ ಪ್ರಾಪ್ತಿಯಾಗುವುದೋ ಅಂತಹ ಫಲವು ಶಿವಪುರಾಣದ ಪಠಣ ಫಲದ ಹದಿನಾರನೇ ಒಂದು ಭಾಗಕ್ಕೆ ಸಮನಾಗುವುದು.

ತಾವತ್ಸ ಪ್ರೋಚ್ಯತೇ ಪಾಪೀ ಪಾಪಕೃನ್ಮುನಿಸತ್ತಮ ।
ಯಾವಚ್ಛಿವಪುರಾಣಂ ಹಿ ನ ಶೃಣೋತಿ ಸುಭಕ್ತಿತಃ ||೪೦||

೪೦ ಎಲ್ಲಿಯವರೆವಿಗೂ ಶಿವಪುರಾಣವನ್ನು ಭಕ್ತಿಯಿಂದ ಮನುಷ್ಯನೂ ಕೇಳುವುದಿಲ್ಲವೋ ಅಲ್ಲಿಯವರೆವಿಗೂ ಅವನು ಪಾಪಿಷ್ಠನೆಂದೇ ಹೇಳಲ್ಪಡುತ್ತಾನೆ.

ಗಂಗಾದ್ಯಾಃ ಪುಣ್ಯನದ್ಯಶ್ಚ ಸಪ್ತಪುರ್ಯೋ ಗಯಾ ತಥಾ ।
ಏತಚ್ಛಿವಪುರಾಣಸ್ಯ ಸಮತಾಂ ಯಾಂತಿ ನ ಕ್ವಚಿತ್ ||೪೧||

೪೧ ಗಂಗಾದಿ ಪುಣ್ಯನದಿಗಳೂ, ಏಳು ಪುಣ್ಯ ನಗರಗಳೂ, ಪುಣ್ಯಕ್ಷೇತ್ರವಾದ ಗಂಗೆಯೂ ಸಹ, ಯಾವಾಗಲೂ ಈ ಶಿವಪುರಾಣಕ್ಕೆ ಸರಿ ಸಮವಾಗಲಾರದು.

೧. ಗಂಗಾ, ೨.ಯಮುನಾ, ೩.ಗೋದಾವರಿ, ೪.ಸರಸ್ವತಿ, ೫.ನರ್ಮದಾ, ೬.ಸಿಂಧು, ೭.ಕಾವೇರಿ, ಇವು ಪುಣ್ಯ ಕರಗಳಾದ ಸಪ್ತಪುಣ್ಯನದಿಗಳು ಇವುಗಳ ಸ್ಮರಣೆ, ಸೇವನೆ, ಪೂಜನಗಳಿಂದ ಸದ್ಗತಿ ಪ್ರಾಪ್ತಿ.

ಏಳು ಪುಣ್ಯಕರ ನಗರಗಳು

ಅಯೋಧ್ಯಾ ಮಧುರಾ ಮಾಯಾ ಕಾಶೀ ಕಾಂಚೀ ಹ್ಯವಂತಿಕಾ ।
ಪುರೀ, ಡ್ವಾರವತೀ ಚೈವ ಸಪ್ತೈತಾಃ ಮೋಕ್ಷದಾಯಕಾಃ ಎಂದು

ಎಂದರೆ ೧. ಅಯೋಧ್ಯಾ, ೨.ಮಧುರಾ, ೩.ಹರಿದ್ವಾರ, ೪. ಕಾಶೀ, ೫..ಕಾಂಚೀ, ೬.ಅವಂತಿಕಾಪುರೀ, ೭.ದ್ವಾರವತೀ ಎಂಬುದಾಗಿ ಏಳು ನಗರಗಳು ಮೋಕ್ಷ ದಾಯಕಗಳು ಎಂದರ್ಥ, ಎಂದರೆ ಇವುಗಳಿಗಿಂತಲೂ ಶಿವಪುರಾಣ ಶ್ರವಣಾದಿಗಳು ಶ್ರೇಷ್ಠವೆಂದು ಅಭಿಪ್ರಾಯ.

**ನಿತ್ಯಂ ಶಿವಪುರಾಣಸ್ಯ ಶ್ಲೋಕಂ ಶ್ಲೋಕಾರ್ಧಮೇವ ಚ ।**
**ಸ್ವಮುಖೇನ ಪಠೇದ್ಭಕ್ತ್ಯಾ ಯದೀಚ್ಛೇತ್ಪರಮಾಂ ಗತಿಂ ॥೪೨॥**

೪೨ ಪ್ರತಿದಿನದಲ್ಲೂ ಶಿವಪುರಾಣದ ಒಂದು ಶ್ಲೋಕವನ್ನಾಗಲೀ ಅಥವಾ ಅರ್ಧ ಶ್ಲೋಕವನ್ನಾಗಲೀ ತನ್ನ ಮುಖದಲ್ಲಿ ನಿತ್ಯಪಾರಾಯಣದಂತೆ ಯಾವನು ಭಕ್ತಿಯಿಂದ ಪಠಿಸುವನೋ ಅವನು ಉತ್ತಮವಾದ ಗತಿಯನ್ನು ಎಮೋಕ್ಷವನ್ನುಏ ಹೊಂದುವನು, ಉತ್ತಮಗತಿಯನ್ನು ಇಚ್ಛಿಸುವವನು ಈ ರೀತಿ ಪಠಿಸಬೇಕು.

**ಏತಚ್ಛಿವಪುರಾಣಂ ಯೋ ವಾಚಯೇದರ್ಥತೋಽನಿಶಂ ।**
**ಪಠೇದ್ವಾ ಪ್ರೀತಿತೋ ನಿತ್ಯಂ ಸ ಪುಣ್ಯಾತ್ಮಾ ನ ಸಂಶಯಃ ॥೪೩॥**

೪೩ ಈ ಪವಿತ್ರ ಶಿವಪುರಾಣವನ್ನು ಯಾವನು ಯಾವಾಗಲೂ ಅರ್ಥಾನುವಾದ ಮಾಡುವನೋ ಅಥವಾ ಪ್ರೀತಿಯಿಂದ ದಿನವೂ ಓದುವನೋ ಅಂತಹವನು ಪುಣ್ಯಾತ್ಮನೇ ಸರಿ. ಇದರಲ್ಲಿ ಸಂಶಯವೇ ಇಲ್ಲ.

**ಅಂತಕಾಲೇ ಹಿ ಯಶ್ಚೈನಂ ಶೃಣುಯಾದ್ಭಕ್ತಿತಸ್ಸುಧೀಃ ।**
**ಸುಪ್ರಸನ್ನೋ ಮಹೇಶಾನಸ್ತಸ್ಮೈ ಯಚ್ಛತಿ ಸ್ವಂ ಪದಂ ॥೪೪॥**

೪೪ ಅಂತ್ಯಕಾಲೇ ಎಂದರೆ ಅಂತ್ಯಕಾಲದಲ್ಲಿ ಅರ್ಥಾತ್ ಮರಣ ಕಾಲದಲ್ಲಿ ಯಾವ ಮನುಷ್ಯನು ಈ ಶಿವಪುರಾಣವನ್ನು ಅತ್ಯಂತ ಭಕ್ತಿಯಿಂದ ಶ್ರವಣ ಮಾಡುವನೋ ಅಂತಹವನಿಗೆ ಈಶ್ವರನು ಪ್ರಸನ್ನನಾಗಿ ತನ್ನ ಪದವನ್ನು ನೀಡುವನು ಎಂದರೆ ಕೈಲಾಸಪ್ರಾಪ್ತಿಯೆಂದು ಅರ್ಥವು.

ವಿ.ವಿ ನಮ್ಮ ಎಲ್ಲಾ ಶಾಸ್ತ್ರಗಳೂ ಅಂತ್ಯಕಾಲದಲ್ಲಿ ಯಾವುದನ್ನು ಸ್ಮರಣೆ ಮಾಡುತ್ತಾನೋ ಅದನ್ನೇ ಮುಂದೆ ಹೊಂದುತ್ತಾನೆಂದು ಹೇಳಿದೆ. ಇದಕ್ಕೆ ಪ್ರಮಾಣವೆಂದರೆ ಭಾಗವತದಲ್ಲಿರುವ ಅಜಾಮಿಳನ ಘಟನೆ. ಅಜಾಮಿಳನೆಂಬುವ ಬ್ರಾಹ್ಮಣನೋರ್ವನು ತನ್ನ ವರ್ಣೋಚಿತವಾದ ಸತ್ಕರ್ಮಗಳನ್ನು ತ್ಯಜಿಸಿ ನಿಂದ್ಯವಾದ ಕರ್ಮಗಳನ್ನು ಮಾಡುತ್ತಾ ಪರಮ ಪಾಪಿಯಾಗಿರುತ್ತಾನೆ. ಮರಣ ಶಯ್ಯೆಯಲ್ಲಿರುವ ಅವನು ತನ್ನ ಮಗನಾದ ನಾರಾಯಣನನ್ನು ನೋಡಿ 'ನಾರಾಯಣ' ಎಂದು ಮೂರು ಬಾರಿ ಕರೆಯುತ್ತಾನೆ. ನಂತರವೇ ಪ್ರಾಣತ್ಯಾಗ ಮಾಡುತ್ತಾನೆ. ಆದರಿಂದಲೇ ಅವನಿಗೆ ವಿಷ್ಣು ಸಾಯುಜ್ಯ ಪ್ರಾಪ್ತಿಯಾಗುತ್ತದೆ.

ಏತಚ್ಛಿವಪುರಾಣಂ ಯಃ ಪೂಜಯೇನ್ನಿತ್ಯಮಾದರಾತ್ ।
ಸ ಭುಕ್ತ್ವೇಹಾಖಿಲಾನ್ಕಾಮಾನಂತೇ ಶಿವಪದಂ ಲಭೇತ್ ॥೪೫॥

೪೫ ಯಾವನು ಈ ಶಿವಪುರಾಣವನ್ನು ಪ್ರತಿನಿತ್ಯವೂ ಭಕ್ತಿ, ಶ್ರದ್ಧೆಗಳಿಂದ ಪೂಜಿಸುವನೋ ಅಂತಹವನು ಈ ಲೋಕದಲ್ಲಿ ಅನುಭವಿಸುವ ಸುಖಗಳನ್ನನುಭವಿಸಿ, ಕಡೆಗೆ ಶಿವಸಾಯುಜ್ಯವನ್ನು ಪಡೆಯುವನು.

ಏತಚ್ಛಿವಪುರಾಣಸ್ಯ ಕುರ್ವನ್ನಿತ್ಯಮತಂದ್ರಿತಃ ।
ಪಟ್ಟವಸ್ತ್ರಾದಿನಾ ಸಮ್ಯಕ್ ಸತ್ಕಾರಂ ಸ ಸುಖೀ ಸದಾ ॥೪೬॥

೪೬ ಈ ಶಿವಪುರಾಣವನ್ನು ಯಾವನು ನಿತ್ಯವೂ ಶ್ರದ್ಧೆಯಿಂದ ರೇಷ್ಮೆಬಟ್ಟೆಗಳಿಂದ ಸತ್ಕರಿಸಿ ಪೂಜಿಸುವನೋ ಅಂತಹವನು ಯಾವಾಗಲೂ ಸುಖಿಯಾಗುವನು.

ಶೈವಂ ಪುರಾಣಮಮಲಂ ಶೈವಸರ್ವಸ್ವಮಾದರಾತ್ ।
ಸೇವನೀಯಂ ಪ್ರಯತ್ನೇನ ಪರತ್ರೇಹ ಸುಖೇಪ್ಸುನಾ ॥೪೭॥

೪೭ ಇಹ, ಪರಗಳೆರಡರಲ್ಲಿಯೂ ಸುಖವನ್ನು ಬಯಸುವವನು ಜ್ಞಾನಪ್ರದವಾದ ಶೈವಪುರಾಣವನ್ನು, ಶಿವಸಂಬಂಧವಾದ ಎಲ್ಲಾ ವಿಚಾರಗಳನ್ನೂ ಪ್ರಯತ್ನಪೂರ್ವಕವಾಗಿ ಸೇವಿಸಬೇಕು.

ಚತುವರ್ಗಪ್ರದಂ ಶೈವಂ ಪುರಾಣಮಮಲಂ ಪರಂ ।
ಶ್ರೋತವ್ಯಂ ಸರ್ವದಾ ಪ್ರೀತ್ಯಾ ಪಠಿತವ್ಯಂ ವಿಶೇಷತಃ ॥೪೮॥

೪೮ ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ನಾಲ್ಕು ಪುರುಷಾರ್ಥವನ್ನು ನೀಡುವಂತಹ, ಈ ಶ್ರೇಷ್ಠವಾದ ಪುರಾಣವನ್ನು ಸರ್ವದಾ ಕೇಳಬೇಕು. ತಾನೇ ಪ್ರೀತಿಯಿಂದ ಓದಿದರೆ ವಿಶೇಷವಾದ ಫಲವುಂಟು.

ವೇದೇತಿಹಾಸಶಾಸ್ತ್ರೇಷು ಪರಂ ಶ್ರೇಯಸ್ಕರಂ ಮಹತ್ ।
ಶೈವಂ ಪುರಾಣಂ ವಿಜ್ಞೇಯಂ ಸರ್ವಥಾ ಹಿ ಮುಮುಕ್ಷುಭಿಃ ॥೪೯॥

೪೯ ವೇದಗಳು, ಇತಿಹಾಸಗಳು, ಸಕಲಶಾಸ್ತ್ರಗಳು ಇವುಗಳೆಲ್ಲಕ್ಕೂ ಉತ್ತಮವಾಗಿ ಈ ಪುರಾಣವು ದೊಡ್ಡದಾಗಿಯೂ ಪುರುಷನಿಗೆ ಶ್ರೇಯಸ್ಕರವೂ ಆಗಿದೆ. ಈ ಶಿವಪುರಾಣವು ಶ್ರೇಷ್ಠವಾದದ್ದೇ. ಮೋಕ್ಷ ಬಯಸುವವರು ತಿಳಿದು ಅಧ್ಯಯನ ಮಾಡಬೇಕು.

ಶೈವಂ ಪುರಾಮಮಿದಮಾತ್ಮವಿದಾಂ ವರಿಷ್ಠಂ ।
ಸೇವ್ಯಂ ಸದಾ ಪರಮವಸ್ತು ಸತಾಂ ಸಮರ್ಚ್ಯಂ ।। 47।।
ತಾಪತ್ರಯಾಭಿಶಮನಂ ಸುಖದಂ ಸದೈವ
ಪ್ರಾಣಪ್ರಿಯಂ ವಿಧಿಹರೀಶಮುಖಾಮರಾಣಾಂ ।೫೦।।

೫೦ ಈ ಶೈವಪುರಾಣವು ಆತ್ಮತತ್ವವನ್ನು ತಿಳಿದವರಿಗೆ ಶ್ರೇಷ್ಟವಾದದ್ದಾಗಿದೆ. ಸಕಲ ಸಜ್ಜನರಿಂದ ಯಾವಾಗಲೂ ಉತ್ಕೃಷ್ಟವಾದದ್ದೆಂದು ಸೇವಿಸಲ್ಪಟ್ಟು ಪ್ರಸಿದ್ಧವಾಗಿರುವುದು. ಇದನ್ನು ಪಠನ, ಶ್ರವಣ ಮಾಡುವವರು ೧.ಆಧ್ಯಾತ್ಮಕ, ೨.ಆದಿಧೈವಿಕ, ೩.ಆದಿಭೋತಿಕವೆಂಬ ಸಂಸಾರದಲ್ಲಿರುವ ತಾಪತ್ರಯಗಳನ್ನು ಹೋಗಲಾಡಿಸಿಕೊಂಡು ಸುಖವನ್ನು ಪಡೆಯುವರು. ಬ್ರಹ್ಮ, ವಿಷ್ಣು, ಮಹೇಶ್ವರರೇ ಮೊದಲಾದ ದೇವತೆಗಳಿಗೆ ಪ್ರಾಣಕ್ಕಿಂತಲೂ ಪ್ರಿಯವಾಗಿರುವುದು.

ವಂದೇ ಶಿವಪುರಾಣಂ ಹಿ ಸರ್ವದಾಹಂ ಪ್ರಸನ್ನಧೀಃ ।
ಶಿವಃ ಪ್ರಸನ್ನತಾಂ ಯಾಯಾದ್ದದ್ಯಾತ್ಸ್ವಪದಯೋ ರತಿಂ ।।೫೧।।

೫೧ ಇಂತಹ ಮಹಾಮಹಿಮಗಳಿಂದ ಕೂಡಿದ ಈ ಶಿವಪುರಾಣವನ್ನು ಯಾವಾಗಲೂ ನಾನು ಸುಪ್ರಸನ್ನ ಮನಸ್ಕನಾಗಿ ನಮಸ್ಕರಿಸುತ್ತೇನೆ. ಇದರಿಂದ ಶಿವನು ನನ್ನಲ್ಲಿ ಪ್ರಸನ್ನನಾಗಿ ನನಗೆ ಅವನ ಪಾದಾರವಿಂದಗಳಲ್ಲಿ ಭಕ್ತಿಯನ್ನು ಅನುಗ್ರಹಿಸಲಿ.

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಶಿವಪುರಾಣಮಾಹಾತ್ಮ್ಯಂ
ತನ್ಮಹಿಮವರ್ಣನಂ ನಾಮ ಪ್ರಥಮೋಽಧ್ಯಾಯಃ

ಇಲ್ಲಿಗೆ ಶ್ರೀ ಸ್ಕಾಂದ ಮಹಾಪುರಾಣದಲ್ಲಿ ಶಿವಪುರಾಣ ಮಹಾತ್ಮೆ ಮತ್ತು ಅದರ ಮಹಿಮಾ ವರ್ಣನವೆಂಬ ಮೊದಲನೇ ಅಧ್ಯಾಯವು ಮುಗಿಯುವುದು.

||ಶ್ರೀಃ||

||ಅಥ ಶ್ರೀ ಶಿವಪುರಾಣ ಮಾಹಾತ್ಮ್ಯೇ||

# ದ್ವಿತೀಯೋऽಧ್ಯಾಯಃ

|| ಶೌನಕ ಉವಾಚ ||

ಸೂತ ಸೂತ ಮಹಾಭಾಗ ಧನ್ಯಸ್ತ್ವಂ ಪರಮಾರ್ಥವಿತ್ ।
ಮದ್ಭುತೇಯಂ ಕಥಾ ದಿವ್ಯಾ ಶ್ರಾವಿತಾ ಕೃಪಯಾ ಹಿ ನಃ ||೧||

ಶ್ರೀ ಶೌನಕರು ಹೇಳುತ್ತಾರೆ

೧ ಎಲೈ ಪೂಜ್ಯನಾದ ಸೂತ ಮುನಿಯೇ, ಪರಮಾರ್ಥ ತತ್ವಗಳನ್ನು ತಿಳಿದ ನೀನೇ ಧನ್ಯನು. ನಮ್ಮ ಮೇಲಣ ಪ್ರೀತಿಯಿಂದ ಕೃಪೆ ಮಾಡಿ, ಅದ್ಭುತವಾದ, ದಿವ್ಯವಾದ ಕಥೆಯನ್ನು ಹೇಳಿರುತ್ತೀಯೆ.

ಅಘೌಘವಿಧ್ವಂಸಕರೀ ಮನಃಶುದ್ಧಿವಿಧಾಯನೀ ।
ಶಿವಸಂತೋಷ ಜನನೀ ಕಥೇಯಂ ನಃ ಶ್ರುತಾದ್ಭುತಾ || ೨||

೨ ಈ ಶಿವಸಂಬಂಧವಾದ ಕಥಾಶ್ರವಣವು ಪಾಪಗಳ ಸಮೂಹಗಳನ್ನು ನಾಶಪಡಿಸುವಂತಹದು ಹಾಗೂ ಮನಸ್ಸನ್ನು ಶುದ್ಧಿಗೊಳಿಸುವಂತಹದೂ ಆಗಿರುವುದು. ಈ ಶಿವಪುರಾಣ ಶ್ರವಣದಿಂದ ಶಿವನಿಗೆ ಸಂತೋಷವನ್ನುಂಟುಮಾಡಿದಂತಾಗುವುದು. ಇಂತಹ ಅದ್ಭುತವಾದ ಕಥೆಯು ನಮ್ಮಿಂದ ಈ ಹಿಂದೆ ಕೇಳಲ್ಪಟ್ಟಿರಲಿಲ್ಲ.

ಏತತ್ಕಥಾಸಮಾನಂ ನ ಭುವಿ ಕಿಂಚಿತ್ಪರಾಪರಂ ।
ಶ್ಚಯೇನೇತಿ ವಿಜ್ಞಾತಮಸ್ಮಾಭಿಃ ಕೃಪಯಾ ತವ ||೩||

೩ ಶ್ರೇಷ್ಟವಾದವುಗಳಲ್ಲಿ ಅತ್ಯಂತ ಶ್ರೇಷ್ಟವಾದ ಈ ಕಥೆಗೆ ಸಮಾನವಾದುದು ಈ ಭೂಮಿಯಲ್ಲಿ ಯಾವುದೂ ಇಲ್ಲ. ಈ ರೀತಿಯಾಗಿರತಕ್ಕ ಕಥೆಯು ನಿನ್ನ ಕರುಣೆಯಿಂದ ನಮಗೆ ತಿಳಿಯಲ್ಪಟ್ಟಿತ್ತು.

ಕೇ ಕೇ ವಿಶುಧ್ಯಂತ್ಯನಯಾ ಕಥಯಾ ಪಾಪಿನಃ ಕಲೌ ।
ವದ ತಾನ್ ಕೃಪಯಾ ಸೂತ ಕೃತಾರ್ಥಂ ಭುವನಂ ಕುರು ||೪||

೪ ಎಲೈ ಸೂತನೇ ಈ ಕಲಿಯುಗದಲ್ಲಿ ಯಾವ ರೀತಿಯಾದ ಪಾಪಿಗಳು ಈ ಕಥಾ ಶ್ರವಣದಿಂದ ಪರಿಶುದ್ಧರಾಗುವರೋ ? ಈ ವಿಚಾರವಾಗಿ ನಮ್ಮ ಮೇಲೆ ಕೃಪೆಮಾಡಿ ಹೇಳಿ. ಈ ಭೂಲೋಕವನ್ನು ಕೃತಾರ್ಥವನ್ನಾಗಿ ಮಾಡು.

||ಸೂತ ಉವಾಚ||

**ಯೇ ಮಾನವಾಃ ಪಾಪಕೃತೋ ದುರಾಚಾರರತಾಃ ಖಲಾಃ ।**
**ಕಾಮಾದಿನಿರತಾ ನಿತ್ಯಂ ತೇಽಪಿ ಶುಧ್ಯಂತ್ಯನೇನ ವೈ ||೫||**

ಸೂತರು ಹೇಳುತ್ತಾ

೫ ಈ ಪುರಾಣ ಶ್ರವಣದಿಂದ ಪಾಪಿಗಳಾದ ಮಾನವರು, ಕೆಟ್ಟ ನಡತೆಯಲ್ಲಿಯೇ ಇರುವಂತಹವರೂ, ದುಷ್ಟರೂ, ಕಾಮಾದಿಗಳಲ್ಲಿ ಆಸಕ್ತರೂ ಆಗಿರುವಂತಹವು ಶುದ್ಧರಾಗುವರು.

ವಿ.ಸೂ. ಕಾಮಾದಿ ಎಂದರೆ, ೧.ಕಾಮ, ೨.ಕ್ರೋಧ, ೩.ಲೋಭ, ೪.ಮೋಹ, ೫.ಮದ, ೬.ಮಾತ್ಸರ್ಯ ಗಳೆಂಬ ಅರಿಷಡ್ವರ್ಗಗದಲ್ಲಿ ನಿರತರಾಗಿರುವರು ಎಂದರ್ಥ. ಮೋಕ್ಷಪ್ರಾಪ್ತಿಗೆ ಶತ್ರುವಿನೋಪಾದಿ ಇರುವುದರಿಂದ ಇದಕ್ಕೆ ಅರಿಷಡ್ವರ್ಗ ಎಂದು ಹೆಸರು.

**ಜ್ಞಾನಯಜ್ಞಃ ಪರೋ ಯಂ ವೈ ಭುಕ್ತಿಮುಕ್ತಿಪ್ರದಸ್ತಥಾ ।**
**ಶೋಧನಸ್ಸರ್ವಪಾಪಾನಾಂ ಶಿವಸಂತೋಷಕಾರಕಃ ||೪||**

೬ ಈ ಪುರಾಣವು ಜ್ಞಾನಯಜ್ಞವು. ಎಂದರೆ ದಿವ್ಯಜ್ಞಾನ ಪಡೆಯಲು ಸಾಧನೆಯಾಗಿರುವುದು, ಉತ್ಕೃಷ್ಟವಾದುದು. ಇಹಲೋಕದಲ್ಲಿ ಭಕ್ತಿಯನ್ನು ಪರಲೋಕದಲ್ಲಿ ಮುಕ್ತಿಯನ್ನು ಕೊಡುವಂತಹುದು. ಸರ್ವಪಾಪಗಳನ್ನೂ ಶುದ್ಧಿಗೊಳಿಸುವುದು ಶಿವನಿಗೆ ಸಂತೋಷವನ್ನುಂಟು ಮಾಡುವುದು.

**ತೃಷ್ಣಾಕುಲಾಃ ಸತ್ಯಹೀನಾಃ ಪಿತೃಮಾತೃವಿದೂಷಕಾಃ ।**
**ದಾಂಭಿಕಾ ಹಿಂಸಕಾ ಯೇ ಚ ಶೇಽಪಿ ಶುದ್ಧ್ಯಂತ್ಯನೇನ ವೈ ||೭||**

೭ ಈ ಜ್ಞಾನಯಜ್ಞದಿಂದ ಎಂದರೆ ಪರಾಪರತತ್ವ ವಿಚಾರದಿಂದ ಸುಳ್ಳುಹೇಳುವರು. ತಂದೆ ತಾಯಿಯರನ್ನು ದೂಷಿಸುವವರು, ಡಂಬಾಚಾರನಿರತರು, ಹಿಂಸೆ ಮಾಡುವವರು ಸಹ ಶುದ್ಧಿಯನ್ನು ಹೊಂದುತ್ತಾರೆ.

ಸ್ವವರ್ಣಾಶ್ರಮಧರ್ಮೇಭ್ಯೋ ವರ್ಜಿತಾ ಮತ್ಸರಾನ್ವಿತಾಃ ।
ಜ್ಞಾನಯಜ್ಞೇನ ತೇಲ್ನೇನ ಸಂಪುನಂತಿ ಕಲಾವಪಿ ॥೮॥

೮ ತಮ್ಮ ವರ್ಣ ಮತ್ತು ಆಶ್ರಮಧರ್ಮಗಳನ್ನು ಬಿಟ್ಟಿರುವವರೂ, ಅಸೂಯೆಯುಳ್ಳವರೂ, ಅಧರ್ಮವೇ ಪ್ರಧಾನವಾಗಿರುವ ಈ ಕಲಿಯುಗದಲ್ಲಿ ಜ್ಞಾನಯಜ್ಞದಿಂದ ಚೆನ್ನಾಗಿ ಶುದ್ಧಿಯನ್ನು ಹೊಂದುತ್ತಾರೆ.

ವಿ.ವಿ.ಟೀತ ವರ್ಣ ಎಂದರೆ ಉದಾಹರಣೆಗೆ ಬ್ರಾಹ್ಮಣನು ಷಟ್ಕರ್ಮಗಳನ್ನು ಮಾಡಬೇಕು. ಅವು ಯಾವುವೆಂದರೆ ೧.ಅಧ್ಯಯನ, ೨.ಅಧ್ಯಾಪನ, ೩.ಯಜನ, ೪.ಯಾಜನ, ೫.ದಾನ, ೬.ಪ್ರತಿಗ್ರಹ ಎಂಬ ಆರು ಕರ್ಮಗಳನ್ನು ಮಾಡುತ್ತಿರಬೇಕು. ಕ್ಷತ್ರಿಯಾದಿ ಇತರ ಜಾತಿಯವರು ಎ೧ವಿಅಧ್ಯಯನ, ೨.ಯಜನ, ೩.ದಾನಗಳನ್ನು ಮಾತ್ರ ಮಾಡಬೇಕೆಂದು ಶಾಸ್ತ್ರಗಳಲ್ಲಿ ನಿಯಮಿಸಿರುವರು. ಬ್ರಾಹ್ಮಣನು ಅಧ್ಯಯನು ಎಂದರೆ ತನ್ನ ಶಾಖೆಯ ವೇದವನ್ನು ಅಧ್ಯಯನ ಮಾಡಿ ವೇದಾಂಗಗಳನ್ನು ಶಾಸ್ತ್ರಗಳನ್ನು ಅಧ್ಯಯನ ಮಾಡಿ ಪ್ರತಿದಿನದಲ್ಲೂ ವೇದಾಧ್ಯಯನ ಮಾಡಬೇಕು. ವೇದಾಂಗಗಳೆಂದರೆ ೧.ಶಿಕ್ಷಾ, ೨.ವ್ಯಾಕರಣಂ ೩.ಛಂದಃ ೪.ನಿರುಕ್ತಂ ೫.ಜ್ಯೌತಿಷಂ ತಥಾ

ಕಲ್ಪಶ್ಚೇತಿ ಷಡಂಗಾನಿ ವೇದಸ್ಯಾಹುಃ ಮನೀಕ್ಷಿಣಾಃ॥ ಎಂದು

ಶಿಕ್ಷಾ, ವ್ಯಾಕರಣ, ಛಂದಶ್ಯಾಸ್ತ್ರ, ನಿರುಕ್ತ, ಜ್ಯೋತಿಷಂ, ಕಲ್ಪವೆಂದು ಪ್ರಸಿದ್ಧವಾದ ವೇದದ ಅಂಗಗಳಾದ ಷಡಂಗಗಳನ್ನು ಅಧ್ಯಯನ ಮಾಡಬೇಕು.

ಹೀಗಿರುವ ಆಶ್ರಮ ಧರ್ಮಗಳನ್ನು ಬಿಟ್ಟಿರುವವರೂ ಜ್ಞಾನಯಜ್ಞದಿಂದ ಶುದ್ಧರಾಗುತ್ತಾರೆ.

ಛಲಚ್ಛದ್ಮಕರಾ ಯೇ ಚ ಕ್ರೂರಾಸ್ಸುನಿರ್ದಯಾಃ ।
ಜ್ಞಾನಯಜ್ಞೇನ ಶೇಲ್ನೇನ ಸಂಪುನಂತಿ ಕಲಾವಪಿ ॥೯॥

೯ ಹಠಸ್ವಭಾವದವರೂ, ಮೋಸಗಾರರೂ, ಕ್ರೂರಿಗಳೂ, ನಿರ್ದಯರೂ ಸಹ ಈ ಕಲಿಯುಗದಲ್ಲಿ ಜ್ಞಾನಯಜ್ಞದಿಂದ ಪವಿತ್ರರಾಗುತ್ತಾರೆ.

ಬ್ರಹ್ಮಸ್ವಪುಷ್ಟಾಸ್ಸತತಂ ವ್ಯಬಿಚಾರರತಾಶ್ಚ ಯೇ ।
ಜ್ಞಾನಯಜ್ಞೇನ ತೇಲ್ನೇನ ಸಂಪುನಂತಿ ಕಲಾವಪೀ ॥ ೧೦॥

೧೦ ಯಾವಾಗಲೂ ಬ್ರಹ್ಮಸ್ವವನ್ನು ಅಂದರೆ ಬ್ರಾಹ್ಮಣನ ಸ್ವತ್ತನ್ನು ಅವನಿಗೆ ಮೋಸ

ಮಾಡಿ ಅಪಹರಿಸಿ ಅನುಭವಿಸುವವರು, ಯಾವಾಗಲೂ ವ್ಯಭಿಚಾರದಲ್ಲೇ ಆಸಕ್ತರಾದವರು ಇಂಥಹವರು ಸಹ ಶಿವಜ್ಞಾನವೆಂದು ಪ್ರಸಿದ್ಧವಾದ ಜ್ಞಾನಯಜ್ಞದಿಂದ ಪುನೀತರಾಗುತ್ತಾರೆ.

ಸದಾ ಪಾಪರತಾ ಯೇ ಚ ಯೇ ಶಠಾತಿದುರಾಶಯಾಃ ।
ಜ್ಞಾನಯಜ್ಞೇನ ತೇಲನೇನ ಸಂಪುನಂತಿ ಕಲಾವಪಿ ॥೧೧॥

೧೧ ಯಾವಾಗಲೂ ಪಾಪಕಾರ್ಯದಲ್ಲೇ ಆಸಕ್ತರಾದವರು, ಶಠರೂ, ದುರಾಶೆಯುಳ್ಳವರೂ ಸಹ ಶಿವಪುರಾಣ ಪಠನವೆಂಬ ಜ್ಞಾನಯಜ್ಞದಿಂದ ಪಾಪರಹಿತರಾಗುತ್ತಾರೆ.

ಮಲಿನಾ ದುರ್ಧಿಯಃ ಶಾಂತಾ ದೇವತಾದ್ರವ್ಯಭೋಜಿನಃ ।
ಜ್ಞಾನಯಜ್ಞೇನ ತೇಲನೇನ ಸಂಪುನಂತಿ ಕಲಾವಪಿ ॥೧೨॥

೧೨ ಕೊಳಕರೂ, ಕೆಟ್ಟಬುದ್ಧಿಯುಳ್ಳವರೂ, ದೇವದ್ರವ್ಯ ಭೋಜಿಗಳಾದರೂ ಪಾಪಭೀತಿ ಇಲ್ಲದೇ ಶಾಂತರಾಗಿರುವವರೂ ಸಹ ಈ ಜ್ಞಾನಯಜ್ಞದಿಂದ ಪುನೀತರಾಗುತ್ತಾರೆ.

ಪುರಾಣಸ್ಯಾಸ್ಯ ಪುಣ್ಯಂ ಸನ್ಮಹಾಪಾತಕನಾಶನಂ ।
ಭುಕ್ತಿಮುಕ್ತಿಪ್ರದಂ ಚೈವ ಶಿವಸಂತೋಷಹೇತುಕಂ ॥೧೩॥

೧೩ ಇಷ್ಟೇ ಅಲ್ಲದೇ ಈ ಶಿವಪುರಾಣ ಶ್ರವಣದಿಂದ ಎಇದರ ಪಠಣ ಶ್ರವಣದಿಂದವಿ ಮಹಾಪಾತಕಗಳೂ ನಾಶವಾಗಿ ಭುಕ್ತಿಮುಕ್ತಿಯನ್ನು ಪಡೆಯುವಂತಹವನಾಗುತ್ತಾನೆ. ಹಾಗೇ ಈ ಶಿವಪುರಾಣ ಶ್ರವಣ, ಪಠನಗಳು ಶಿವನಿಗೆ ಸಂತೋಷವನ್ನುಂಟು ಮಾಡುವಂತ ಹದ್ದಾಗಿರುತ್ತದೆ.

ಅತ್ರೈವೋದಾಹರಂತೀಮಮಿತಿಹಾಸಂ ಪುರಾತನಂ ।
ಯಸ್ಯ ಶ್ರವಣಮಾತ್ರೇಣ ಪಾಪಹಾನಿರ್ಭವತ್ಕಲಂ ॥೧೪॥

೧೪ ಈ ವಿಚಾರದಲ್ಲಿ ಹಿಂದೆ ನಡೆದ ಇತಿಹಾಸ ಒಂದನ್ನು ವಿವರಿಸುವೆನು. ಈ ಇತಿಹಾಸವನ್ನು ಕೇಳುವಿಕೆಯಿಂದಲೇ ಪಾಪಗಳು ಪರಿಹಾರವಾಗುವುವು.

೧೫ ಕಿರಾತವೆಂಬ ನಗರದಲ್ಲಿ ಮೂಢನಾದ, ದರಿದ್ರನೂ, ರಸವಸ್ತುಗಳನ
ಮಾರುವವನೂ ಬೆಲ್ಲ ಇತ್ಯಾದಿ ಬ್ರಾಹ್ಮಣೋಚಿವಾದ ಸ್ನಾನ, ಸಂಧ್ಯಾ, ದೇವತಾರ್ಚ
ಮೊದಲಾದ ನಿತ್ಯಕರ್ಮಗಳನ್ನು ಮಾಡದಿರುವಂತಹ ಬ್ರಾಹ್ಮಣ ನಿಷ್ಮನು ಇದ್ದನು.

ಸಂಧ್ಯಾಸ್ನಾನಪರಿಭ್ರಷ್ಟೋ ವೈಶ್ಯವೃತ್ತಿ ಪರಾಯಣಃ ।
ದೇವರಾಜ ಇತಿ ಖ್ಯಾತೋ ವಿಶ್ವಸ್ತಜನವಂಚಕಃ ॥೧೬॥

೧೬ ಆ ಬ್ರಾಹ್ಮಣನ ಹೆಸರು ದೇವರಾಜನೆಂದು, ಸ್ನಾನಾದಿ ನಿತ್ಯಕರ್ಮಗಳನ
ಆತನು ಬಿಟ್ಟು ವಿಶ್ವಾಸಿಗಳನ್ನು ವಂಚಿಸುತ್ತಾ ವೈಶ್ಯವೃತ್ತಿಯಾದ ವ್ಯಾಪಾರದ
ನಿರತನಾಗಿದ್ದನು.

ಸ ವಿಪ್ರಾನ್ ಕ್ಷತ್ರಿಯಾನ್ ವೈಶ್ಯಾನ್ ಶೂದ್ರಾಂಶ್ಚಾಪಿ ತಥಾಪರಾನ್ ।
ಹತ್ವಾ ನಾನಾಮಿಷೇಣೈವ ತತ್ತದ್ಧನಮುಪಾಹರತ್ ॥೧೭॥

೧೭ ಈ ರೀತಿಯಾದ ಗುಣಗಳಿಂದ ಕೂಡಿದ ಬ್ರಾಹ್ಮಣನು ನಾನಾ ವಿಧವಾದ ಆ
ಕಾರಣಗಳಿಂದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರನ್ನೂ ಬೇರೆಯವರನ್ನೂ ಸ
ಕೊಂದು ಅವರವರ ಹಣವನ್ನು ಅಪಹರಿಸುತ್ತಿದ್ದನು.

ಅಧರ್ಮಾದ್ಬಹುವಿತ್ತಾನಿ ಪಶ್ಚಾತ್ತೇನಾರ್ಜಿತಾನಿ ವೈ ।
ನ ಧರ್ಮಾಯ ಧನಂ ತಸ್ಯ ಸ್ವಲ್ಪಂ ಚಾಪೀಹ ಪಾಪಿನಃ ॥೧೮॥

೧೮ ಹೀಗೆ ಅಧರ್ಮದಿಂದ ಬಹಳವಾದ ಧನವನ್ನು ಸಂಪಾದಿಸಿದನು. ಈ
ರೀತಿಯಿಂದ ಧನ ಸಂಪಾದಿಸಿದರೂ ಸಹ, ಈ ಹಣವನ್ನು ಧರ್ಮಕ್ಕಾಗಿ ಸ್ವಲ್ಪವೂ ಕೂ
ಆ ಪಾಪಿಯು ಉಪಯೋಗಿಸುತ್ತಿರಲಿಲ್ಲ.

ಏಕದೈಕತಟಾಗೇ ಸ ಸ್ನಾತುಂ ಯಾತೋ ಮಹೀಸುರಃ ।
ವೇಶ್ಯಾಂ ಶೋಭಾವತೀಂ ನಾಮ ದೃಷ್ಟ್ವಾ ತತ್ರಾತಿವಿಹ್ವಲಃ ॥೧೯॥

ಹೋದ ಆ ಬ್ರಾಹ್ಮಣನು ಅಲ್ಲಿ ಶೋಭಾವತೀ ಎಂಬ ಹೆಸರುಳ್ಳ ವೇಶ್ಯೆಯೊಬ್ಬಳನ್ನು ನೋಡಿ ಅವಳಲ್ಲಿ ಅತ್ಯಂತ ಮೋಹಾವಿಷ್ಟನಾದನು.

**ಸ್ವವಶಂ ಕರ್ತುಂ ಸ ತಾಂ ಮೇನೇ ಪತಿಂ ಕರ್ತುಂ ಚ ಸಾ ತಥಾ ।**
**ಏವಂ ಕಾಮವಶೌ ಧೂರ್ತ್ವಾ ಬಹುಕಾಲಂ ವಿಜಹ್ರತುಃ ॥೨೦॥**

೨೦ ಆಗ ಆ ಸುಂದರಿಯಾದ ವೇಶ್ಯೆಯಾದರೂ ತನ್ನ ವಶನಾದ ಬ್ರಾಹ್ಮಣನಲ್ಲಿ ಧನವಿರುವುದನ್ನು ತಿಳಿದು ಅವನನ್ನು ನೋಡುತ್ತಾ, ಪ್ರೇಮದಿಂದ ಮಾತನಾಡುತ್ತಾ, ಅವನ ಮನಸ್ಸನ್ನು ಅಪಹರಿಸಿ, ಅವಳಲ್ಲಿ ಮನಸ್ಸಾಗುವಂತೆ ಮಾಡಿದಳು.

**ಸ್ತ್ರೀಯಂ ಕರ್ತುಂ ಸ ತಾಂ ಮೇನೇ ಪತಿಂ ಕುರ್ತುಂ ಚ ಸಾ ತಥಾ ।**
**ಏವಂ ಕಾಮವಶೌ ಧೂರ್ತ್ವಾ ಬಹುಕಾಲಂ ವಿಜಹ್ರತುಃ ॥೨೧॥**

೨೧ ಅನಂತರ ಅವರಿಬ್ಬರೂ ಪರಸ್ಪರ ಪತಿಪತ್ನಿಯರಂತೆ ಬಾಳಲು ಒಪ್ಪಿ ಅದರಂತೆ ಇಬ್ಬರೂಸಹ ಬಹು ಕಾಲ ಕಾಮವಶರಾಗಿ ಕ್ರೀಡಿಸಿದರು.

**ಆಸನೇ ಶಯನೇ ಪಾನೇ ಭೋಜನೇ ಕ್ರೀಡನೇ ತಥಾ ।**
**ದಂಪತೀವ ಸದಾ ದ್ವೌ ತು ವರ್ತೈತಾತೇ ಪರಸ್ಪರಂ ॥೨೨॥**

೨೨ ಅವರಿಬ್ಬರೂ ಪರಸ್ಪರ ಹೇಗಿದ್ದರೆಂದರೆ, ಕುಳಿತುಕೊಳ್ಳುವುದು, ಮಲಗುವುದರಲ್ಲಿಯೂ, ಕುಡಿಯುವುದರಲ್ಲಿಯೂ, ಊಟಮಾಡುವುದರಲ್ಲಿಯೂ, ಆಟವಾಡುವುದರಲ್ಲಿಯೂ ಸಹ ಪ್ರೀತಿಯುಳ್ಳವರಾಗಿ ಗಂಡಹೆಂಡಿರಂತೆ ವರ್ತಿಸುತ್ತಿದ್ದರು.

**ಮಾತ್ರಾ ಪಿತ್ರಾ ತಥಾ ಪತ್ನ್ಯಾ ವಾರಿತೋಽಪಿ ಪುನಃ ಪುನಃ ।**
**ನಾಮನ್ಯತ ವಚಸ್ತೇಷಾಂ ಪಾಪವೃತ್ತಿಪರಾಯಣಃ ॥೨೩॥**

೨೩ ಹೀಗಿದ್ದಂತಹ ಆ ಬ್ರಾಹ್ಮಣನನ್ನು ಅವನ ತಂದೆತಾಯಿಯರು ಹಾಗೆ ಅವನ ಹೆಂಡತಿಯೂ ಮತ್ತೆ, ಮತ್ತೆ ಆ ವೇಶ್ಯೆಯ ಸಹವಾಸ ಬಿಡಿಸಲು ಪ್ರಯತ್ನಿಸಿದರೂ ಅವಳ ಸಹವಾಸ ಬಿಡೆಂದು ತಿಳಿಯಹೇಳಿದರೂ ಆ ಪಾಪಕಾರ್ಯ ಮಗ್ನನಾದ ಬ್ರಾಹ್ಮಣನು ಅವರ ಮಾತುಗಳನ್ನು ಕೇಳಲಿಲ್ಲ.

ಏಕದೇಷ್ಯಾ್ಯವಶಾದ್ರಾತ್ರೌ ಮಾತರಂ ಪಿತರಂ ವಧೂಂ ।
ಪ್ರಸುಪ್ತಾನ್ಯವಧೀದ್ದುಷ್ಟೋ ಧನಂ ಶೇಷಾಂ ತಥಾಹರತ್ ॥೨೪॥

೨೪ ಒಂದು ಬಾರಿ ಆ ಪಾಪಿಯು ಹೊಟ್ಟೆಕಿಚ್ಚಿನಿಂದ ರಾತ್ರಿಯಲ್ಲಿ ಮಲ ನಿದ್ರಿಸುತ್ತಿದ್ದ ತಂದೆ, ತಾಯಿ ಮತ್ತು ಹೆಂಡತಿಯನ್ನು ಕೊಂದು ಅವರಲ್ಲಿದ್ದ ಹಣವನ ಅಪಹರಿಸಿದನು.

ಆತ್ಮನೀನಂ ಧನಂ ಯಚ್ಚ ಪಿತ್ರಾದೀನಾಂ ತಥಾ ಧನಂ ।
ವೇಶ್ಯಾಯೈ ದತ್ತವಾನ್ಸರ್ವಂ ಕಾಮೀ ತದ್ಗತಮಾನಸಃ ॥೨೫॥

೨೫ ಅನಂತರ ಅವನಲ್ಲಿದ್ದ ಹಾಗೂ ಹಿಂದೆ ತಂದೆ ಮೊದಲಾದವರಿದಂ ಅಪಹರಿಸಿ ಹಣವನ್ನೆಲ್ಲಾ ಅವನ ಪ್ರೀತಿಪಾತ್ರಳಾದ ಆ ವೇಶ್ಯೆಗೆ ಕೊಟ್ಟನು.

ಸೋಽಭಕ್ಷ್ಯಭಕ್ಷಕಃ ಪಾಪೀ ಮದಿರಾಪಾನಲಾಲಸಃ ।
ಏಕಪಾತ್ರೇ ಸದಾಭೌಕ್ಷೀತ್ ಸವೇಶ್ಯೋ ಬ್ರಾಹ್ಮಣಾಧಮಃ ॥೨೬॥

೨೬ ಹೀಗಾದ ಆ ಬ್ರಾಹ್ಮಣಾಧಮನು ತಿನ್ನಬಾರದನ್ನೆಲ್ಲಾ ತಿನ್ನುತ್ತಾ ಮಧ್ಯಪಾನಾಸಕ್ತನಾಗಿ ಆ ಸೂಳೆಯೊಡನೆ ಒಂದೇ ಪಾತ್ರೆಯಲ್ಲಿ ಊಟವನ್ನೂ ಸಹ ಮಾಡುತ್ತಾ ಕಾಲಾಯಾಪನೆ ಮಾಡುತ್ತಿದ್ದನು.

ಕದಾಚಿದ್ದೈವಯೋಗೇನ ಪ್ರತಿಷ್ಠಾನಮುಪಾಗತಃ ।
ಶಿವಾಲಯಂ ದದರ್ಶಾಸೌ ತತ್ರ ಸಾಧುಜನಾವೃತಂ ॥೨೭॥

೨೭ ಹೀಗಿದ್ದಂತಹ ಆ ಬ್ರಾಹ್ಮಣನು ಒಂದು ಸಾರಿ ದೈವಯೋಗದಿಂದ ಪ್ರತಿಷ್ಠನವೆಂಬ ಸ್ಥಳವನ್ನು ಊರನ್ನು ಹೊಂದಿ ಅಲ್ಲಿದ್ದ ಶಿವನ ದೇವಸ್ಥಾನಕ್ಕೆ ಹೋದನು ನೋಡಿದನು ಅಲ್ಲಿ ಸಾಧು ಜನರೆಲ್ಲಾ ಸೇರಿದ್ದರು.

ಸ್ಥಿತ್ವಾ ತತ್ರ ಚ ವಿಪ್ರೋಽಸೌ ಜ್ವರೇಣಾತಿಪ್ರಪೀಡಿತಃ ।
ಶುಶ್ರಾವ ಸತತಂ ಶೈವೀಂ ಕಥಾಂ ವಿಪ್ರಮುಖೋದ್ಗತಾಂ ॥೨೮॥

೨೮ ವಿಪರೀತವಾದ ಜ್ವರದಿಂದ ಬಳಲುತ್ತಿದ್ದ ಅವನು ಆ ಶಿವಾಲಯದಲ್ಲಿ ಕುಳಿತು ಅಲ್ಲಿ ಬ್ರಾಹ್ಮಣರು ಹೇಳುತ್ತಿರುವ ಶಿವ ಕಥೆಯನ್ನು ಆಕಸ್ಮಾತ್ತಾಗಿ ಕೇಳಿದನು.

**ದೇವರಾಜಶ್ಚ ಮಾಸಾಂತೇ ಜ್ವರೇಣಾಪೀಡಿತೋ ಮೃತಃ।**
**ಬದ್ಧೋ ಯಮಭಟೈಃ ಪಾಶೈರ್ನೀತೋ ಯಮಪುರಂ ಬಲಾತ್ ॥೨೯॥**

೨೯ ಈ ರೀತಿ ಶಿವಕಥೆಯನ್ನು ಕೇಳಿದ ದೇವರಾಜನು ಒಂದು ತಿಂಗಳ ನಂತರದಲ್ಲಿ ಜ್ವರಪೀಡಿತನಾಗ ಮರಣ ಹೊಂದಿದನು. ನಂತರ ಯಮದೂತರು ಪಾಶಗಳಿಂದ ಅವನನ್ನು ಕಟ್ಟಿ ಯಮನ ಪಟ್ಟಣಕ್ಕೆ ಕೊಂಡೊಯ್ದರು.

**ತಾವಚ್ಛಿವಗಣಾಃ ಶುಭ್ರಾಸ್ತ್ರಿಶೂಲಾಂಚಿತಪಾಣಯಃ।**
**ಭಸ್ಮಭಾಸಿತಸರ್ವಾಂಗಾ ರುದ್ರಾಕ್ಷಾಂಚಿತವಿಗ್ರಹಾಃ ॥೩೦॥**

೩೦ ಅದೇ ಸಮಯಕ್ಕೆ ಸರಿಯಾಗಿ ಶುಭ್ರರಾಗಿರುವಂತಹ, ಕೈಗಳಲ್ಲಿ ತ್ರಿಶೂಲಗಳನ್ನು ಧರಿಸಿರುವಂತಹ, ಎಲ್ಲಾ ಅಂಗಗಳಲ್ಲಿಯೂ ವಿಭೂತಿಯನ್ನು ಬಳಿದುಕೊಂಡಿದ್ದ ರುದ್ರಾಕ್ಷಿ ಮಾಲಿಕೆಯನ್ನು ಧರಿಸಿದ್ದಂತಹ ಶಿವದೂತರು ಶಿವಲೋಕದಿಂದ ಯಮನ ಪಟ್ಟಣಕ್ಕೆ ಬಂದರು.

**ಶಿವಲೋಕಾತ್ಸಮಾಗತ್ಯ ಕ್ರುದ್ಧಾ ಯಮಪುರೀಂ ಯಯುಃ ।**
**ತಾಡಯಿತ್ವಾ ತು ತದ್ದೂತಾಸ್ತರ್ಜಯಿತ್ವಾ ಪುನಃ ಪುನಃ ॥೩೧॥**

೩೧ ಹಾಗೆ ಬಂದಂತಹ ಶಿವದೂತರು ಕೋಪದಿಂದ ಯಮದೂತರನ್ನು ಹೊಡೆದು ಮತ್ತೆ ಮತ್ತೆ ಹೆದರಿಸುತ್ತಿದ್ದರು.

**ದೇವರಾಜಂ ಸಮಾಮೋಚ್ಯ ವಿಮಾನೇ ಪರಮಾದ್ಭುತೇ।**
**ಉಪವೇಶ್ಯ ಯದಾ ದೂತಾಃ ಕೈಲಾಸಂ ಗಂತುಮುತ್ಸಕಾಃ ॥೩೨॥**

೩೨ ಅನಂತರ ದೇವರಾಜನನ್ನು ಅವರಿಂದ ಬಿಡಿಸಿಕೊಂಡು ಅತ್ಯದ್ಭುತವಾದ ಸುಂದರ ವಿಮಾನದಲ್ಲಿ ಕುಳ್ಳಿರಿಸಿಕೊಂಡು ಕೈಲಾಸಕ್ಕೆ ಹೊರಡಲನುವಾದರು.

**ತದಾ ಯಮಪುರೀಮಧ್ಯೇ ಮಹಾಕೋಲಾಹಲೋಽಭವತ್।**
**ಧರ್ಮರಾಜಸ್ತು ತಂ ಶ್ರುತ್ವಾ ಸ್ವಾಲಯಾದ್ಬಹಿರಾಗಮತ್ ॥೩೩॥**

೩೩ ಆಗ ಯಮನ ಪಟ್ಟಣದಲ್ಲಿ ಬಹಳ ಗಲಾಟೆಯಾಯಿತು. ಈ ರೀತಿಯ ಗಲಾಟೆಯನ್ನು ಕೇಳಿ ಯಮಧರ್ಮನು ತನ್ನ ವಾಸಸ್ಥಾನದಿಂದ ಹೊರಗೆ ಬಂದನು.

**ದೃಷ್ಟ್ವಾಥ ಚತುರೋ ತೂರ್ತಾ ಸಾಕ್ಷಾದ್ರುದ್ರಾನಿವಾಪರಾ ।**
**ಪೂಜಯಾಮಾಸ ಧರ್ಮಜ್ಞೋ ಧರ್ಮರಾಜೋ ಯಥಾವಿಧಿ ॥೩೪॥**

೩೪ ಬಂದವನೇ ಸಾಕ್ಷಾತ್ ಈಶ್ವರನಂತಿರುವ ಶಿವದೂತರನ್ನು ನೋಡಿ ಯಮಧರ್ಮನು ಧರ್ಮಿಷ್ಠನಾದ್ದರಿಂದ ಅವರನ್ನು ಶಾಸ್ತ್ರ ರೀತಿಯಂತೆ ಅರ್ಘ್ಯೋಪಾದ್ಯಾದಿಗಳಿಂದ ಪೂಜಿಸಿದನು.

**ಜ್ಞಾನೇನ ಚಕ್ಷುಷಾ ಸರ್ವಂ ವೃತ್ತಾಂತಂ ಜ್ಞಾತವಾ ಯಮಃ ।**
**ನ ಭಯಾತ್ ಪೃಷ್ಟವಾ ಕಂಚಿಚ್ಛಂಭೋರ್ದೂತಾನ್ಮಹಾತ್ಮನಃ ॥೩೫॥**

೩೫ ನಂತರ ಅವನು ಜ್ಞಾನದೃಷ್ಟಿಯಿಂದ ಹಿಂದೆ ನಡೆದ ಎಲ್ಲಾ ವಿಚಾರಗಳನ್ನು ತಿಳಿದವನಾಗಿ ಶಿವನ ಭಯದಿಂದ ಮಹಾತ್ಮರಾದ ಶಿವದೂತರನ್ನು ಕುರಿತು ಏನನ್ನೂ ವಿಚಾರಿಸಲಿಲ್ಲ.

**ಪೂಜಿತಾಃ ಪ್ರಾರ್ಥಿತಾಸ್ತೇ ವೈ ಕೈಲಾಸಮಗಮಂಸ್ತದಾ ।**
**ದಯಶ್ಶಿವಾಯ ಸಾಂಬಾಯ ತಂ ದಯಾವಾದಿರಾಶಯೇ ॥೩೬॥**

೩೬ ಹೀಗೆ ಪೂಜಿಸಿ, ಗೌರವಿಸಲ್ಪಟ್ಟ ಆ ಶಿವದೂತರು ದೇವರಾಜನೊಡನೆ ಕೈಲಾಸಕ್ಕೆ ಹೋದರು. ಆನಂತರ ಆ ದೇವರಾಜನನ್ನು ದಯಾನಿಧಿಯಾದ, ಪಾರ್ವತಿಯಿಂದ ಸಮೇತನಾದ ಶಿವನಿಗೆ ಅರ್ಪಿಸಿದರು. ಈ ರೀತಿ ದೇವರಾಜನು ಶಿವನ ಸಾನಿಧ್ಯವನ್ನು ಸೇರಿ ಸುಖದಿಂದ್ದಿದ್ದನು.

**ಧನ್ಯಾ ಶಿವಪುರಾಣಸ್ಯ ಕಥಾ ಪರಮಪಾವನಿ ।**
**ಯಸ್ಯಾಃ ಶ್ರವಣಮಾತ್ರೇಣ ಪಾಪಿಯಾನಪಿ ಮುಕ್ತಿಭಾಕ್ ॥೩೭॥**

೩೭ ಯಾವ ಶಿವಕಥಾಶ್ರವಣದಿಂದ ಪಾಪಿಯಾದ ದೇವರಾಜನೂ ಸಹ ಶಿವನ ಸಾನಿಧ್ಯವನ್ನು ಸೇರಿದನು. ಆದ್ದರಿಂದ ಶಿವಪುರಾಣದ ಕತೆಯು ಧನ್ಯವಾದುದು. ಅತ್ಯಂತ ಪವಿತ್ರವಾದುದೂ ಆಗಿದೆ.

**ಸದಾಶಿವಮಹಾಸ್ಥಾನಂ ಪರಂ ಧಾಮ ಪರಂ ಪದಂ ।**
**ಯದಾಹುರ್ವೇದವಿದ್ವಾಂಸಃ ಸರ್ವಲೋಕೋಪರಿಸ್ಥಿತಂ ॥೩೮॥**

೩೮ ವೇದವನ್ನು ತಿಳಿದಂತಹ ವಿದ್ವಾಂಸರು ಶಿವನ ಆ ವಾಸ ಸ್ಥಾನವಾದ ಕೈಲಾಸವು ಅತ್ಯಂತ ಪರಮ ಪವಿತ್ರವಾದ ಸ್ಥಾನವೆಂದು ಹೇಳುವರು ಮತ್ತೆ ಆ ಕೈಲಾಸ ಪರ್ವತವು ಎಲ್ಲಾ ಲೋಕಗಳಿಗಿಂತಲೂ ಮೇಲೆ ಇರತಕ್ಕದ್ದಾಗಿರುವುದೆಂದೂ ಹೇಳುವರು.

ಬ್ರಾಹ್ಮಣಾಃ ಕ್ಷತ್ರಿಯಾಃ ವೈಶ್ಯಾಃ ಶೂದ್ರಾ ಅನ್ಯೇಽಪಿ ಪ್ರಾಣಿನಃ ।
ಹಿಂಸಿತಾ ಧನಲೋಭೇನ ಬಹವೋ ಯೇನ ಪಾಪಿನಾ ॥ ೩೯ ॥

೩೯ ಯಾವ ಪಾಪಿಯಾದ ದೇವರಾಜನಿಂದ, ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರೂ, ಶೂದ್ರರೂ ಹಾಗೇ ಬೇರೆ ಪ್ರಾಣಿಗಳೂ ಸಹ ಹಣದ ಆಸೆಗಾಗಿ ಹಿಂಸಿಸಲ್ಪಟ್ಟರು.

ಮಾತೃಪಿತೃವಧೂಹಂತಾ ವೇಶ್ಯಾಗಾಮಿ ಚ ಮದ್ಯಪಃ ।
ದೇವರಾಜೋ ದ್ವಿಜಸ್ತತ್ರ ಗತ್ವಾ ಮುಕ್ತೋಽಭವತ್ ಕ್ಷಣಾತ್ ॥ ೪೦ ॥

೪೦ ಹಾಗೆಯೇ ತಾಯಿ, ತಂದೆ ಅಷ್ಟೇ ಅಲ್ಲದೇ ತನ್ನ ಪತ್ನಿಯನ್ನೂ ಕೊಂದು ವೇಶ್ಯೆಯ ಬಳಿ ಹೋಗುತ್ತಿದ್ದ, ಮಧ್ಯಪಾನಾಸಕ್ತನಾಗಿದ್ದ ಬ್ರಾಹ್ಮಣನಾಗಿದ್ದ ದೇವರಾಜನು ಸ್ವಲ್ಪ ಕಾಲದ ಶಿವಕಥಾ ಶ್ರವಣದಿಂದ ಕೈಲಾಸವನ್ನು ಹೊಂದಿ ಕ್ಷಣದಲ್ಲಿಯೇ ಪರಮೇಶ್ವರ ಸಾನಿಧ್ಯವೆಂಬ ಮುಕ್ತಿಯನ್ನು ಪಡೆದನು. ಹೀಗಿರುವಾಗ ಭಕ್ತಿಯಿಂದ ಶಿವಪುರಾಣವನ್ನು ಕೇಳುವವರ ವಿಚಾರದಲ್ಲಿ ಶಿವಲೋಕ ಪ್ರಾಪ್ತಿಯೆಂದು ಹೇಳುವುದೇನಿದೇ

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಶಿವಪುರಾಣಮಾಹತ್ಮ್ಯೇ ।
ದೇವರಾಜಮುಕ್ತಿವರ್ಣನಂ ನಾಮ ದ್ವಿತೀಯೋಽಧ್ಯಾಯಃ ॥41॥

ಇಲ್ಲಿಗೆ ಸ್ಕಾಂದ ಪುರಾಣದ ಶಿವಪುರಾಣ ಮಹಾತ್ಮ್ಯೆಯಲ್ಲಿ ದೇವರಾಜ ಮುಕ್ತಿ ವರ್ಣನವೆಂಬ ಎರಡನೇ ಅಧ್ಯಾಯವು ಮುಗಿದುದು.

||ಶ್ರೀ||

||ಅಥ ಶ್ರೀ ಶಿವಪುರಾಣ ಮಾಹಾತ್ಮ್ಯೇ||

# ತೃತೀಯೋಽಧ್ಯಾಯಃ

||ಶೌನಕ ಉವಾಚ||

**ಸೂತ ಸೂತ ಮಹಾಭಾಗ ಸರ್ವಜ್ಞೋಽಸಿ ಮಹಾಮತೇ ।**
**ತ್ವತ್ಪ್ರಸಾದಾತ್ಕೃತಾರ್ಥೋಽಹಂ ಕೃತಾರ್ಥೋಽಹಂ ಪುನಃ ಪುನಃ ||೧||**

ಶೌನಕ ಮುನಿಗಳು ಸೂತಪುರಾಣೀಕರನ್ನು ಪ್ರಶ್ನಿಸುತ್ತಾರೆ.

೧ ಎಲೈ ಸೂತ ಮಹಾಮುನಿಯೇ, ನೀನು ಎಲ್ಲವನ್ನೂ ತಿಳಿದವನು, ಅತ್ಯಂತ ಬುದ್ಧಿಶಾಲಿಯೂ ಆಗಿದ್ದೀಯೆ. ನಿನ್ನ ಅನುಗ್ರಹದಿಂದ ಮತ್ತೆ ಮತ್ತೆ ಕೃತಾರ್ಥನಾಗಿರುವೆನು.

**ಇತಿಹಾಸಮಿಮಂ ಶ್ರುತ್ವಾ ಮನೋ ಮೇತೀವ ಮೋದತೇ ।**
**ಅನ್ಯಾಮಪಿ ಕಥಾಂ ಶಂಭೋರ್ವದ ಪ್ರೇಮವಿವರ್ಧಿನೀಂ ||೨||**

೨ ಈವರೆವಿಗೆ ನೀನು ಹೇಳಿದ ಕಥೆಯನ್ನು ಹಿಂದೆ ನಡೆದ ಕೇಳಿ ನನ್ನ ಮನಸ್ಸು ಅತ್ಯಂತ ಸಂತೋಷಕ್ಕೊಳಗಾಯಿತು. ಪರಮೇಶ್ವರನಲ್ಲಿ ಪ್ರೀತಿಯನ್ನು ವಿಶೇಷವಾಗಿ ಅಭಿವೃದ್ಧಿಪಡಿಸುವ ಮತ್ತೊಂದು ಕಥೆಯನ್ನು ಹೇಳು.

**ನಾಮೃತಂ ಪಿಬತಾಂ ಲೋಕೇ ಮುಕ್ತೀ ಕ್ವಾಪಿ ಸಭಾಜ್ಯತೇ ।**
**ಶಂಭೋಃ ಕಥಾಸುಧಾಪಾನಂ ಪ್ರತ್ಯಕ್ಷಂ ಮುಕ್ತಿದಾಯಕಂ ||೩||**

೩ ಪ್ರಪಂಚದಲ್ಲಿ ಅಮೃತವನ್ನು ಕುಡಿಯದೇ ಯಾರಿಗೂ ಮುಕ್ತಿಯು ದೊರೆಯುವುದಿಲ್ಲ ಯಾವನು ತಾನೇ ಪಡೆಯುತ್ತಾನೆ ಆದರೆ ಶಿವಕಥೆಯೆಂಬ ಅಮೃತಪಾನವು ಪ್ರತ್ಯಕ್ಷವಾಗಿ ಮುಕ್ತಿಯನ್ನು ಕೊಡುತ್ತದೆ.

**ಧನ್ಯಾ ಧನ್ಯಾ ಕಥಾ ಶಂಭೋಸ್ತ್ವಂ ಧನ್ಯೋ ಧನ್ಯ ಏವ ಚ ।**
**ಯದಾಕರ್ಣನಮಾತ್ರೇಣ ಶಿವಲೋಕಂ ವ್ರಜೇನ್ನರಃ ||೪||**

೪ ಶಿವಕಥೆಯು ಅತ್ಯಂತ ಧನ್ಯವಾದುದು. ಅಂತಹ ಈಶ್ವರ ಸಂಬಂಧವಾದ ದಿವ್ಯ ಕಥೆಯನ್ನು ಹೇಳುವ ನೀನು ಸಹ ಧನ್ಯ ಧನ್ಯನಾಗಿರುವೆ. ಏಕೆಂದರೆ ಯಾವ ಶಿವಕಥೆಯನ್ನು ಕೇಳುವ ಮಾತ್ರದಿಂದಲೇ ಮನುಷ್ಯನು ಶಿವಲೋಕವನ್ನು ಹೊಂದುವನು.

||ಸೂತ ಉವಾಚ||

ಶೃಣು ಶೌನಕ ವಕ್ಷ್ಯಾಮಿ ತ್ವದಗ್ರೇ ಗುಹ್ಯಮಪ್ಯುತ ।
ಯತಸ್ತ್ವಂ ಶಿವಭಕ್ತಾನಾಮಗ್ರಣೀರ್ವೇದವಿತ್ತಮಃ ||೫||

ಸೂತ ಪುರಾಣಿಕರು ಹೇಳುತ್ತಾರೆ

ಎಲೈ ಶೌನಕ ಮುನಿಯೇ ನಿನಗೆ ಅತ್ಯಂತ ಗೋಪ್ಯವಾದ ವಿಚಾರವನ್ನು ಹೇಳುತ್ತೇನೆ ಕೇಳು, ಏಕೆಂದರೆ ನೀನು ವೇದವನ್ನು ತಿಳಿದವನಾಗಿದ್ದೀಯ. ಹಾಗೆಯೇ ಶಿವಭಕ್ತರಲ್ಲಿ ಮೊದಲಿಗನಾಗಿರುವೆ.

ಸಮುದ್ರನಿಕಟೇ ದೇಶೇ ಗ್ರಾಮೋ ಬಾಷ್ಕಲಸಂಜ್ಞಕಃ ।
ವಸಂತಿ ಯತ್ರ ಪಾಪಿಷ್ಠಾ ವೇದಧರ್ಮೋಜ್ಝಿತಾ ಜನಾಃ ||೬||

೬ ಸಮುದ್ರ ತೀರದಲ್ಲಿ ಬಾಷ್ಕಲವೆಂಬ ಗ್ರಾಮವಿದ್ದಿತು. ಆ ಗ್ರಾಮದಲ್ಲಿ ವೇದಧರ್ಮವನ್ನು ತ್ಯಜಿಸಿದಂತಹ ಪಾಪಿಷ್ಠರಾದ ಜನರು ವಾಸಿಸುತ್ತಿದ್ದರು.

ದುಷ್ಟಾ ದುರ್ವಿಷಯಾತ್ಮಾನೋ ನಿರ್ದೈವಾ ಜಿಹ್ಮವೃತ್ತಯಃ ।
ಕೃಷೀವಲಾಃ ಶಸ್ತ್ರಧರಾಃ ಪರಸ್ತ್ರೀಭೋಗಿನಃ ಖಲಾಃ ||೭||

೭ ಅವರು ದುಷ್ಟರೂ, ಕೆಟ್ಟ ವಿಚಾರವುಳ್ಳವರೂ, ದೇವತೆಗಳನ್ನು ಒಪ್ಪದಿರುವವರೂ, ವಕ್ರಬುದ್ಧಿಯುಳ್ಳವರೂ, ವ್ಯವಸಾಯಮಾಡುವವರೂ, ಶಸ್ತ್ರಗಳನ್ನು ಧರಿಸುವವರೂ, ಪರಸ್ತ್ರೀಯರಲ್ಲಿ ಭೋಗಪಡುವವರೂ ಆಗಿದ್ದರು.

ಜ್ಞಾನವೈರಾಗ್ಯಸದ್ಧರ್ಮಂ ನ ಜಾನಂತಿ ಪರಂ ಹಿ ತೇ ।
ಕುಕಥಾಶ್ರವಣಾಧ್ಯೇಷು ನಿರಾತಃ ಪಶುಬುದ್ಧಯಃ ||೮||

ಅವರು ಜ್ಞಾನವೈರಾಗ್ಯ, ಸದ್ಧರ್ಮವನ್ನು ತಿಳಿದಿರಲಿಲ್ಲ. ಶ್ರೇಷ್ಠವಾದ ವಿಚಾರಗಳಾವುವೂ ಅವರಿಗೆ ತಿಳಿದಿರಲಿಲ್ಲ. ಕೇವಲ ಕೆಟ್ಟ ಕಥೆಗಳನ್ನು ಕೇಳುವವರೂ

ಅದರಲ್ಲೇ ಆಸಕ್ತರಾಗಿರುವವರೂ. ವಿಚಾರ ಶಕ್ತಿ ಇಲ್ಲದೇ ಇರುವ ಪಶುಗಳಂತೆ ಬಾಳುವವರೂ ಆಗಿದ್ದರು.

ವಿ.ವಿ.ತಿ ಇಲ್ಲಿ ಪಶುಬುದ್ಧಿಯವರೆಂದರೆ ಪ್ರಾಣಿಗಳಂತೆ ವಿಚಾರಶೂನ್ಯರಾಗಿ ವ್ಯವಹರಿಸುವವರು ಎಂದರ್ಥ. ಸಕಲ ಜೀವರಾಶಿಗಳಲ್ಲಿ ಮನುಷ್ಯ ಜೀವಿಯು ವಿಚಾರ ಮಾಡಲು ಶಕ್ತನು. ಅಂದರೆ ಒಳ್ಳೆಯದುಕೆಟ್ಟದ್ದು ಎಂದು ವಿಭಾಗ ಮಾಡಲು ಅರ್ಹನಾಗಿರುವವನು. ಆದ್ದರಿಂದಲೇ ದಾಸವರೇಣ್ಯರಾದ ಶ್ರೀ ಪುರಂದರದಾಸರೂ ಸಹ ಮಾನವ ಜನ್ಮ ದೊಡ್ಡದು, ಹಾನಿ ಮಾಡಬೇಡಿರೋ ಹುಚ್ಚಪ್ಪಗಳಿರಾ, ಎಂದರು. ನಾವು ಕೇವಲ ಮೃಗಗಳಂತೆ ತಿನ್ನುವುದು, ನಿದ್ರಿಸುವುದು, ಸ್ತ್ರೀ ಸಹವಾಸ ಇದರಿಂದ ಮಾತ್ರ ಜೀವನ ಯಾತ್ರೆಯನ್ನು ಪೂರೈಸಿದರೆ ನಾವು ಸಹ ಮೃಗಗಳಲ್ಲದೇ ಮತ್ತೇನು, ಆದ್ದರಿಂದ ಇವೆಲ್ಲಕ್ಕಿಂತಲೂ ಬೇರೆಯಾದ, ಶಾಶ್ವತವಾದ ಸತ್ಕೀರ್ತಿಯನ್ನು ತರುವಂತಹ ಕಾರ್ಯವನ್ನು ಮಾಡಿದಾಗ ಮಾತ್ರ ನಾವು ಮಾನವರು ಎಂದು ಹೇಳಿಕೊಳ್ಳಲು ಆಗುತ್ತದೆ.

ಅನ್ಯೇ ವರ್ಣಾಶ್ಚ ಕುಧಿಯಸ್ಸ್ವಧರ್ಮವಿಮುಖಾಃ ಖಲಾಃ ।
ಕುಕರ್ಮನಿರತಾ ನಿತ್ಯಂ ಸದಾ ವಿಷಯಿಣಶ್ಚ ತೇ ॥೯॥

೯ ಇನ್ನುಳಿದ ಕ್ಷತ್ರಿಯ, ವೈಶ್ಯ, ಶೂದ್ರರೂ ಸಹ ಕೆಟ್ಟ ಬುದ್ಧಿಯುಳ್ಳವರೂ, ತಮ್ಮ ವರ್ಣಕ್ಕನುಗುಣವಾದ ಧರ್ಮದಿಂದ ಬಿಡಲ್ಪಟ್ಟವರೂ ಆಗಿ ದುಷ್ಟರಾಗಿ ಕೇವಲ ದುಷ್ಟವಾದ ಕಾರ್ಯದಲ್ಲೇ ನಿರತರಾಗಿ ಯಾವಾಗಲೂ ವಿಷಯ ಸುಖ, ಸ್ತ್ರೀ ಸುಖ, ಇತ್ಯಾದಿಗಳಲ್ಲೇ ನಿರತರಾಗಿದ್ದರು.

ಸ್ತ್ರೀಯಃ ಸರ್ವಾಶ್ಚ ಕುಟಿಲಾಸ್ವೈರಿಣ್ಯಃ ಪಾಪಲಾಲಸಾಃ ।
ಕುಧಿಯೋ ವ್ಯಭಿಚಾರಿಣ್ಯಸ್ಸದ್ವೃತ್ತಾ ಚಾರವರ್ಜಿತಾಃ ॥೧೦॥

೧೦ ಅಲ್ಲಿ ವಾಸಿಸುತ್ತಿದ್ದಂತಹ ಸ್ತ್ರೀಯರಾದರೂ ಎಲ್ಲರೂ ವಜ್ರಮಾರ್ಗ ಗಾಮಿಗಳಾಗಿ, ತಮ್ಮ ಇಚ್ಛೆ ಬಂದಂತೆ ವ್ಯವಹರಿಸುತ್ತಾ ಪಾಪಕಾರ್ಯಾಸಕ್ತರಾಗಿ, ಕೆಟ್ಟ ಬುದ್ಧಿಯುಳ್ಳವರಾಗಿ, ಒಳ್ಳೆಯ ಕಾರ್ಯವನ್ನೆಲ್ಲಾ ಬಿಟ್ಟವರಾಗಿದ್ದರು.

ಏವಂ ಕುಜನಸಂವಾಸೇ ಗ್ರಾಮೇ ಬಾಷ್ಕಲಸಂಜ್ಞಿತೇ ।
ತತ್ರೈಕೋ ಬಿಂದುಗೋ ನಾಮ ವಿಪ್ರ ಆಸೀನ್ಮಹಾಧಮಃ ೭ತಿಳಿ ॥ ೧೧॥

೧೧ ಈ ರೀತಿಯಾಗಿ ಕೆಟ್ಟ ಜನಗಳಿಂದ ವಾಸಮಾಡತಕ್ಕಂತಹ ಬಾಷ್ಕಲವೆಂಬ ಗ್ರಾಮದಲ್ಲಿ ನೀಚನಾದ ಬಿಂದುಗನೆಂಬ ಬ್ರಾಹ್ಮಣನಿದ್ದನು.

ಸ ದುರಾತ್ಮಾ ಮಹಾಪಾಪೀ ಸುದಾರೋಽಪಿ ಕುಮಾರ್ಗಕೇ ।
ವೇಶ್ಯಾಪತಿರ್ಬಭೂವಾಥ ಕಾಮಾಕುಲಿತಮಾನಸಃ ॥೧೨॥

೧೨ ಆ ಮಹಾತ್ಮನಾದ, ಮಹಾಪಾಪಿಯಾದ ಬಿಂದುಗನ ಸುಂದರಿಯಾದ ಹೆಂಡತಿ ಇದ್ದರೂ ಸಹ ಕೆಟ್ಟ ಮಾರ್ಗದಲ್ಲಿ ನಡೆಯುತ್ತಿದ್ದನು. ಹಾಗಿದ್ದು ಕಾಮಲೋಲುಪನಾಗಿ ವೇಶ್ಯಾಪತಿಯಾಗಿದ್ದನು.

ಸ್ವಪತ್ನೀಂ ಚಂಚುಲಾಂ ನಾಮ ಹಿತ್ವಾ ನಿತ್ಯಂ ಸುಧರ್ಮಿಣೀಂ ।
ರೇಮೇ ಸ ವೇಶ್ಯಯಾ ದುಷ್ಟಃ ಸ್ಮರಬಾಣಪ್ರಪೀಡಿತಃ ॥೧೩॥

೧೩ ತನ್ನ ಪತ್ನಿಯಾದ ಚಂಚುಲೆಯನ್ನು ಬಿಟ್ಟು ಅವಳು ಒಳ್ಳೆಯವಳಾಗಿದ್ದರೂ ಸಹ ಕಾಮಬಾಣಪೀಡಿತನಾಗಿ ಆ ದುಷ್ಟನು ಆ ವೇಶ್ಯೆಯೊಡನೆ ವಿಹರಿಸುತ್ತಿದ್ದನು.

ಏವಂ ಕಾಲೋ ವ್ಯತೀಯಾಯ ಮಹಾಂಸ್ತಸ್ಯ ಕುಕರ್ಮಣಃ ।
ಸಾ ಸ್ವಧರ್ಮಭಯಾತ್ ಕ್ಲೇಶಾತ್ಸ್ಮರಾರ್ತಾಪಿ ಚ ಚಂಚುಲಾ ॥೧೪॥

೧೪ ಈ ರೀತಿಯಾಗಿ ಬಹಳ ಕಾಲ ನಡೆಯಿತು. ಹಾಗಿದ್ದರೂ ಸತೀ ಧರ್ಮವನ್ನು ಮೀರದೆ, ತನ್ನ ಯೌವ್ವನದ ಆಸೆ ಆಕಾಂಕ್ಷೆಗಳು ಅನೇಕವಿದ್ದರೂ ಸಹ ಸ್ವಧರ್ಮ ಭಯದಿಂದ ಸುಮ್ಮನಿದ್ದಳು.

ಅಥ ತಸ್ಯಾಂಗನಾ ಸಾಪಿ ಪ್ರರೂಢನವಯೌವನಾ ।
ಅವಿಷ್ಯಹ್ಯಸ್ಮರಾವೇಶಾ ಸ್ವಧರ್ಮಾದ್ವಿರರಾಮ ಹ ॥೧೫॥

೧೫ ಹೀಗಿರತಕ್ಕಂತಹ ಆಕೆಯು ದಿನೇ ದಿನೇ ಪ್ರವೃಸ್ಥವಾಗುತ್ತಿದ್ದ ಯೌವನದ ಆಸೆಗಳನ್ನು ತಡೆಯಲಾರದೇ ತನ್ನ ಸತೀ ಧರ್ಮವನ್ನು ಬಿಟ್ಟು ಬೇರೆ ದಾರಿ ಹಿಡಿದಳು.

ಜಾರೇಣ ಸಂಗತಾಂ ರಾತ್ರೌ ರೇಮೇ ಪಾಪೇನ ಗುಪ್ತತಃ ।
ಪತಿದೃಷ್ಟಿಂ ವಂಚಯಿತ್ವಾ ಭ್ರಷ್ಟಸತ್ವಾ ಕುಮಾರ್ಗಗಾ ॥೧೬॥

೧೬ ಹೀಗೆ ದುಷ್ಟ ಮಾರ್ಗವನ್ನವಲಂಬಿಸಿದ ಚಂಚುಲೆಯು ಪಾಪಿಯಾದ ಜಾರನೊಡನೆ ರಾತ್ರಿ ಸೇರಿ ಗುಪ್ತವಾಗಿ ಅವನೊಡನೆ ಕ್ರೀಡಿಸುತ್ತಿದ್ದಳು. ಈ ರೀತಿ ಕೆಟ್ಟ ಮಾರ್ಗವನ್ನು ಅವಲಂಬಿಸಿ ಪತಿದೃಷ್ಟಿಗೆ ಬೀಳದೇ ಭ್ರಷ್ಟಳಾದಳು.

ಕದಾಚಿತ್ತಾಂ ದುರಾಚಾರಂ ಸ್ವಪತ್ನೀಂ ಚಂಚುಲಾಂ ಮುನೇ ।
ಜಾರೇಣ ಸಂಗತಾಂ ರಾತ್ರೌ ದದರ್ಶ ಸ್ಮರವಿಹ್ವಲಾಂ ॥೧೭॥

೧೭ ಹೀಗಿರಲು ಒಂದು ದಿನ ಆ ಬಿಂದುಗನು ರಾತ್ರಿಯಲ್ಲಿ ಕಾಮಿಯಾಗಿ ಜಾರನೊಡನೆ ರಮಿಸುತ್ತಿರುವ ದುರಾಚಾರಣದ ತನ್ನ ಪತ್ನಿಯನ್ನು ನೋಡಿದನು.

ದೃಷ್ಟ್ವಾ ತಾಂ ದುಷ್ಟಿನೀಂ ಪತ್ನೀಂ ಕುಕರ್ಮಾಸಕ್ತಮಾನಸಾಂ ।
ಜಾರೇಣ ಸಂಗತಾಂ ರಾತ್ರೌ ಕ್ರೋಧಾದ್ದು[illegible] ವೇಗತಃ ॥೧೮॥

ಈ ರೀತಿ ದುಷ್ಟಳಾಗಿ ಜಾರನೊಡನೆ ರಮಿಸುತ್ತಿರುವ ತನ್ನ ಪತ್ನಿಯನ್ನು ನೋಡಿ ಆ ಬಿಂದುಗನು ಅತ್ಯಂತ ಕೋಪಿಷ್ಠನಾಗಿ ಅವಳನ್ನು ಹೊಡೆಯಬೇಕೆಂದು ಬೇಗನೆ ಅವರಿದ್ದಲ್ಲಿಗೆ ಬಂದನು.

ತಮಾಗತಂ ಗೃಹೇ ದುಷ್ಟಮಾಜ್ಞಾಯ ಬಂದುಗಂ ಖಲಃ ।
ಪಲಾಯಿತೋ ದ್ರುತಂ ಜಾರೋ ವೇಗತಶ್ಛದ್ಮವಾನ್ ಸ ವೈ ॥೧೯॥

೧೯ ಹೀಗೆ ವೇಗವಾಗಿ ಬಂದ ಆತನನ್ನು ನೋಡಿ ಜಾರನು ಅವನಿಗೆ ಕಾಣದಂತೆ ಬೇಗನೇ ಆ ಸ್ಥಳದಿಂದ ಉಪಾಯವಾಗಿ ತಪ್ಪಿಸಿಕೊಂಡು ಹೊರಟು ಹೋದನು ಓಡಿ ಹೋದನು.

ಅಥ ಸ ಬಿಂದುಗಃ ಪತ್ನೀಂ ಗೃಹೀತ್ವಾ ಸುದುರಾಶಯಃ ।
ಮುಷ್ಟಿಬಂಧೇನ ಸಂತರ್ಜ್ಯ ಪುನಃ ಪುನರತಾಡಯತ್ ॥೨೦॥

೨೦ ನಂತರ ಬಿಂದುಗನು ಅವಳ ದುಷ್ಟ ನಡತೆಯನ್ನು ಕಂಡು ಪತ್ನಿಯನ್ನು ಹಿಡಿದು ಮತ್ತೆ ಮತ್ತೆ ಮುಷ್ಟಿಯಿಂದ ಕೂಡಿದ ಕೈಗಳಿಂದ ಹೊಡೆದನು.

ಸಾ ನಾರೀ ತಾಡಿತಾ ಭರ್ತ್ರಾ ಚಂಚುಲಾ ಸ್ವೈರಿಣೀ ಖಲಾ ।
ಕುಪಿತಾ ನಿರ್ಭಯಾ ಪ್ರಾಹ ಸ್ವಪತಿಂ ಬಿಂದುಗಂ ಖಲಂ ॥೨೧॥

೨೧ ಅವನ ಹೊಡೆತವನ್ನು ತಿಂದು ಸ್ವೇಚ್ಛಾಚಾರಿಣಿಯಾದ ಆ ಚಂಚುಲೆಯು ಕೋಪಗೊಂಡವಳಾಗಿ ನಿರ್ಭಯದಿಂದ ಬಿಂದುಗನನ್ನು ಕುರಿತು ಈ ರೀತಿ ಹೇಳಿದಳು.

||ಚಂಚುಲೋವಾಚ||

ಭವಾನ್ಪ್ರತಿದಿನಂ ಕಾಮಂ ರಮತೇ ವೇಶ್ಯಯಾ ಕುಧೀಃ ।

ಮಾಂ ವಿಹಾಯ ಸ್ವಪತ್ನೀಂ ಚ ಯುವತೀಂ ಪತಿಸೇವಿನೀಂ ||೨೨||

ಚಂಚುಲೆಯು ಹೇಳಿದಳು

೨೨ ಯುವತಿಯೂ, ನಿನ್ನಲ್ಲೇ ಸೇವೆಯನ್ನು ಮಾಡಿಕೊಂಡಿರುವ ನಿನ್ನ ಪತ್ನಿಯಾದ ನನ್ನನ್ನು ನೀನು ಬಿಟ್ಟು, ಕೆಟ್ಟ ಬುದ್ಧಿಯುಳ್ಳವನಾಗಿ ಪ್ರತಿದಿನವೂ ಸೂಳೆಯೊಡನೆ ರಮಿಸುತ್ತಿದ್ದೀಯ.

ರೂಪವತ್ಯಾ ಯುವತ್ಯಾಶ್ಚ ಕಾಮಕುಲಿತಚೇತಸಃ ।

ವಿನಾ ಪತಿವಿಹಾರಂ ಸ್ಯಾತ್ಕಾ ಗತಿರ್ಮೇ ಭರ್ವಾ ವದೇತ್ ||೨೩||

೨೩ ರೂಪವತಿಯಾಗಿಯೂ, ಯೌವ್ವನವತಿಯೂ ಆಗಿರುವ ನಾನು ಕಾಮದಿಂದ ಉದ್ರೋಧಳಾಗಿರುತ್ತಿರುವೆನು. ಪತಿಯಾದ ನಿನ್ನೊಡನೆ ಆ ಕಾಲದಲ್ಲಿ ಸೇರಿ ಸುಖಪಡುವ ಅದೃಷ್ಟವಿಲ್ಲದಿರುವಾಗ ನನ್ನ ಗತಿಯೇನು, ನಾನೇನು ಮಾಡಬೇಕು ನೀನೇ ಹೇಳು.

ಅಹಂ ಮಹಾರೂಪವತೀ ನವಯೌವನವಿಹ್ವಲಾ ।

ಕಥಂ ಸಹೇ ಕಾಮದುಃಖಂ ತವ ಸಂಗಂ ವಿನಾರ್ತಧೀಃ ||೨೪||

೨೪ ನಾನಾದರೋ ಅತ್ಯಂತ ರೂಪವತಿಯೂ, ಈಗ ತಾನೇ ಯೌವ್ವನಭರಿತಳಾಗಿರುವೆ, ಹೀಗಿರುವ ನಾನು ನಿನ್ನ ಸಂಗವಿಲ್ಲದೇ ಹೇಗೆ ತಾನೇ ಕಾಮ ದುಃಖವನ್ನು ಅನುಭವಿಸಲಿ.

||ಸೂತ ಉವಾಚ||

ಇತ್ಯುಕ್ತಸ್ಸ ತಯಾ ಮೂರ್ಖೋ ಮೂಢಧೀರ್ಬ್ರಾಹ್ಮಣಾಧಮಃ ।

ಪ್ರೋವಾಚ ಬಿಂದುಗಃ ಪಾಪೀ ಸ್ವಧರ್ಮವಿಮುಖಃ ಖಲಃ ||೨೫||

ಸೂತರು ಹೇಳುತ್ತಾರೆ

೨೫ ಹೀಗೆ ಹೇಳಲ್ಪಟ್ಟ ಚಂಚುಲೆಗೆ ಸ್ವಧರ್ಮವನ್ನು ಬಿಟ್ಟಿರುವ ಮೂರ್ಖನೂ

ಮೂಢಬುದ್ಧಿಯುಳ್ಳವನೂ, ಬ್ರಾಹ್ಮಣಾಧಮನೂ ಆದ ಬಿಂದುಗನು ಈ ಮುಂದೆ ಹೇಳಿರುವ ರೀತಿ ಹೇಳುತ್ತಾನೆ.

||ಬಿಂದುಗ ಉವಾಚ||

ಸತ್ಯಮೇತತ್ತ್ವಯೋಕ್ತಂ ಹಿ ಕಾಮವ್ಯಾಕುಲಚೇತನಾ ।
ಹಿತಂ ವಕ್ಷ್ಯಾಮಿ ತಸ್ಮಾತ್ತೇ ಶೃಣು ಕಾಂತೇ ಭಯಂ ತ್ಯಜ ||೨೬||

ಬಿಂದುಗ ಹೇಳುತ್ತಾನೆ

೨೬ ಎಲೈ ಕಾಂತೆಯೇ ಕಾಮಾತುರಳಾಗಿದ್ದುದರಿಂದ ನೀನು ಮಾಡಿದ ಕೃತ್ಯವು ಸರಿಯಾಗಿದೆ. ಆದ್ದರಿಂದ ನಿನಗೆ ಹಿತವಾದುದನ್ನು ಹೇಳುತ್ತೇನೆ, ಭಯವನ್ನು ಬಿಟ್ಟು ಕೇಳು.

ಜಾರೈರ್ವಿಹರ ನಿತ್ಯಂ ತ್ವಂ ಚೇತಸಾ ನಿರ್ಭಯೇನ ವೈ ।
ಧನಮಾಕರ್ಷ ತೇಭ್ಯೋ ಹಿ ದತ್ವಾ ತೇಭ್ಯಃ ಪರಾಂ ರತಿಂ ||೨೭||

೨೭ ನೀನು ಇನ್ನು ಮುಂದೆ ನಿರ್ಭಯಳಾಗಿ ನಿನ್ನ ಪ್ರಿಯನಾದ ಜಾರನೊಂದಿಗೆ ನಿತ್ಯವೂ ಮನಸ್ಸಿಗೆ ಬಂದಂತೆ ವಿಹರಿಸು. ಹಾಗೆಯೇ ಅವನಿಗೆ ಅತ್ಯಂತ ರತಿಯ ಸುಖವನ್ನು ನೀಡಿ ಅವರಿಂದ ಹಣವನ್ನೂ ಪಡೆ.

ತದ್ಧನಂ ದೇಹಿ ಸರ್ವಂ ಮೇ ವೇಶ್ಯಾಸಂಸಕ್ತಚೇತಸಃ ।
ಮಹತ್ಸ್ಯಾಥ ಭವೇನ್ನೂನಂ ತವಾಪಿ ಚ ದುಮಾಪಿ ಚ ||೨೮||

೨೮ ಹಾಗೆ ಪಡೆದ ಹಣವನ್ನೆಲ್ಲಾ ವೇಶ್ಯಾಸಕ್ತನಾದ ನನಗೆ ಕೊಡು. ಇದರಿಂದಾಗಿ ನನಗೂ ನಿನಗೂ ನಿಶ್ಚಯವಾಗಿಯೂ ಈಗಿರುವುದಕ್ಕಿಂತಲೂ ಇನ್ನೂ ಹೆಚ್ಚಿನ ಸಂಬಂಧ ಉಂಟಾಗುವುದು.

||ಸೂತ ಉವಾಚ||

ಇತಿ ಭರ್ತೃವಚಃ ಶ್ರುತ್ವಾ ಚಂಚುಲಾ ತದ್ವಧೂಶ್ಚ ಸಾ ।
ತಥೇತಿ ಭರ್ತೃವಚನಂ ಪ್ರತಿಜಗ್ರಾಹ ದೃಷ್ಟಧೀಃ ||೨೯||

||ಸೂತರು ಹೇಳುತ್ತಾರೆ||

೨೯ ತದನಂತರ ಆ ಚಂಚುಲೆಯು ಈ ರೀತಿಯಾದ ಪತಿವಾಕ್ಯಗಳನ್ನು ಕೇಳಿ

ಸಂತಸವಾದ ಬುದ್ಧಿಯುಳ್ಳವಳಾಗಿ ಹಾಗೇ ಆಗಲೆಂದು ಆತನಿಗೆ ಹೇಳಿ ಹಾಗೆಯೇ ಮಾಡುವೆನೆಂದು ಒಪ್ಪಿದಳು.

**ಕೃತ್ವೈವಂ ಸಮಯಂ ತೌ ವೈ ದಂಪತೀ ದುಷ್ಟಮಾನಸೌ ।**
**ಕುಕರ್ಮನಿರತೌ ಜಾತೌ ನಿರ್ಭಯೇನ ಕುಚೇತಸೌ ॥೩೦॥**

೩೦ ಆ ಗಂಡ ಹೆಂಡರಿಬ್ಬರೂ ದುಷ್ಟವಾದ ಮನಸ್ಸುಳ್ಳವರಾಗಿ ತಮ್ಮ ಸಮಯವನ್ನೆಲ್ಲಾ ನಿರ್ಭಯವಾಗಿ ಕೆಟ್ಟ ಕಾರ್ಯವನ್ನು ಮಾಡುತ್ತಾ ಕಳೆಯುತ್ತಿದ್ದರು.

**ಏವಂ ತಯೋಸ್ತು ದಂಪತ್ಯೋರ್ದುರಾಚಾರಪ್ರವೃತ್ತಯೋಃ ।**
**ಮಹಾನ್ಕಾಲೋ ವ್ಯತೀಯಾಯ ನಿಷ್ಫಲೋ ಮೂಢಚೇತಸೋಃ ॥೩೧॥**

೩೧ ಈ ರೀತಿಯಾಗಿ ಆ ದಂಪತಿಗಳು ಕೆಟ್ಟ ಆಚಾರದಲ್ಲೇ ಕಾಲ ಕಳೆಯುವವರಾಗಿ, ಮೂಢರಾಗಿ ಬಹಳ ಕಾಲವನ್ನು ಕಳೆದರು.

**ಅಥ ವಿಪ್ರಸ್ಸ ಕುಮತಿರ್ಬಿಂದುಗೋ ವೃಷಲೀಪತಿಃ ।**
**ಕಾಲೇನ ನಿಧನಂ ಪ್ರಾಪ್ತೋ ಜಗಾಮ ನರಕಂ ಖಲಃ ॥೩೨॥**

೩೨ ಹೀಗಿರಲು ಆ ವೇಶ್ಯಾಪತಿಯಾದ ಬಿಂದುಗನು ಒಂದು ದಿನ ಕಾಲವಶನಾಗಿ ಮರಣ ಹೊಂದಿದನು. ಅವನು ಮಾಡಿದ ಪಾಪ ಕಾರ್ಯದಿಂದಾಗಿ ಆ ದುಷ್ಟನು ನರಕಕ್ಕೆ ಹೋದನು.

**ಭುಕ್ತ್ವಾ ನರಕದುಃಖಾನಿ ಬಹ್ವಹಾನಿ ಸ ಮೂಢಧೀಃ ।**
**ವಿಂಧ್ಯೇಽಭವತ್ಪಿಶಾಚೋ ಹಿ ಗಿರೌ ಪಾಪೀ ಭಯಂಕರಃ ॥೩೩॥**

೩೩ ನರಕಕ್ಕೆ ಹೋದ ಆ ಮೂಢನು ಬಹಳವಾದ ನರಕ ದುಃಖವನ್ನು ಅನುಭವಿಸಿ ಕಡೆಗೆ ವಿಂಧ್ಯ ಪರ್ವತದಲ್ಲಿ ಪಿಶಾಚ ಜನ್ಮವನ್ನು ಹೊಂದಿದನು.

**ಮೃತೇ ಭರ್ತರಿ ತಸ್ಮಿನ್ ವೈ ದುರಾಚಾರೇಽಥ ಬಿಂದುಗೇ ।**
**ಉವಾಸ ಸ್ವಗೃಹೇ ಪುತ್ರೈಶ್ಚಿರಕಾಲಂ ವಿಮೂಢಧೀಃ ॥೩೪ ॥**

೩೪ ಇತ್ತ ಗಂಡನು ಗತಿಸಿದ ಮೇಲೆ ಮೂಢ ಬುದ್ಧಿಯುಳ್ಳವಳಾದ ಚಂಚುಲೆಯು ತನ್ನ ಮಕ್ಕಳ ಜತೆಯಲ್ಲಿ ಬಹಳ ಕಾಲ ವಾಸಮಾಡಿದಳು.

ಏವಂ ವಿಹರತೀ ಜಾರೈಸ್ಸಾ ನಾರೀ ಚಂಚುಲಾಹ್ವಯಾ ।
ಅಸೀತ್ಕಾಮರತಾ ಪ್ರೀತಾ ಕಂಚಿದುತ್ಕ್ರಾಂತಯೌವನ ।।೩೫।।

೩೫ ಈ ರೀತಿಯಾಗಿ ಸ್ವೇಚ್ಛೆಯಾಗಿ ತನ್ನ ಜಾರನೊಡನೆ ವಿಹರಿಸುತ್ತಾ ಇರುವ ಚಂಚುಲೆಯೂ ಕಾಮಾಸಕ್ತಳಾಗಿದ್ದಳು ಹಾಗೇ ಕಾಲಕ್ರಮದಲ್ಲಿ ಅವಳ ಯೌವ್ವನವು ಕಳೆಯುತ್ತಾ ಬಂದಿತು.

ಏಕದಾ ದೈವಯೋಗೇನ ಸಂಪ್ರಾಪ್ತೇ ಪುಣ್ಯಪರ್ವಣಿ ।
ಸಾ ನಾರೀ ಬಂಧುಭಿಸ್ಸಾರ್ಧಂ ಗೋಕರ್ಣಂ ಕ್ಷೇತ್ರಮಾಯಯೌ ।।೩೬।।

೩೬ ಒಂದು ದಿನ ಅವಳು ಅದೃಷ್ಟವಶಾತ್ ಸಂಕ್ರಮಣದ ದಿನದಲ್ಲಿ ಬಂಧುಗಳೊಡನೆ ಗೋಕರ್ಣ ಕ್ಷೇತ್ರಕ್ಕೆ ಹೋದಳು.

ಪ್ರಸಂಗಾತ್ಸಾ ತದಾ ಗತ್ವಾ ಕಸ್ಮಿಂಶ್ಚಿತ್ತೀರ್ಥಪಾಥಸಿ ।
ಸಸ್ನೌ ಸಾಮಾನ್ಯತೋ ಯತ್ರ ತತ್ರ ಬಭ್ರಾಮ ಬಂಧುಭಿಃ ।।೩೭।।

೩೭ ಅಲ್ಲಿ ಒಂದು ತೀರ್ಥದಲ್ಲಿ ಸ್ನಾನ ಮಾಡಿ ಬಂಧುಗಳೊಡಗೂಡಿ ಅಲ್ಲಲ್ಲೇ ಸುತ್ತಾಡುತ್ತಿದ್ದಳು. ವೈರಾಗ್ಯದಾಯಕವಾದ ಆ ಮಾತಿನಿಂದ ಭಯವಿಹ್ವಲಳಾಗಿ ನಡುಗಿದಳು.

೩೮. ಹೀಗೆ ಅಲೆದಾಡುತ್ತಾ ಆಕೆಯು ದೇವಾಲಯವೊಂದನ್ನು ಪ್ರವೇಶಿಸಿ ಅಲ್ಲಿ ಜೋಯಿಸರೊಬ್ಬರಿಂದ ಪ್ರವಚನ ಮಾಡುತ್ತಿರುವ ಪುಣ್ಯಕರವಾದ ಶಿವ ಕಥೆಯನ್ನು ಕೇಳಿದಳು.

೩೯. ಜಾರರಲ್ಲಿ ಆಸಕ್ತರಾದ ಸ್ತ್ರೀಯರಿಗೆ ನರಕದಲ್ಲಿ ಯಮನ ಸೇವಕರು ಚೆನ್ನಾಗಿ ಕಾಯಿಸಿರುವ ಲೋಹದ ಗಡಾರಿಯನ್ನು ಕಾಮೋತ್ಪತ್ತಿ ಸ್ಥಾನದಲ್ಲಿ ಇಡುವರು.

೪೦. ಹೀಗೆಂದು ಹೇಳಲ್ಪಡುತ್ತಿರುವ ಪುರಾಣದ ವಾಕ್ಯವನ್ನು ಆ ಚಂಚುಲೆಯು ಕೇಳಿದವಳಾಗಿ ವೈರಾಗ್ಯದಾಯಕವಾದ ಆ ಮಾತಿನಿಂದ ಭಯ ವಿಹ್ವಲಳಾಗಿ ನಡುಗಿದಳು.

ಕಥಾಸಮಾಪ್ತೌ ಸಾ ನಾರೀ ನಿರ್ಗತೇಷು ಜನೇಷು ಚ ।
ಭೀತಾ ರಹಸಿ ತಂ ಪ್ರಾಹ ಶೈವಂ ಸಂವಾಚಕಂ ದ್ವಿಜಂ ।।೪೧।।

೪೧ ಈ ರೀತಿಯಾದ ಕಥಾ ಶ್ರವಣವು ಮುಗಿದ ನಂತರ ಜನರೆಲ್ಲರೂ ಹೊರಟು

ಹೋದಮೇಲೆ ಹೆದರಿದ ಆಕೆಯು ಗಟ್ಟಿಯಾಗಿ ಆ ಜೋಯಿಸರಾದ ಬ್ರಾಹ್ಮಣರನ್ನು ಈ ರೀತಿ ಕೇಳಿದಳು.

||ಚಂಚುಲೋವಾಚ||

ಬ್ರಹ್ಮನ್ಸ್ವಂಶೃಣ್ವಸದ್ವೃತ್ತಮಜಾನಂತ್ಯಾ ಸ್ವಧರ್ಮಕಂ ।
ಶ್ರುತ್ವಾ ಮಾಮುದ್ಧರಸ್ವಾರ್ಮಿ ಕೃಪಾಂ ಕೃತ್ವಾತುಲಾಮಪಿ ||೪೨||

೪೨ ಚಂಚುಲೆಯು ಹೇಳುತ್ತಾಳೆ, ಎಲೈ ಬ್ರಾಹ್ಮಣನೇ ಧರ್ಮಮಾರ್ಗವನ್ನು ನಾನು ತಿಳಿಯದೇ ನನ್ನ ಸತೀಧರ್ಮವನ್ನು ಬಿಟ್ಟು ಪಾಪಕಾರ್ಯಗಳನ್ನು ಮಾಡಿರುವೆನು. ಇವೆಲ್ಲವನ್ನೂ ಕೇಳಿ ಕನಿಕರಕ್ಕೆ ಪಾತ್ರಳಲ್ಲದಿದ್ದರೂ ನನಗೆ ಕೃಪೆ ಮಾಡಿ ನನ್ನನ್ನು ಕಾಪಾಡು.

ಚರಿತಂ ಸ್ವೂಲ್ಬಣಂ ಪಾಪಂ ಮಯಾ ಮೂಢಧಿಯಾ ಪ್ರಭೋ ।
ನೀತಂ ಪೌಂಶ್ಚಲ್ಯತಸ್ಸರ್ವಂ ಯೌವನಂ ಮದನಾಂಧಯಾ ||೪೩||

೪೩ ಮೂರ್ಖಳಾಗಿ ಮೂಢಬುದ್ಧಿಯುಳ್ಳವಳಾಗಿ, ಕಾಮಾಂಧಳಾಗಿ, ನನ್ನ ಯೌವ್ವನವನ್ನು ಕಳೆದೆನು.

ಶ್ರುತ್ವೇದಂ ವಚನಂ ತೇಽದ್ಯ ವೈರಾಗ್ಯರಸಜೃಂಭಿತಂ ।
ಜಾತಾ ಮಹಾಭಯಾ ಸಾಹಂ ಸಕಂಪಾತ್ತವಿಯೋಗಿತಾ ||೪೪||

೪೪ ಆದರೆ ಇಂದು ನಿನ್ನಿಂದ ಹೇಳಲ್ಪಟ್ಟ ವೈರಾಗ್ಯ ರಸದಿಂದ ಶೋಭಿಸುತ್ತಿದ್ದ ಪುರಾಣವಾಕ್ಯಗಳನ್ನು ಕೇಳಿ ಬಹಳ ಹೆದರಿಕೆಯಿಂದ ನಡುಗುತ್ತಿರುವೆನು.

ಧಿಙ್ಮಾಂ ಮೂಢಧಿಯಂ ಪಾಪಾಂ ಕಾಮಮೋಹಿತಚೇತಸಂ ।
ನಿಂದ್ಯಾಂ ದುರ್ವಿಷಯಸಕ್ತಾಂ ವಿಮುಖೀಂ ಹಿ ಸ್ವಧರ್ಮತಃ ||೪೫||

೪೫ ಮೂಢಬುದ್ಧಿಯುಳ್ಳ, ಪಾಪಿಯಾದ, ಕಾಮದಿಂದ ಮೋಹಗೊಂಡ ಮನಸುಳ್ಳ ನನಗೆ ಧಿಕ್ಕಾರವಿರಲಿ. ನನ್ನ ಪಾತಿವ್ರತ್ಯ ಧರ್ಮವನ್ನು ಬಿಟ್ಟು ನಿಂದ್ಯವಾದ ಕೆಟ್ಟಕಾರ್ಯದಲ್ಲಿ ನಾನು ಆಸಕ್ತಳಾಗಿದ್ದೆನು ಆದಕ್ಕಾಗಿ ನನಗೆ ಧಿಕ್ಕಾರವಿರಲಿ.

ಯದಲ್ಪಸ್ಯ ಸುಖಸ್ಯಾರ್ಥೇ ಸ್ವಕಾಯಸ್ಯ ವಿನಾಶಿನಃ ।
ಮಹಾಪಾಪಂ ಕೃತಂ ಘೋರಮಜಾನಂತ್ಯಾತಿಕಷ್ಟದಂ ||೪೬||

೪೭ ಯಾವ ಭಣಿಕದ ಸುಖಕ್ಕಾಗಿ ನನ್ನ ದೇಹವನ್ನು ವಿಶೇಷವಾಗಿ ನಾಶಪಡಿಸಿಕೊಂಡೆನು ಆ ಕಾಲದಲ್ಲಿ ಮುಂದೆ ಕಷ್ಟ ಬರುವುದೆಂದು ಅರಿಯದೇ ಘೋರವಾದ ಮಹಾಪಾಪವು ನನ್ನಿಂದ ಮಾಡಲ್ಪಟ್ಟಿತು.

ಯಾಸ್ಯಾಮಿ ದುರ್ಗತಿಂ ಕಾಂ ಕಾಂ ಘೋರಾಂ ಹಾ ಕಷ್ಟದಾಯಿನೀಂ ।
ಕೋ ಜ್ಞೋ ಯಾಸ್ಯತಿ ಮಾಂ ತತ್ರ ಕುಮಾರ್ಗರತಮಾನಸಾಂ ॥೪೭॥

೪೭ ಅಯ್ಯೋ! ಎಂಥೆಂಥಹ ಘೋರವಾದ ಕಷ್ಟವನ್ನು ಕೊಡುವ ದುರ್ಗತಿಯನ್ನು ಹೊಂದುವೆನೋ ಕಾಣೆನು. ಕೆಟ್ಟ ದಾರಿಯಲ್ಲಿ ಆಸಕ್ತಳಾದ ಮನಸ್ಸುಳ್ಳ ನನ್ನನ್ನು ಯಾವನು ತಾನೇ ಪಾರು ಮಾಡುವನು.

ಮರಣೇ ಯಮದೂತಾಂಸ್ತಾನ್ ಕಥಂ ದ್ರಕ್ಷ್ಯೇ ಭಯಂಕರಾನ್ ।
ಕಥಂ ಪಾಶೈರ್ಬಲಾತ್ಕಂಠೇ ಬಧ್ಯಮಾನಾ ಧೃತಿಂ ಲಭೇ ॥೪೮॥

೪೮ ಹಾಗೆಯೇ ಮರಣ ಕಾಲದಲ್ಲಿ ಭಯಂಕರರಾದ ಯಮದೂತರು ಬಂದಾಗ ಅವರನ್ನು ಹೇಗೆ ತಾನೇ ನೋಡಲಿ. ಅನಂತರ ನನ್ನ ಕತ್ತಿಗೆ ಅವರು ಪಾಶದಿಂದ ಬಿಗಿಯುತ್ತಿರುವಾಗ ಹೇಗೆ ಧೈರ್ಯವನ್ನು ತಾಳಲಿ.

ಕಥಂ ಸಹಿಷ್ಯೇ ನರಕೇ ಖಂಡಶೋ ದೇಹಕೃಂತನಂ ।
ಯಾತನಾಂ ತತ್ರ ಮಹತೀಂ ದುಃಖದಾಂ ಚ ವಿಶೇಷತಃ ॥೪೯॥

ಅನಂತರ ನರಕದಲ್ಲಿ ನನ್ನ ದೇಹವನ್ನು ತುಂಡು ತುಂಡಾಗಿ ಕತ್ತರಿಸುವಾಗ ವಿಶೇಷವಾಗಿ ಅತ್ಯಂತ ದುಃಖದಾಯಕವಾದ ಆ ನೋವನ್ನು ಹೇಗೆ ತಾನೇ ಸಹಿಸಲಿ.?

ದಿವಾ ಚೇಷ್ಟಾಮಿಂದ್ರಿಯಾಣಾಂ ಕಥಂ ಪ್ರಾಪ್ಸ್ಯಾಮಿ ಶೋಚತೀ ।
ರಾತ್ರೌ ಕಥಂ ಲಭಿಷ್ಯೇಽಹಂ ನಿದ್ರಾಂ ದುಃಖಪರಿಪ್ಲುತಾ ॥೫೦॥

೫೦ ಹಗಲಿನಲ್ಲಿ ಈ ರೀತಿಯಾದ ದುಃಖದಿಂದ ಇಂದ್ರಿಯಗಳ ವ್ಯಾಪಾರವನ್ನು ಹೇಗೆ ತಾನೇ ಮಾಡಲಿ. ? ರಾತ್ರಿಯಲ್ಲಿ ಈ ರೀತಿ ಕಷ್ಟವನ್ನನುಭವಿಸಿದ ನಾನು ಹೇಗೆ ತಾನೇ ನಿದ್ರಿಸಲಿ. ?

ಹಾ ಹತಾಸ್ಮಿ ಚ ದಗ್ಧಾಸ್ಮಿ ವಿದೀರ್ಣಹೃದಯಾಸ್ಮಿ ಚ ।
ಸರ್ವಥಾಹಂ ವಿನಷ್ಟಾಸ್ಮಿ ಪಾಪಿನೀ ಸರ್ವಥಾಪ್ಯಹಂ ॥೫೧॥

೫೧ ಅಯ್ಯೋ! ನಾನು ಕೆಟ್ಟೆನು. ನನ್ನ ಹೃದಯವು ಸೀಳಿದಂತಾಗಿ ಪಶ್ಚಾತ್ತಾಪದಿಂದ ಸುಟ್ಟು ಹೋಗಿರುವುದು. ಪಾಪಿಯಾದ ನಾನು ಎಲ್ಲ ರೀತಿಯಿಂದಲೂ ನಾಶ ಹೊಂದಿರುವೆನು.

ಹಾ ವಿಧೇ ಮಾಂ ಮಹಾಪಾಪೇ ದತ್ವಾ ದುಶ್ಯೇಮುಷೀಂ ಹತಾತ್ ।
ಅಪೈತಿ ಯತ್ಸ್ವಧರ್ಮಾದ್ವೈ ಸರ್ವಸೌಖ್ಯಕರಾದಹೋ ॥೫೨॥

೫೨ ಎಲೈ ವಿಧಿಯೇ ನನ್ನನ್ನು ಈ ರೀತಿಯಾದ ಪಾಪಕಾರ್ಯದಲ್ಲಿ ಮನಸ್ಸಾಗುವಂತೆ ಹಠಾತ್ತಾಗಿ ಮಾಡಿ ಸರ್ವಸೌಖ್ಯವನ್ನೀಯುವ ಸ್ವಧರ್ಮದಿಂದ ನನ್ನನ್ನು ವಂಚಿಸಿದೆ.

ಶೂಲಪ್ರೋತಸ್ಯ ಶೈಲಾಗ್ರಾತ್ಪತತಸ್ತುಂಗತೋ ದ್ವಿಜ ।
ಯದ್ದುಃಖಂ ದೇಹಿನೋ ಘೋರಂ ತಸ್ಮಾತ್ಕೋಟಿಗುಣಂ ಮಮ ॥೫೩॥

೫೩ ಎಲೈ ಬ್ರಾಹ್ಮಣನೇ ಶೂಲದಿಂದ ಇರಿದರೆ, ಬೆಟ್ಟದ ಮೇಲ್ಭಾಗದಿಂದ ಬಹಳ ಆಳಕ್ಕೆ ಬಿದ್ದರೆ ಯಾವ ದುಃಖವುಂಟಾಗುವುದೋ ಅದರ ಕೋಟಿಯಷ್ಟು ದುಃಖವು ನನ್ನ ದೇಹಕ್ಕೆ ಈಗ ಆಗುತ್ತಿರುವುದು.

ಅಶ್ವಮೇದಶತಂ ಕೃತ್ವಾ ಗಂಗಾಂ ಸ್ನಾತ್ವಾ ಶತಂ ಸಮಾಃ ।
ನ ಶುದ್ಧಿರ್ಜಾಯತೇ ಪ್ರಾಯೋ ಮತ್ಪಾಪಸ್ಯ ಗರೀಯಸಃ ॥೫೪॥

೫೪ ಪ್ರಾಯಶಃ ನಾನು ಮಾಡಿರುವ ಈ ರೀತಿಯಾದ ಮಹತ್ತರವಾದ ಪಾಪವು ನೂರು ಅಶ್ವಮೇಧಯಾಗ, ನೂರು ಗಂಗಾಸ್ನಾನ ಮಾಡಿದರೂ ಸಹ ಶುದ್ಧಿಯಾಗಲಾರದು.

ಕಿಂ ಕರೋಮಿ ಕ್ವ ಗಚ್ಛಾಮಿ ಕಂ ವಾ ಶರಣಮಾಶ್ರಯೆ ।
ಕಸ್ತ್ರಾಯತೇ ಮಾಂ ಲೋಕೇಽಸ್ಮಿನ್ ಪತಂತೀಂ ನರಕಾರ್ಣವೇ ॥೫೫॥

೫೫ ಏನು ಮಾಡಲಿ ? ಎಲ್ಲಿಗೆ ಹೋಗಲಿ ? ಯಾರನ್ನು ತಾನೆ ಶರಣು ಹೊಂದಲಿ ? ನರಕವೆಂಬ ಸಮುದ್ರದಲ್ಲಿ ಬಿದ್ದಿರುವ ನನ್ನನ್ನು ಈ ಲೋಕದಲ್ಲಿ ಯಾರು ಉದ್ಧರಿಸುವರು ?

**ತ್ವಮೇವ ಮೇ ಗುರುರ್ಬ್ರಹ್ಮ ತ್ವಂ ಮಾತಾ ತ್ವಂ ಪಿತಾಸಿ ಚ ।**
**ಉದ್ಧರೋದ್ಧರ ಮಾಂ ದೀನಾಂ ತ್ವಮೇವ ಶರಣಂ ಗತಾಂ ॥೫೬॥**

೫೬ ಆದ್ದರಿಂದ ಎಲೈ ಬ್ರಾಹ್ಮಣನೇ, ನನಗೀಗ ನೀನೇ ಗುರುವು. ನೀನೇ ನನ್ನ ತಾಯಿಯು, ತಂದೆಯು ಆಗಿದ್ದೀಯೆ. ನಿನ್ನಲ್ಲೇ ಶರಣಾಗತಿಯನ್ನು ಹೊಂದಿರುವ ನನ್ನನ್ನು ದೀನಳಾದ ನನ್ನನ್ನು ಉದ್ಧರಾ ಮಾಡು ಎಂದು ದೀನಳಾಗಿ ಪ್ರಾರ್ಥಿಸಿದಳು.

ಟೀತಾ ಈ ಶ್ಲೋಕದಲ್ಲಿ ವಿಶೇಷ ವಿಚಾರವೆಂದರೆ ಉತ್ತಮರಾದ ತಾಯಿ ತಂದೆ ಗುರುಗಳು ಮಕ್ಕಳನ್ನು ಉತ್ತಮ ದಾರಿಯಲ್ಲಿ ನಡೆಯಲು ಮಾರ್ಗದರ್ಶಿಗಳೆಂದು ಅಭಿಪ್ರಾಯ. ಅದಕ್ಕಾಗಿಯೇ ತೈತ್ತರೀಯೋಪನಿಷತ್ತಿನಲ್ಲಿ ಮಾತೃದೇವೋಭವಾ, ಪಿತೃದೇವೋಭವ, ಆಚಾರ್ಯದೇವೋಭವ ಎಂದು ಉದ್ಗರಿಸಿರುವುದು. ಮನುಷ್ಯನಿಗೆ ಪ್ರಥಮತಃ ತಾಯಿಯೇ ಗುರುವೆಂಬುದು ಸರ್ವವಿದಿತ. ನಂತರ ಬ್ರಾಹ್ಮಣಾದಿ ವರ್ಣತ್ರಯದವರಿಗೆ ಉಪನಯನ ಸಂಸ್ಕಾರದಲ್ಲಿ ಗಾಯತ್ರೀ ಮಂತ್ರೋಪದೇಶದಿಂದ ತಂದೆಯು ಗುರುವಾಗುತ್ತಾನೆ. ನಂತರ ವೇದಾಧ್ಯಯನ, ಶಾಸ್ತ್ರಾಧ್ಯಯನ ಮಾಡಿಸುವ, ಮುಂದಿನ ಜೀವನೋಪಾಯಕ್ಕೆ ಮಾರ್ಗದರ್ಶಿಯಾದ ವಿದ್ಯಾಗುರುವು ಗುರುವಾಗುತ್ತಾನೆ.

ಗುರು ಎಂದರೇನು? ಸಂಸ್ಕೃದಲ್ಲಿ ಈ ಶಬ್ದಕ್ಕೆ ಅನೇಕಾರ್ಥಗಳಿವೆ. ೧.ಭಾರವಾದದ್ದು ೨.ವಿದ್ಯಾದಾತ, ಇತ್ಯಾದಿ. ವಿದ್ಯೆಯಿಂದ ಭಾರವಾದದ್ದು ಅಂದರೆ ವಿದ್ಯಾನಿಧಿ. ಇದಕ್ಕಾಗಿಯೇ ಉಪನಿಷತ್ತಿನಲ್ಲಿ ಗುರು ಶಬ್ದಕ್ಕೆ ಹೀಗೆ ವಿವರಣೆ ನೀಡಿದ್ದಾರೆ.

**ಗು ಶಬ್ದಸ್ತ್ವಂಧಕಾರಸ್ಯಾತ್ ರು ಕಾರಸ್ಯಾತ್ತನ್ನಿವರ್ತಕತಃ** ಎಂದು.

ಎಂದರೆ ಗು ಎಂದರೆ ಅಜ್ಞಾನ, ರು ಎಂದರೆ ಅಜ್ಞಾನವನ್ನು ಹೋಗಲಾಡಿಸುವವ ಎಂದು. ಸಂಸಾರವೆಂಬ ಕತ್ತಲೆಯಿಂದ ನಿವಾರಿಸಿ ಮೋಕ್ಷವೆಂಬ ಬೆಳಕನ್ನು ದಯಪಾಲಿಸುವನು ಎಂದು ಅಂತರಾರ್ಥವು. ಆದ್ದರಿಂದ ತಾಯಿ, ತಂದೆ, ಗುರುಗಳು ಸರ್ವದಾ ಪೂಜಾರ್ಹರು.

**॥ಸೂತ ಉವಾಚ॥**

**ಇತಿ ಸಂಜಾತನಿರ್ವೇದಾಂ ಪತಿತಾಂ ಚರಣದ್ವಯೇ ।**
**ಉತ್ಥಾಪ್ಯ ಕೃಪಯಾ ಧೀಮಾನ್ಬಭಾಷೇ ಬ್ರಾಹ್ಮಣಸ್ಸ ಹಿ ॥೫೭॥**

ಸೂತರು ಹೇಳುತ್ತಾರೆ.

೫೭ ಹೀಗೆ ಶಿವಕಥೆಯನ್ನು ಕೇಳಿ ಪಶ್ಚಾತ್ತಾಪದಿಂದ ಬೆಂದು ತನ್ನ ಪಾಪಗಳಿಗೆ

ನಮಸ್ಕರಿಸುತ್ತಿರುವ ಆ ಚಂಚುಲೆಯನ್ನು ಕೃಪೆಯಿಂದ ಎತ್ತಿ ಬುದ್ಧಿಶಾಲಿಯಾದ ಆ ಬ್ರಾಹ್ಮಣನು ಈ ಮುಂದೆ ಹೇಳುವ ರೀತಿ ಹೇಳಿದನು.

ಇತಿ ಶ್ರೀ ಸ್ಕಾಂದಪುರಾಣೇ ಶಿವಪುರಾಣಮಾಹಾತ್ಮ್ಯೇ ಚಂಚುಲಾವೈರಾಗ್ಯವರ್ಣನಂ ನಾಮ ತೃತೀಯೋಧ್ಯಾಯಃ

ಇಲ್ಲಿಗೆ ಸ್ಕಾಂದ ಪುರಾಣದಲ್ಲಿ ಶಿವಪುರಾಣ ಮಹಾತ್ಮ್ಯೆಯಲ್ಲಿ ಚಂಚುಲೆಯ ವೈರಾಗ್ಯ ವರ್ಣನವೆಂಬ ಮೂರನೆಯ ಅಧ್ಯಾಯವು ಮುಗಿದುದು.

# ಚತುರ್ಥೋಽಧ್ಯಾಯಃ

||ಬ್ರಾಹ್ಮಣ ಉವಾಚ||

ದಿಷ್ಟ್ಯಾ ಕಾಲೇ ಪ್ರಬುದ್ಧಾಸಿ ಶಿವಾನುಗ್ರಹತೋ ವರಾಂ ।
ಇಮಾಂ ಶಿವಪುರಾಣಸ್ಯ ಶ್ರುತ್ವಾ ವೈರಾಗ್ಯವತ್ಕಥಾಂ ||೧||

ಬ್ರಾಹ್ಮಣನು ಹೇಳುತ್ತಾನೆ

೧ ಎಲೌ ಸ್ತ್ರೀಯೇ, ಶಿವನ ಪರಮಾನುಗ್ರಹದಿಂದಲೇ ನೀನು ವೈರಾಗ್ಯವನ್ನುಂಟು ಮಾಡುವ ಪವಿತ್ರವಾದ ಈ ಶಿವಕಥೆಯನ್ನು ಸರಿಯಾದ ಸಮಯದಲ್ಲಿ ಕೇಳಿ ಎಚ್ಚೆತ್ತಿರುವೆ. ನೀನು ಅದೃಷ್ಟವಂತಳಾಗಿದ್ದೀಯೆ.

ಮಾ ಭೈಷೀರ್ದ್ವಿಜಪತ್ನಿ ತ್ವಂ ಶಿವಸ್ಯ ಶರಣಂ ವ್ರಜ ।
ಶಿವಾನುಗ್ರಹತಸ್ಸರ್ವಂ ಪಾಪಂ ಸದ್ಯೋ ವಿನಶ್ಯತಿ ||೨||

೨ ಆದ್ದರಿಂದ ಎಲೈ ಬ್ರಾಹ್ಮಣ ಪತ್ನಿಯೇ ನೀನು ಭಯಪಡಬೇಡ ಇವನನ್ನೇ ನೀನು ಶರಣು ಹೊಂದು. ಶಿವಾನುಗ್ರಹದಿಂದ ನಿನ್ನ ಎಲ್ಲಾ ಪಾಪಗಳೂ ತಕ್ಷಣವೇ ನಾಶಹೊಂದುವುವು.

ವಕ್ಷ್ಯಾಮಿ ತೇ ಪರಂ ವಸ್ತು ಶಿವಕೀರ್ತಿಸಮನ್ವಿತಂ ।
ಭವಿಷ್ಯತಿ ಗತಿರ್ಯೇನ ಸರ್ವದಾ ತೇ ಸುಖಾವಹಾ ||೩||

ನಿನಗೆ ಸರ್ವದಾ ಸುಖವನ್ನುಂಟುಮಾಡುವ ಯಾವುದರಿಂದ ಉತ್ತಮಗತಿ ದೊರೆಯುವುದೋ ಅಂತಹ ಶ್ರೇಷ್ಠವಾದ ಶಿವನ ಕೀರ್ತನೆಯಿಂದ ಕೂಡಿರುವ ವಿಚಾರವನ್ನು ಹೇಳುವೆನು.

ಸಸ್ಕಥಾಶ್ರವಣಾದೇವ ಜಾತಾ ತೇ ಮತಿರೀದೃಶಿ ।
ಪಶ್ಚಾತ್ತಾಪಾನ್ವಿತಾ ಶುದ್ಧಾ ವೈರಾಗ್ಯಂ ವಿಷಯೇಷು ಚ ||೪||

೪ ಉತ್ತಮವಾದ ಈ ಶಿವಕಥೆಯನ್ನು ನೀನು ಕೇಳಿ ಈ ರೀತಿಯಾದ ಬುದ್ಧಿಯನ್ನು

ಹೊಂದಿರುವೆ. ನೀನು ಮಾಡಿದ ಪಾಪಗಳಿಗೆ ಪಶ್ಚಾತ್ತಾಪ ಪಟ್ಟಿದ್ದೀಯೆ ಪಶ್ಚಾತ್ತಾಪವೆಂಬುದು ಸಂಸ್ಕೃತ ಪದ. ಅದರ ಅರ್ಥವೇನೆಂದರೆ ಅಜ್ಞಾನದಿಂದ ಮಾಡಿದ ತಪ್ಪು ತಿಳಿದ ಮೇಲೆ ಹೀಗೆ ಮಾಡಿದೆನಲ್ಲಾ ಎಂದು, ಮಾಡಬಾರದಾಗಿತ್ತೆಂದೂ ಚಡಪಡಿಸುವುದು ವಿಷಯ ಸುಖ, ಅಭಿಲಾಷೆಗಳನ್ನು ಬಿಟ್ಟು ವೈರಾಗ್ಯವನ್ನು ಹೊಂದಿದ್ದೀಯೆ. ಅದರಿಂದ ಶುದ್ಧಳಾಗಿದ್ದೀಯೆ.

**ಪಶ್ಚಾತ್ತಾಪಃ ಪಾಪಕೃತಾಂ ಪಾಪಾನಾಂ ನಿಷ್ಕೃತಿಃ ಪರಾ ।**
**ಸರ್ವೇಷಾಂ ವರ್ಣಿತಂ ಸದ್ಭಿಸ್ಸರ್ವಪಾಪವಿಶೋಧನಂ ॥೫॥**

೫ ಪಾಪಕೃತ್ಯ ಮಾಡಿದವರಿಗೆ ಪಶ್ಚಾತ್ತಾಪವೇ ಪಾಪಗಳನ್ನು ತೊಳೆಯುವ ಶ್ರೇಷ್ಠವಾದ ಸಾಧನವಾಗಿದೆ. ಈ ರೀತಿ ಎಲ್ಲಾ ಸತ್ಪುರುಷರೂ ಪಶ್ಚಾತ್ತಾಪವು ಪಾಪನಿವಾರಕವೆಂದು ವರ್ಣಿಸಿದ್ದಾರೆ.

**ಪಶ್ಚಾತ್ತಾಪೇನೈವ ಶುದ್ಧಿಃ ಪ್ರಾಯಶ್ಚಿತ್ತಂ ಕರೋತಿ ಸಃ ।**
**ಯಥೋಪದಿಷ್ಟಂ ಸದ್ಭಿರ್ಹಿ ಸರ್ವಪಾಪವಿಶೋಧನಂ ॥೬॥**

೬ ಪಾಪಗಳಿಗೆ ಪಶ್ಚಾತ್ತಾಪವೇ ಪ್ರಾಯಶ್ಚಿತ್ತವು. ಅದರಿಂದ ಪಾಪ ಪರಿಹಾರವಾಗುತ್ತದೆ. ಈ ರೀತಿಯಿಂದ ಪಾಪವಿಶೋಧನೆಗೆ ಇದೇ ಮಾರ್ಗವೆಂದು ಸತ್ಪುರುಷರು ಉಪದೇಶಿಸಿದ್ದಾರೆ.

**ಪ್ರಾಯಶ್ಚಿತ್ತಮಧೀಕೃತ್ಯಾವಿಧಿವನ್ನಿರ್ಭಯಃ ಪುಮಾನ್ ।**
**ನ ಯಾತಿ ಸುಗತಿಂ ಪ್ರಾಯಃ ಪಶ್ಚಾತ್ತಾಪೀ ನ ಸಂಶಯಃ ॥೭॥**

೭ ಈ ರೀತಿ ಪಾಪಗಳಿಗೆ ಪ್ರಾಯಶ್ಚಿತ್ತವು ಈ ರೀತಿ ಎಂದು ತಿಳಿದೂ ಬುದ್ಧಿಪೂರ್ವಕವಾಗಿ ಯಾವನು ನಿರ್ಭಯದಿಂದ ಪಾಪಕೃತ್ಯಗಳನ್ನು ಮಾಡುವನೋ ಅಂತಹವನು ಪಶ್ಚಾತ್ತಾಪಪಟ್ಟರೂ ಸದ್ಗತಿಯನ್ನು ಹೊಂದಲಾರನು, ಇದರಲ್ಲಿ ಸಂಶಯವಿಲ್ಲ.

ವಿ.ವಿ.ತಿಎಲ್ಲಾ ಕಥೆಗಳಲ್ಲೂ ಪಾಪಗಳಿಗೆ ಪ್ರಾಯಶ್ಚಿತ್ತವನ್ನು ಹೇಳಿದ್ದಾರೆ. ಎಂದ ಮಾತ್ರಕ್ಕೆ ನಾವು ಪಾಪ ಮಾಡುವುದು, ನಂತರ ಪ್ರಾಯಶ್ಚಿತ್ತ ಆಚರಿಸುವುದು ಎಂದರ್ಥವಲ್ಲ. ಅಜ್ಞಾನವಶಾತ್ ನಮಗೆ ತಿಳಿಯದೆಯೇ ತಪ್ಪು ಮಾಡಿದ್ದು ಆನಂತರ

ನಾವು ಮಾಡಿದ್ದು ತಪ್ಪೆಂದು ತಿಳಿದ ಮೇಲೆ ಅದಕ್ಕೆ ಹೇಳಿದ ಪ್ರಾಯಶ್ಚಿತ್ತ ಮಾಡಿಕೊಂಡು ನಂತರದ ಜೀವನದಲ್ಲಿ ಅಂತಹ ತಪ್ಪಾಗದಂತೆ ಎಚ್ಚರಮಾಡುವುದು ಸಜ್ಜನರ ಲಕ್ಷಣಪ ಹಾಗೆ ಆದಾಗ ಮಾತ್ರ ಪ್ರಾಯಶ್ಚಿತ್ತವಾಗುವುದು. ಇಲ್ಲವಾದಲ್ಲಿ ಇಲ್ಲ.

**ಏತಚ್ಛಿವಪುರಾಣಸ್ಯ ಕಥಾಶ್ರವಣತೋ ಯಥಾ ।**
**ಜಾಯತೇ ಚಿತ್ತಶುದ್ಧಿರ್ಹಿ ನ ತಥಾನ್ಯೈರುಪಾಯತಃ ।।೮।।**

೮ ಆದ್ದರಿಂದ ಈ ಶಿವಪುಆರಣದ ಕಥೆಯನ್ನು ಕೇಳುವುದರಿಂದ ಹೇಗೆ ಮನಸ್ಸು ಶುದ್ಧಿ ಹೊಂದುವುದೋ ಹಾಗೆ ಬೇರೆ ಇನ್ಯಾವ ಉಪಾಯಗಳಿಂದಲೂ ಶುದ್ಧಿಯುಂಟಾಗುವುದಿಲ್ಲ.

**ಶೋಧ್ಮಾನಂ ದರ್ಪಣಂ ಹಿ ಯಥಾ ಭವತಿ ನಿರ್ಮಲಂ ।**
**ತಥೈತತ್ಕಥಯಾ ಚೇತೋ ವಿಶುದ್ಧಿಂ ಯಾತ್ಯಸಂಶಯಂ ।।೯।।**

೯ ಚೆನ್ನಾಗಿ ಶುದ್ಧಿಮಾಡಿದ ಕನ್ನಡಿಯು ಹೇಗೆ ನಿರ್ಮಲವಾಗಿರುತ್ತದೋ ಹಾಗೆ ಈ ಶಿವಕಥಾಶ್ರವಣದಿಂದ ಮನಸ್ಸು ಶುದ್ಧಿಯನ್ನು ಹೊಂದುವುದು. ಇದರಲ್ಲಿ ಸಂಶಯವಿಲ್ಲ.

**ವಿಶುದ್ಧೇ ಚೇತಸಿ ಶಿವೋ ನೃಣಾಂ ಶಿಷ್ಯತಿ ಸಾಂಬಿಕಃ ।**
**ತತೋ ಯಾತಿ ವಿಶುದ್ಧಾತ್ಮಾ ಸಾಂಬಶಂಭೋ ಪರಂ ಪದಂ ।।೧೦।।**

೧೦ ಮನುಷ್ಯರ ನಿಷ್ಕಲ್ಮಷವಾದ ಮನಸ್ಸಿನಲ್ಲಿ ಈಶ್ವರನು ಪಾರ್ವತಿಯೊಡಗೂಡಿ ಇರುವನು. ಈ ರೀತಿಯಾಗಿ ಪವಿತ್ರಾತ್ಮನಾದ ಮನುಜನು ಶಿವನ ಪರಮಪದವನ್ನು ಹೊಂದುವನು.

**ಅತಃ ಸರ್ವಸ್ಯ ವರ್ಗಸ್ಯೈತತ್ಕಥಾಸಾಧನಂ ಮತಂ ।**
**ಏತದರ್ಥಂ ಮಹಾದೇವೋ ನಿರ್ಮಮೇ ತ್ವಾಗ್ರಹಾದಿಮಾಂ ।।೧೧।।**

೧೧ ಆದ್ದರಿಂದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಲ್ಲರಿಗೂ ಈ ಶಿವಪುರಾಣವು ಉತ್ತಮವಾದ ಸಾಧನವಾಗಿರುವುದು. ಆದ್ದರಿಂದ ಎಲ್ಲರೂ ಶಿವಕಥಾ ಶ್ರವಣ ಮಾಡಬೇಕು. ಇದಕ್ಕಾಗಿಯೇ ಶಿವನು ಇದನ್ನು ಒತ್ತಾಯವಾಗಿ ನಮಗೋಸ್ಕರ ನಿರ್ಮಿಸಿರುವನು.

**ಕಥಯಾ ಸಿಧ್ಯತಿ ಧ್ಯಾನಮನಯಾ ಗಿರಿಜಾಪತೇಃ ।**
**ಧ್ಯಾನಜ್ಞ್ಜಾನಂ ಪರಂ ತಸ್ಮಾತ್ಕೈವಲ್ಯಂ ಭವತಿ ಧ್ರುವಂ ॥೧೨॥**

೧೨ ಈ ಶಿವಕಥಾ ಶ್ರವಣದಿಂದ ಧ್ಯಾನವು ಸಿದ್ಧಿಸುತ್ತದೆ. ಧ್ಯಾನದಿಂದ ಉತ್ತಮವಾದ ಜ್ಞಾನೋದಯವಾಗುತ್ತದೆ. ಅಂತಹ ಜ್ಞಾನದಿಂದ ನಿಶ್ಚಯವಾಗಿಯೂ ಮೋಕ್ಷವು ಲಭಿಸುತ್ತದೆ.

ವಿ.ವಿ.ತ ಇಲ್ಲಿ ಧ್ಯಾನವೆಂದರೆ ಪರಮಾತ್ಮ ವಿಚಾರವನ್ನು ಯಾವಾಗಲೂ ಮನಸ್ಸಿನಲ್ಲಿ ಚಿಂತಿಸುತ್ತಿರುವುದು. ಇದರಿಂದಾಗಿ ನಾವು ಯಾವುದನ್ನು ಏಕಾಗ್ರತೆಯಿಂದ ಚಿಂತಿಸುತ್ತೇವೆಯೋ ಆ ವಸ್ತುವಿನ ಜ್ಞಾನ ಅಂದರೆ ಅದರ ಸಂಪೂರ್ಣ ಅರಿವು ಉಂಟಾಗುತ್ತದೆ. ಹಾಗೆ ತಿಳಿಯುವಿಕೆಯಿಂದ ಜನನ, ಮರಣಗಳಿಂದ ಬಿಡಲ್ಪಟ್ಟು ಉತ್ತಮವಾದ ಮೋಕ್ಷವನ್ನು ಹೊಂದುತ್ತಾರೆ.

**ಅಸಿದ್ಧ ಶಂಕರಧ್ಯಾನಃ ಕಥಾಮೇವ ಶೃಣೋತಿ ಯಃ ।**
**ಸ ಪ್ರಾಪ್ಯಾನ್ಯಭವೇ ಧ್ಯಾನಂ ಶಂಭೋರ್ಯಾತಿ ಪರಾಂ ಗತಿಂ ೯ತಿಳಿ ॥೧೩॥**

ಪರಮೇಶ್ವರನ ಧ್ಯಾನ ಮಾಡಿದರೂ ಯಾರಿಗೆ ಸಿದ್ಧಿಯಾಗುವುದಿಲ್ಲವೊ ಅವರಿಗೆ ಈ ಶಿವ ಕಥಾಶ್ರವಣದಿಂದ ಮುಂದಿನ ಜನ್ಮದಲ್ಲಿ ಧ್ಯಾನಕ್ಕೆ ಸಿದ್ಧಿಯುಂಟಾಗಿ ಮೋಕ್ಷವು ಲಭಿಸುವುದು.

**ಏತತ್ಕಥಾಶ್ರವಣತಃ ಕೃತ್ವಾ ಧ್ಯಾನಮುಮಾಪತೇಃ ।**
**ತೇ ಪಶ್ಚಾತ್ತಾಪಿನಃ ಪಾಪಾ ಬಹವಃ ಸಿದ್ಧಿಮಾಗತಾಃ ॥ ೧೪॥**

೧೪ ಈ ಕಥಾ ಶ್ರವಣ ಮಾಡುವಿಕೆಯಿಂದ ಶಿವನನ್ನು ಧ್ಯಾನಮಾಡಿ ಬಹಳ ಪಾಪ ಮಾಡಿದವರೂ ಸಹ ಪಶ್ಚಾತ್ತಾಪದ ನಂತರ ಸಿದ್ಧಿಯನ್ನು ಹೊಂದುವರು.

**ಸರ್ವೇಷಾಂ ಶ್ರೇಯಸಾಂ ಬೀಜಂ ಸತ್ಕಥಾಸ್ರವಣಂ ನೃಣಾಂ ।**
**ಯಥಾವತ್ಮರ್ಗ ಸಮಾರಾಧ್ಯಂ ಭವಬಂಧಗಪಾಪಹಂ ॥೧೫॥**

೧೫ ಎಲ್ಲಾ ಮನುಷ್ಯರಿಗೂ ಈ ಸತ್ಕಥಾ ಶ್ರವಣವು ಶ್ರೇಯಸ್ಸಿನ ಕಾರಣವಾಗಿರುತ್ತದೆ. ಸರಿಯಾದ ರೀತಿಯಿಂದ ಚೆನ್ನಾಗಿ ಆರಾಧಿಸಿದರೆ ಸಂಸಾರ ಬಂಧನವೆಂಬ ರೋಗವು ನಾಶವಾಗುವುದು.

**ಕಥಾಶ್ರವಣತಃ ಶಂಭೋರ್ಮನನಾಚ್ಚ ತತೋ ಹೃದಾ ।**
**ನಿದಿಧ್ಯಾಸನತಶ್ಚೈವ ಚಿತ್ತಶುದ್ಧಿರ್ಭವತ್ಯಲಂ ॥೧೬॥**

೧೬ ಈ ಈಶ್ವರನ ಕಥೆಯನ್ನು ಕೇಳುವಿಕೆಯಿಂದ, ಹಾಗೆ ಕೇಳಿದ ವಿಚಾರವನ್ನು ಮನಸ್ಸಿನಲ್ಲಿ ವಿಚಾರ ಮಾಡುವಿಕೆಯಿಂದ, ಹಾಗೆ ಮತ್ತೆ ಮತ್ತೆ ಶಿವನನ್ನೇ ಚಿಂತಿಸುವುದರಿಂದಲೂ ಸಹ ಮನಸ್ಸು ಶುದ್ಧವಾಗುವುದು.

**ಅತೋ ಭಕ್ತಿರ್ಮಹೇಶಸ್ಯ ಪುತ್ರಾಭ್ಯಾಂ ಭವತಿ ಧ್ರುವಂ ।**
**ತವನುಗ್ರಹತೋ ದಿವ್ಯಾ ಇತೋ ಮುಕ್ತಿರ್ನ ಸಂಶಯಃ ೯೨ ॥೧೭॥**

೧೭ ಆದುದರಿಂದ ಶಿವನ ಮಕ್ಕಳಾದ ಗಣಪತಿ, ಸುಬ್ರಹ್ಮಣ್ಯ ಇವರ ಮೂಲಕ ಶಿವನಲ್ಲಿ ಭಕ್ತಿಯುಂಟಾಗಿ ಅವನ ಅನುಗ್ರಹದಿಂದ ದಿವ್ಯವಾದ ಮುಕ್ತಿಯು ಖಂಡಿತವಾಗಿಯೂ ಲಭಿಸುತ್ತದೆ. ಇದರಲ್ಲಿ ಸಂಶಯವಿಲ್ಲ.

**ತದ್ವಿಹೀನಃ ಪಶುರ್ಜ್ಞೇಯೋ ಮಾಯಾಬಂಧನಸಕ್ತಧೀಃ ।**
**ಸಂಸಾರಬಂಧನಾನ್ನೈವ ಮುಕ್ತೋ ಭವತಿ ಸ ಧ್ರುವಂ ॥೧೮॥**

೧೮ ಈ ರೀತಿಯಾದ ಶಿವಭಕ್ತಿ ಇಲ್ಲದವನು ಪಶುವೆಂದು ತಿಳಿಯಬೇಕು. ಇಂತಹವನು ಮಾಯಾ ಬಂಧನದಲ್ಲಿ ಆಸಕ್ತನಾದ ಬುದ್ಧಿಯುಳ್ಳವನಾಗಿ, ಸಂಸಾರ ಬಂಧನಗಳಿಂದ ಎಂದಿಗೂ ಮುಕ್ತಿಯನ್ನು ಪಡೆಯಲಾರನು.

ವಿ.ಸೂ. ಸಕಲ ಪ್ರಾಣಿಗಳಲ್ಲಿ ಮನುಷ್ಯ ಪ್ರಾಣಿಯು ಶ್ರೇಷ್ಠ ನಾಗಿರುತ್ತಾನೆ. ಎಷ್ಟೋ ಜನ್ಮಗಳ ಪುಣ್ಯ ಫಲದಿಂದ ಮನುಷ್ಯಜನ್ಮ ಉಳಿದ ಪ್ರಾಣಿಗಳಿಗಿಂತ ಶ್ರೇಷ್ಠ ವೇಕೆಂದರೆ ವಿವೇಚನಾ ಶಕ್ತಿ ಇರುವುದರಿಂದ. ಆತನಿಗೆ ಒಳ್ಳೆಯದುಕೆಟ್ಟದ್ದು ಎಂದು ವಿವೇಚನೆಯಿಂದ ತಿಳಿಯುವ ಶಕ್ತಿ ಇರುತ್ತದೆ. ಆದ್ದರಿಂದ ಮಾನವನಾದವನು ಉನ್ನತಿಯನ್ನು ಪಡೆಯಲು ಯೋಚಿಸಿ ಸತ್ಕಾರ್ಯ ಪ್ರವೃತ್ತನಾಗಬೇಕು. ಇಲ್ಲದೇ ಉಳಿದ ಪ್ರಾಣಿಗಳಂತೆ ವಿವೇಕ ಶೂನ್ಯನಾಗಿ ವ್ಯವಹರಿಸಿದರೆ ಅವನೇ ಪಶುವಾಗುತ್ತಾನೆ.

**ಅತೋ ಹಿ ದ್ವಿಜಪತ್ನಿ ತ್ವಂ ವಿಷಯೇಭ್ಯೋ ನಿವೃತ್ತಧೀಃ ।**
**ಶೃಣು ಶಂಭೋಃ ಕಥಾಂ ಚೇತಾಂ ಭಕ್ತ್ಯಾ ಪರಮಪಾವನೀಂ ॥೧೯॥**

೧೯ ಆದ್ದರಿಂದ ಎಲೈ ದ್ವಿಜ ಪತ್ನಿಯೇ, ನಾನು ವಿಷಯ ಸುಖಗಳಲ್ಲಿ ವೈರಾಗ್ಯವನ್ನು ಹೊಂದಿದ್ದೀಯೆ. ನೀನೀಗ ಅತ್ಯಂತ ಪವಿತ್ರವಾದ ಶಂಭುವಿನ ಕಥೆಯನ್ನು ಕೇಳು.

ವಿ.ಸೂ. ರಾಗುವೆಂದರೆ ಯಾವುದೇ ಪದಾರ್ಥ, ವಿಚಾರಗಳಲ್ಲಿ ಆಸಕ್ತಿ
ವೈರಾಗ್ಯವೆಂದರೆ ಯಾವುದೇ ಪದಾರ್ಥ, ವಿಚಾರಗಳಲ್ಲಿ ನಿರಾಸಕ್ತಿ, ಉದಾಸೀನ ಭಾವನೆ.

ಶೃಣ್ವಂತ್ಯಾಸ್ಸತ್ಕಥಾಮೇತಾಂ ಶಂಕರಸ್ಯ ಪರಾತ್ಮನಃ ।
ಶುದ್ಧಿಮೇಷ್ಯತಿ ಚೇತಸ್ತೇ ತತೋ ಮುಕ್ತಿಮವಾಪ್ಸ್ಯಸಿ ॥೨೦॥

೨೦ ನೀನೀಗ ಪರಮಾತ್ಮನಾದ ಈಶ್ವರನ ಈ ಕಥೆಯನ್ನು ಕೇಳು. ಇದರಿಂದ ನಿನ್ನ ಮನಸ್ಸು ಶುದ್ಧಿಯನ್ನು ಹೊಂದಿ ಅನಂತರದಲ್ಲಿ ನೀನು ಮುಕ್ತಿಯನ್ನು ಪಡೆಯುವೆ.

ಧ್ಯಾಯತಃ ಶಿವಪಾದಾಬಂ ಚೇತಸಾ ನಿರ್ಮಲೇನ ವೈ ।
ಏಕೇನ ಜನ್ಮನಾ ಮುಕ್ತಿಸ್ಸತ್ಯಂ ಸತ್ಯಂ ವದಾಮ್ಯಹಂ ॥೨೧॥

೨೧ ಪರಿಶುದ್ಧವಾದ ಮನಸ್ಸಿನಿಂದ ಶಿವನ ಪಾದಕಮಲಗಳನ್ನು ಧ್ಯಾನ ಮಾಡುವವನು ಒಂದೇ ಜನ್ಮದಲ್ಲಿ ಮುಕ್ತಿಯನ್ನು ಹೊಂದುವನು. ಇದು ಸತ್ಯವು ಸತ್ಯವೆಂದು ನಾನು ಹೇಳುವೆನು.

॥ಸೂತ ಉವಾಚ॥

ಇತ್ಯುಕ್ತ್ವಾ ಸ ದ್ವಿಜವರೋ ವರಃ ಶೈವಃ ಕೃಪಾದ್ರ್ರಧೀಃ ।
ತೂಷ್ಣೀಂ ಬಭೂವ ಶುದ್ಧಾತ್ಮಾ ಶಿವಧ್ಯಾನಪರಾಯಣಃ ॥೨೨॥

೨೨ ಸೂತನು ಹೇಳುತ್ತಾನೆ. ಆ ಬ್ರಾಹ್ಮಣ ಶ್ರೇಷ್ಠನು ದಯೆಯುಳ್ಳ ಬುದ್ಧಿಯುಳ್ಳವನಾಗಿ ಈ ರೀತಿಯಾಗಿ ಚಂಚುಲೆಗೆ ಉಪದೇಶಿಸಿ ಶಿವಧ್ಯಾನಾಸಕ್ತನಾಗಿ ಸುಮ್ಮನಾದನು.

ಅಥ ಬಿಂದುಗಪತ್ನೀ ಸಾ ಚಂಚುಲಾಹ್ವಾ ಪ್ರಸನ್ನಧೀಃ ।
ಇತ್ಯುಕ್ತ್ವಾ ತೇನ ವಿಪ್ರೇಣ ಸಮಾಸೀದ್ಬಾಷ್ಪಲೋಚನಾ ॥೨೩॥

೨೩ ಅನಂತರದಲ್ಲಿ ಬಿಂದುಗನ ಪತ್ನಿಯಾದ ಚಂಚುಲೆಯು ಪ್ರಸನ್ನವಾದ ಬುದ್ಧಿಯುಳ್ಳವಳಾಗಿ ಹೀಗೆ ಹೇಳಲ್ಪಟ್ಟ ಬ್ರಾಹ್ಮಣನ ಮಾತುಗಳಾದ ಆನಂದಬಾಷ್ಪ ಉಳ್ಳ ಕಣ್ಣುಗಳುಳ್ಳವಳಾದಳು.

**ಪಪಾತಾರಂ ದ್ವಿಜೇಂದ್ರಸ್ಯ ಪಾದಯೋಸ್ತಸ್ಯ ಹೃಷ್ಟಧೀಃ ।**
**ಚಂಚುಲಾ ಸಾಂಜಲಿಸ್ಸಾ ಚ ಕೃತಾರ್ಥಾಸ್ಮೀತ್ಯಭಾಷತ ॥೨೪॥**

೨೪ ಹೀಗೆ ಆನಂದ ಪರವಶಳಾದ ಆ ಚಂಚುಲೆಯು ಸಂತುಷ್ಟನಾದ ಬುದ್ಧಿಯುಳ್ಳವಳಾಗಿ ಬ್ರಹ್ಮಣ ಶ್ರೇಷ್ಟನ ಪಾದಗಳಿಗೆ ನಮಸ್ಕರಿಸಿ ಅಂಜಲಿಬದ್ಧಳಾಗಿ ನಾನು ಕೃತಾರ್ಥಳಾದೆ ಎಂದು ಹೇಳಿದಳು.

**ಅಥ ಸೋತ್ಥಾಯ ಸಾತಂಕಾ ಸಾಂಜಲಿರ್ಗದ್ಗದಾಕ್ಷರಂ ।**
**ತಮುವಾಚ ಮಹಾಶೈವಂ ದ್ವಿಜಂ ವೈರಾಗ್ಯಯುಕ್ತಧೀಃ ॥೨೫॥**

೨೫ ಅನಂತರ ಆತಂಕದಿಂದ ಎದ್ದು ಅಂಜಲಿಬದ್ಧಳಾಗಿ ಗದ್ಗದ ಸ್ವರದಿಂದ ಮಹಾಶೈವನಾದ ಬ್ರಾಹ್ಮಣನನ್ನು ಕುರಿತು ವೈರಾಗ್ಯದಿಂದ ಕೂಡಿದ ಬುದ್ಧಿಯುಳ್ಳವಳಾಗಿ ಹೀಗೆ ಹೇಳಿದಳು.

**॥ಚಂಚುಲೋವಾಚ॥**

**ಬ್ರಹ್ಮನ್ ಶೈವವರ ಸ್ವಾಮಿನ್ ಧನ್ಯಸ್ತ್ವಂ ಪರಮಾರ್ಥದೃಕ್**
**ಪರೋಪಕಾರನಿರತೋ ವರ್ಣನೀಯಃ ಸುಸಾಧುಷು ॥೨೬॥**

೨೬ ಚಂಚುಲೆಯು ಹೇಳಿದಳು. ಎಲೈ ಶೈವ ಶ್ರೇಷ್ಠನಾದ ಬ್ರಾಹ್ಮಣನೇ ಪರಮಾರ್ಥ ತತ್ವವನ್ನು ತಿಳಿದಿರುವ ನೀನೇ ಧನ್ಯನು. ಸತ್ಪುರಷನಾಗಿ ಪರೋಪಕಾರನಿರತನೂ ಆಗಿರುವ ನೀನು ವರ್ಣನೀಯನು.

**ಉದ್ಧರೋದ್ಧರ ಮಾಂ ಸಾಧೋ ಪತಂತೀ ನರಕಾರ್ಣವೇ ।**
**ಶ್ರುತ್ವಾ ಯಾಂ ಸುಕಥಾಂ ಶೈವೀಂ ಪುರಾಣಾರ್ಥವಿಜೃಂಭಿತಾಂ ॥೨೭॥**

೨೭ ನೀನು ನರಕವೆಂಬ ಸಮುದ್ರದಲ್ಲಿ ಬೀಳುತ್ತಿರುವ ನನ್ನನ್ನು ಉದ್ಧಾರಮಾಡು. ಯಾವ ಪುರಾಣಾರ್ಥಗಳಿಂದ ವಿಜೃಂಭಿಸುವ ಶಿವಕಥೆಯನ್ನು ಕೇಳಿದ್ದೇನೆ.

**ವಿರಕ್ತಧೀರಹಂ ಜಾತಾ ವಿಷಯೇಭ್ಯಶ್ಚ ಸರ್ವತಃ ।**
**ಸುಶ್ರದ್ಧಾ ಮಹತೀ ಹ್ಯೇತತ್ಪುರಾಣಶ್ರವಣೇಽಧುನಾ ॥೨೮॥**

೨೮ ಹಾಗೆ ಕೇಳಿ ನಾನು ಎಲ್ಲಾ ವಿಷಯ ಸುಖಗಳನ್ನು ತ್ಯಜಿಸಿರುವಂತಹ

ಬುದ್ಧಿಯಳ್ಳವಳಾಗಿದ್ದೇನೆ. ಈಗ ನನಗೆ ಈ ಶಿವಪುರಾಣ ಕೇಳುವುದರಲ್ಲಿ ಅತ್ಯಂತ ಒಳ್ಳೆಯ ರೀತಿ ಶ್ರದ್ಧೆಯುಂಟಾಗಿರುವುದು.

||ಸೂತ ಉವಾಚ||

ಇತ್ಯುಕ್ತ್ವಾ ಸಾಂಜಲೀ ಸಾ ವೈ ಸಂಪ್ರಾಪ್ಯ ತದನುಗ್ರಹಂ ।
ತತ್ಪುರಾಣಂ ಶ್ರೋತುಕಾಮಾತಿಷ್ಠತ್ತತ್ಸೇವನೇ ರತಾ ||೨೯||

೨೯ ಸೂತರು ಹೇಳುತ್ತಾರೆ. ಹೀಗೆ ಹೇಳಿದ ಚಂಚುಲೆಯು ಅಂಜಲಿಬದ್ಧಳಾಗಿ ಆ ಬ್ರಾಹ್ಮಣನ ಅನುಗ್ರಹವನ್ನು ಸಂಪಾದಿಸಿ ಶಿವಪುರಾಣವನ್ನು ಕೇಳುವ ಇಚ್ಚೆಯುಳ್ಳವಳಾಗಿ ಅವನ ಸೇವೆ ಮಾಡುತ್ತಿದ್ದಳು.

ಅಥ ಶೈವವರೋ ವಿಪ್ರಸ್ತಸ್ಮಿನ್ನೇವ ಸ್ಥಲೇ ಸುಧೀಃ ।
ಸತ್ಕಥಾಂ ಶ್ರಾವಯಾಮಾಸ ತತ್ಪುರಾಣಸ್ಯ ಶಾಂ ಸ್ತ್ರಿಯಂ ||೩೦||

೩೦ ಅನಂತರದಲ್ಲಿ ಶೈವಶ್ರೇಷ್ಠನಾದ ಆ ಬ್ರಾಹ್ಮಣನು ಆ ಸ್ಥಳದಲ್ಲಿಯೇ ಆಕೆಗೆ ಶಿವಪುರಾಣದ ಒಳ್ಳೆಯ ಕಥೆಯನ್ನು ಹೇಳಿದನು.

ಇತ್ಥಂ ತಸ್ಮಿನ್ಮಹಾಕ್ಷೇತ್ರೇ ತಸ್ಮಾದೇವ ದ್ವಿಜೋತ್ತಮಾತ್
ಕಥಾಂ ಶಿವಪುರಾಣಸ್ಯ ಸಾ ಶುಶ್ರಾವ ಮಹೋತ್ತಮಾಂ ||೩೧||

೩೧ ಈ ರೀತಿಯಾಗಿ ಶೈವಶ್ರೇಷ್ಠನಾದ ಆ ಬ್ರಾಹ್ಮಣೋತ್ತಮನಿಂದ ಅತ್ಯಂತ ಉತ್ತಮವಾದ ಶಿವಪುರಾಣವನ್ನು ಕೇಳಿದಳು.

ಭಕ್ತಿಜ್ಞಾನವಿರಾಗಾಣಾಂ ವರ್ಧಿನೀಂ ಮುಕ್ತಿದಾಯಿನೀಂ ।
ಬಭೂವ ಸುಕೃತಾರ್ಥಾ ಸಾ ಶ್ರುತ್ವಾ ತಾಂ ಸತ್ಕಥಾಂ ಪರಾಂ ||೩೨||

೩೨ ಭಕ್ತಿ, ಜ್ಞಾನ, ವೈರಾಗ್ಯವನ್ನುಂಟು ಮಾಡುವ ಮೋಕ್ಷವನ್ನು ನೀಡುವಂತಹ ಶ್ರೇಷ್ಠವಾದ ಒಳ್ಳೆಯ ಕಥೆಯನ್ನು ಕೇಳಿ ಆಕೆಯು ಕೃತಾರ್ಥಳಾದಳು.

ಸದ್ಗುರೋಸ್ತಸ್ಯ ಕೃಪಯಾ ಶುದ್ಧಚಿತ್ತಾ ಚ ಸಾ ದ್ರುತಂ ।
ಶಿವಾನುಗ್ರಹತಃ ಶಂಭೋ ರೂಪಧ್ಯಾನಮವಾಪ ಹ ||೩೩||

೩೩ ಸದ್ಗುರುವಾದ ಆ ಬ್ರಾಹ್ಮಣನ ಕೃಪೆಯಾದ ಈ ರೀತಿಯಾಗಿ ಕಥೆ

ಕೇಳುವಿಕೆಯಿಂದ ಆ ಚಂಚುಲೆಯು ಬೇಗನೆ ಮನಃಶುದ್ಧಿಯನ್ನು ಹೊಂದಿದಳು. ಶಿವನ ಅನುಗ್ರಹದಿಂದ ಈಶ್ವರನ ಧ್ಯಾನದಲ್ಲಿ ಆಸಕ್ತಳಾದಳು.

ಇತ್ಥಂ ಸದ್ಗುರುಮಾಶ್ರಿತ್ಯ ಸಾ ಪ್ರಾಪ್ತಶಿವಸನ್ಮತಿಃ ।
ದದ್ಧ್ಯೌ ಮುಹುರ್ಮುಹುಃ ಶಂಭೋಶ್ಚಿದಾನಂದಮಯಃ ವಪುಃ ॥೩೪॥

೩೪ ಈ ರೀತಿಯಾಗಿ ಸದ್ಗುರುವನ್ನು ಆಶ್ರಯಿಸಿ ಅವಳು ಶಿವನಲ್ಲಿ ಒಳ್ಳೆಯ ರೀತಿ ಮನಸ್ಸನ್ನಿಟ್ಟು, ಮತ್ತೆ ಮತ್ತೆ ಜ್ಞಾನಾನಂದ ರೂಪವಾದ ಶಿವನ ದಿವ್ಯ ದೇಹವನ್ನು ಧ್ಯಾನಿಸಿದಳು.

ಸ್ನಾತ್ವಾ ತೀರ್ಥಜಲೇ ನಿತ್ಯಂ ಜಟಾವಲ್ಕಲಧಾರಿಣೆ ।
ಭಸ್ಮೋದ್ಧೂಲಿತಸರ್ವಾಂಗೀ ರುದ್ರಾಕ್ಷಕೃತಭೂಷಣಾ ॥೩೫॥

೩೫ ತೀರ್ಥದಲ್ಲಿ ಸ್ನಾನ ಮಾಡುತ್ತಾ ನಿತ್ಯವೂ ಜಟೆಯನ್ನು ಧರಿಸಿ, ನಾರು ಮಡಿಯನ್ನುಟ್ಟು ಸರ್ವಾಂಗಕ್ಕೂ ಭಸ್ಮವನ್ನು ಲೇಪಿಸಿಕೊಂಡು, ರುದ್ರಾಕ್ಷಿಮಾಲಿಕೆಗಳಿಂದ ಅಲಂಕರಿಸಿಕೊಂಡಳು.

ಶಿವನಾಮಜಪಾಸಕ್ತಾ ವಾಗ್ಯತಾ ಮಿತಭೋಜನಾ ।
ಗುರೂಪದಿಷ್ಟಮಾರ್ಗೇಣ ಸಾ ಶಿವಂ ಸಮತೋಷಯತ್ ॥೩೬॥

೩೬ ಈ ರೀತಿಯಾಗಿ ಮುಂದುವರೆದ ಆ ಚಂಚುಲೆಯು ಶಿವನಾಮ ಜಪದಲ್ಲೇ ಆಸಕ್ತಳಾದಳು. ಹಾಗೇ ಮೌನವ್ರತಳಾಗಿ ದೇಹಧಾರಣೆಗೆ ಬೇಕಾಗುವಷ್ಟು ಮಾತ್ರ ಆಹಾರವನ್ನು ಸ್ವೀಕರಿಸುತ್ತಾ ಗುರುವಿನಿಂದ ಉಪದೇಶಿಸಲ್ಪಟ್ಟ ರೀತಿಯಲ್ಲಿ ಶಿವಧ್ಯಾನ ಮಾಡುತ್ತಾ ಪರಮೇಶ್ವರನನ್ನು ಚೆನ್ನಾಗಿ ಸಂತೋಷಪಡಿಸಿದಳು.

ಏವಂ ತಸ್ಯಾಶ್ಚಂಚುಲಾಯಾಃ ಕುರ್ವಂತ್ಯಾ ಧ್ಯಾನಮುತ್ತಮಂ ।
ಬಹುಕಾಲೋ ವ್ಯತೀಯಾಯ ಶಂಭೋಸ್ತತ್ರೈವ ಶೌನಕ ॥೩೭॥

೩೭ ಎಲೈ ಶೌನಕನೇ ಈ ರೀತಿಯಾಗಿ ಈಶ್ವರನ ಸೇವೆ ಮಾಡುತ್ತಾ, ಉತ್ತಮವಾದ ರೀತಿಯಲ್ಲಿ ಧ್ಯಾನಮಾಡುತ್ತಾ ಆ ಚಂಚುಲೆಯು ಬಹಳ ಕಾಲ ಆ ಕ್ಷೇತ್ರದಲ್ಲೇ ಕಳೆದಳು.

ಅಥ ಕಾಲೇನ ಪೂರ್ಣೇನ ಭಕ್ತಿಕಸಮನ್ವಿತಾ ।
ಸಮುತ್ಸಸರ್ಜ ದೇಹಂ ಸ್ವಮನಾಯಾಸೇನ ಚಂಚುಲಾ ॥೩೮॥

೩೮ ಹೀಗೆ ಅವಳ ಆಯಸ್ಸು ಮುಗಿಯಲು ಭಕ್ತಿ, ಜ್ಞಾನ, ವೈರಾಗ್ಯದಿಂದ ಕೂಡಿದ ಅವಳು ಯಾವ ರೀತಿಯ ಕಷ್ಟವನ್ನು ಸಹಿಸದೇ ದೇಹ ತ್ಯಾಗಮಾಡಿದಳು.

ವಿಮಾನಂ ದ್ರುತಮಾಯಾಂತಂ ಪ್ರೇಷಿತಂ ತ್ರಿಪುರಾರಿಣಾ ।
ದಿವ್ಯಂ ಸ್ವಗಣಸಂಯುಕ್ತಂ ನಾನಾಶೋಧಾಸಮನ್ವಿತಂ ॥೩೯॥

೩೯ ತತ್ಕಣದಲ್ಲೇ ಈಶ್ವರನು ಅವಳ ಭಕ್ತಿಗೆ ಮೆಚ್ಚಿ ದಿವ್ಯವಾದ ನಾನಾಲಂಕಾರಗಳಿಂದ ಕೂಡಿರುವ ತನ್ನ ಗಣಗಳಿಂದ ಕೂಡಿರುವ ವಿಮಾನವನ್ನು ಕಳುಹಿಸಿದನು.

ಅಥ ತತ್ರ ಸಮಾರೂಢಾ ಮಹೇಶಾನುರ್ಕೈರ್ವರ್ರೈಃ ।
ನೀತಾ ಶಿವಪುರೀಂ ಸದ್ಯೋಧ್ವಸ್ತಸರ್ವಮಲಾ ಚ ಸಾ ॥೪೦॥

೪೦ ಅನಂತರ ಹಾಗೆ ಬಂದಂತಹ ಶಿವನ ದೂತರು ಅವಳನ್ನು ಆ ವಿಮಾನದಲ್ಲಿ ಕುಳ್ಳರಿಸಿಕೊಂಡು ಎಲ್ಲಾ ಪಾಪಗಳಿಂದ ಬಿಡಲ್ಪಟ್ಟವಳಾಗಿದ್ದ ಚಂಚುಲೆಯನ್ನು ಶಿವನಪುರಿಗೆ ಕರೆದುಕೊಂಡು ಹೋದರು.

ದಿವ್ಯರೂಪಧರಾ ದಿವ್ಯಾ ದಿವ್ಯಾವಯವಕಾಲಿನಿ ।
ಚಂದ್ರಾರ್ಥಶೇಖರಾ ಗೌರೀ ವಿಲಸದ್ದಿವ್ಯಭೂಷಣಾ ॥೪೧॥

೪೧ ಹಾಗೆ ಕೈಲಾಸವನ್ನು ಹೊಂದಿದೊಡನೆ ಆ ಚಂಚುಲೆಯು ದೇವಯೋಗ್ಯವಾದ ಶರೀರವನ್ನು ಅವಯವವನ್ನೂ ಧರಿಸಿದವಳಾಗಿ, ಅರ್ಧಚಂದ್ರನನ್ನು ಧರಿಸಿದವಳಾಗಿ, ದೇವಯೋಗ್ಯವಾದ ಆಭರಣಗಳನ್ನು ಧರಿಸಿ ಶೋಭಿಸಿದಳು.

ಗತ್ವಾ ತತ್ರ ಮಹಾದೇವಂ ಸಾ ದದರ್ಶ ತ್ರಿಲೋಚನಂ ।
ವಿಷ್ಣುಬ್ರಹ್ಮಾದಿಭಿರ್ದೇವೈಃ ಸೇವ್ಯಮಾನಂ ಸನಾತನಂ ॥೪೨॥

೪೨ ನಂತರ ಹಾಗೆ ಹೋದ ಆಕೆಯು ಬ್ರಹ್ಮ, ವಿಷ್ಣುಗಳೇ ಮೊದಲಾದ ದೇವತೆಗಳಿಂದ ಸೇವಿಸಲ್ಪಡುತ್ತಿರುವ ಮೂರು ಕಣ್ಣುಗಳುಳ್ಳ ಮಹಾದೇವನನ್ನು ನೋಡಿದಳು.

ಗಣೇಶಭೃಂಗಿನಂದೀಶವೀರಭದ್ರೇಶ್ವರಾದಿಭಿಃ ।
ಉಪಾಸ್ಯಮಾನಂ ಸದ್ಭಕ್ತ್ಯಾ ಕೋಟಿಸೂರ್ಯಸಮುಪ್ರಭಂ ॥೪೩॥

೪೩. ಆ ಈಶ್ವರನು, ಗಣೇಶ, ಭೃಂಗಿ, ನಂದಿ, ವೀರಭದ್ರ ಮೊದಲಾದ ಗಣಗಳಿಂದ ಸೇವಿಸಲ್ಪಡುತ್ತಿದ್ದನು. ಹಾಗೆ ಅವರುಗಳಿಂದ ಭಕ್ತಿಯಿಂದ ಸೇವಿಸಲ್ಪಡುತ್ತಿರುವ ಅವನು ಕೋಟಿ ಸೂರ್ಯರ ಸಮನಾದ ಕಾಂತಿಯನ್ನು ಹೊಂದಿದನು.

ನೀಲಗ್ರೀವಂ ಪಂಚವಕ್ತ್ರಂ ತ್ರ್ಯಂಬಕಂ ಚಂದ್ರಶೇಖರಂ ।
ವಾಮಾಂಗೇ ಬಿಭ್ರತಂ ಗೌರೀಂ ವಿದ್ಯುತ್ಪುಂಜಸಮುಪ್ರಭಾಂ ॥೪೪॥

೪೪ ಆ ಈಶ್ವರನು ನೀಲಬಣ್ಣವುಳ್ಳ ಕತ್ತುಳ್ಳವನೂ, ಐದು ಮುಖವುಳ್ಳವನೂ, ಮೂರು ಕಣ್ಣುಳ್ಳವನೂ, ಚಂದ್ರನನ್ನು ತಲೆಯಲ್ಲಿ ಧರಿಸಿರುವವನೂ ಹಾಗೆ ತನ್ನ ಎದೆ ಭಾಗದಲ್ಲಿ ಮಿಂಚಿನಂತೆ ಪ್ರಕಾಶಮಾನಳಾದ ಗೌರಿಯನ್ನು ಕೂರಿಸಿಕೊಂಡಿದ್ದನು.

ಕರ್ಪೂರಗೌರಂ ಗೌರೀಶಂ ಸರ್ವಾಲಂಕಾರಧಾರಿಣಂ ।
ಸಿತಭಸ್ಮಲಸದ್ದೇಹಂ ಸಿತವಸ್ತ್ರಂ ಮಹೋಜ್ಜ್ವಲಂ ॥೪೫॥

೪೫ ಆ ಪರಮೇಶ್ವರನು ಕರ್ಪೂರದಂತೆ ಬಿಳುಪಾದ ದೇಹವುಳ್ಳವನೂ, ಎಲ್ಲಾ ಅಲಂಕಾರ ವಸ್ತುಗಳನ್ನು ಧರಿಸಿದ್ದವನಾಗಿದ್ದನು. ದೇಹಕ್ಕೆಲ್ಲಾ ಬಿಳುಪಾದ ಭಸ್ಮವನ್ನು ಲೇಪಿಸಿಕೊಂಡಿದ್ದನು. ಅತ್ಯಂತ ಪ್ರಕಾಶಮಾನವಾದ ಬಿಳಿಯ ಬಟ್ಟೆಯನ್ನು ಧರಿಸಿದ್ದನು.

ದೃಷ್ಟ್ವೈವಂ ಶಂಕರಂ ನಾರೀ ಸಾ ಮುಮೋದಾತಿ ಚಂಚುಲಾ ।
ಸುಸಂಭ್ರಮಾನ್ಮಹಾಪ್ರೀತಾ ಪ್ರಣನಾಮ ಪುನಃ ಪುನಃ ॥೪೬॥

೪೬ ಹೀಗೆ ಕಂಗೊಳಿಸುತ್ತಿದ್ದ ಪರಮೇಶ್ವರನನ್ನು ಚಂಚುಲೆಯನ್ನು ನೋಡಿ ಹೆಚ್ಚಿನ ಸಂತೋಷವನ್ನು ಹೊಂದಿದಳು. ಹಾಗೆ ಬಹಳ ಸಂಭ್ರಮದಿಂದ ಭಕ್ತಿಯುಕ್ತಳಾಗಿ ಪುನಃ ಪುನಃ ಈಶ್ವರನನ್ನು ನಮಸ್ಕರಿಸಿದಳು.

ಸಾಂಜಲಿಸ್ಸಾ ಮುದಾ ಪ್ರೇಮ್ಣಾ ಸಂತುಷ್ಟಾ ಚ ವಿನೀತಕಾ ।
ಆನಂದಾಶ್ರುಜಲೈರ್ಯುಕ್ತಾ ರೋಮಹರ್ಷಸಮನ್ವಿತಾ ॥೪೭॥

೪೭ ಆಗ ಅವಳು ಅಂಜಲಿಬದ್ಧಳಾಗಿ, ಸಂತೋಷಯುಕ್ತಳಾಗಿ, ಪ್ರೀತಿ,

ವಿನಯದಿಂದ ಕೂಡಿದವಳಾಗಿದ್ದಳು. ಅವಳು ಈಶ್ವರನನ್ನು ನೋಡುತ್ತಾ ಸಂತಸದಲ್ಲಿ ಆನಂದದ ಕಣ್ಣೀರನ್ನು ಸುರಿಸುತ್ತಾ ರೋಮಾಂಚಿತಳಾದಳು.

**ಅಥ ಸಾ ವೈ ಕರುಣಯಾ ಪಾರ್ವತ್ಯಾ ಶಂಕರೇಣ ಚ ।**
**ಸಮಾನೀತೋಪಕಂತಂ ಹಿ ಸುದೃಷ್ಟ್ಯಾ ಚ ವಿಲೋಕಿತಾ ।।೪೮।।**

೪೮ ಹೀಗೆ ಬಳಿಗೆ ಬಂದು ಈ ರೀತಿ ನಮಸ್ಕರಿಸುತ್ತಿದ್ದ ಚಂಚುಲೆಯನ್ನು ಪಾರ್ವತಿಯೂ ಶಂಕರನೂ ಕೃಪಾದೃಷ್ಟಿಯಿಂದ ನೋಡಿದರು.

**ಪಾರ್ವತ್ಯಾ ಸಾ ಕೃತಾ ಪ್ರೀತ್ಯಾ ಸ್ವಸಖೀ ದಿವ್ಯರೂಪಿಣೀ ।**
**ದಿವ್ಯಸೌಖ್ಯಾನ್ವಿತಾ ತತ್ರ ಚಂಚುಲಾ ಬಿಂದುಗಪ್ರಿಯಾ ।।೪೯।।**

೪೯ ಪಾರ್ವತಿಯು ದಯಾದೃಷ್ಟಿಯಿಂದ ಆ ಚಂಚುಲೆಯನ್ನು ನೋಡಿ ಅವಳನ್ನು ಪ್ರೀತಿಯಿಂದ ತನ್ನ ಸಖಿಯನ್ನಾಗಿ ಮಾಡಿಕೊಂಡಳು. ಈ ರೀತಿ ದಿವ್ಯರೂಪದಿಂದ ಕೂಡಿದ, ದೇವಯೋಗ್ಯವಾದ ಸೌಖ್ಯದಿಂದ ಕೂಡಿ ಬಿಂದುಗಪ್ರಿಯಳಾದ ಚಂಚುಲೆಯು ಕೈಲಾಸದಲ್ಲಿ ದಿವ್ಯ ಸುಖವನ್ನುಭವಿಸಿದಳು.

**ತಸ್ಮಿನ್ ಲೋಕೇ ಪರಾನಂದಘನಜ್ಯೋತಿಷಿ ಶಾಶ್ವತೇ ।**
**ಲಬ್ಧ್ವಾ ನಿವಾಸಮಚಲಂ ಲೇಭೇ ಸುಖಮನಾಹತಂ ।।೫೦।।**

೫೦ ಹೀಗೆ ಆ ಲೋಕದಲ್ಲಿ ಶ್ರೇಷ್ಠವಾದ ರೀತಿಯಲ್ಲಿರುತ್ತಾ, ಜ್ಯೋತಿರ್ಮಯವಾದ, ಶಾಶ್ವತವಾದ ಆ ಕೈಲಾಸದಲ್ಲಿ ಶಾಶ್ವತವಾದ ಸುಖವನ್ನು ಅನುಭವಿಸುತ್ತಾ ಇದ್ದಳು.

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಶಿವಪುರಾಣ ಮಾಹಾತ್ಮ್ಯೇ ಚಂಚುಲಾಸದ್ಗತಿವರ್ಣನಂ ನಾಮ ಚತುರ್ಥೋಽಧ್ಯಾಯಃ

ಇಲ್ಲಿಗೆ ಸ್ಕಾಂದ ಪುರಾಣದ ಮಹಾಪುರಾಣದಲ್ಲಿ ಶಿವಪುರಾಣ ಮಹಾತ್ಮ್ಯೆಯಲ್ಲಿ ಚಂಚುಲಾ ಸದ್ಗತಿ ವರ್ಣನೆಯೆಂಬ ನಾಲ್ಕನೇ ಅಧ್ಯಾಯವು ಮುಗಿದುದು.

ಶ್ರೀಃ

॥ಅಥ ಶ್ರೀ ಶಿವಪುರಾಣ ಮಾಹಾತ್ಮ್ಯೇ॥

# ಪಂಚಮೋಽಧ್ಯಾಯಃ

॥ ಶೌನಕ ಉವಾಚ ॥

ಸೂತ ಸೂತ ಮಹಾಭಾಗ ಧನ್ಯಸ್ತ್ವಂ ಶಿವಸಕ್ತಧೀಃ ।
ಶ್ರಾವಿತೇಯಂ ಕಥಾಸ್ಮಾಕಮದ್ಭುತಾ ಭಕ್ತಿವರ್ಧಿನೀ ॥ ೧ ॥

ಶೌನಕರು ಹೇಳುತ್ತಾರೆ

೧ ಎಲೈ ಸೂತಮುನಿಯೇ ನೀನು ಮಹಾಮಹಿಮನು. ಶಿವನಲ್ಲೇ ಆಸಕ್ತವುಳ್ಳ ಬುದ್ಧಿಯುಳ್ಳವನಾಗಿದ್ದೀಯೆ. ನೀನು ನನಗೆ ಭಕ್ತಿಯನ್ನು ವಿಶೇಷವಾಗಿ ಹೆಚ್ಚಿಸುವ ಅತ್ಯುದ್ಭುತವಾದ ಕಥೆಯನ್ನು ಹೇಳಿದೆ.

ತತ್ರ ಗತ್ವಾ ಕಿಂ ಚಕಾರ ಚಂಚುಲಾ ಪ್ರಾಪ್ತಸದ್ಗತಿಃ ।
ತತ್ತ್ವಂ ವದ ವಿಶೇಷೇಣ ತತ್ಪತೇಶ್ಚ ಮಹಾಮತೇ ॥೨॥

೨ ಎಲೈ ಬುದ್ಧಿವಂತನಾದ ಸೂತ ಮಹಾಮುನಿಯೇ, ಚಂಚುಲೆಯ ಶಿವನ ಸಾನಿಧ್ಯವನ್ನು ಸೇರಿದ ಮೇಲೆ ಅಲ್ಲಿ ಹೋಗಿ ಏನು ಮಾಡಿದಳು.? ಅವಳ ಗಂಡನಾದ ಬಿಂದುಗನು ಏನಾದನು? ಅವನ ವಿಚಾರವೇನು? ಈ ಎಲ್ಲಾ ವಿಚಾರಗಳನ್ನು ವಿವರಿಸುವವನಾಗು ಎಂದು ಕೇಳಿದನು.

॥ಸೂತ ಉವಾಚ॥

ಸಾ ಕದಾಚಿದುಮಾಂ ದೇವೀಮುಪಗಮ್ಯ ಪ್ರಣಮ್ಯ ಚ ।
ಸುತುಷ್ಟಾವ ಕರೌ ಬಧ್ವಾ ಪರಮಾನಂದಸಂಪ್ಲುತಾ ॥ ೩॥

ಸೂತರು ಹೇಳುತ್ತಾರೆ

೩ ಒಂದಾನೊಂದು ದಿವಸ ಆ ಚಂಚುಲೆಯು ಪಾರ್ವತಿ ದೇವಿಯ ಸಮೀಪಕ್ಕೆ ಹೋಗಿ ಕೈಗಳನ್ನು ಜೋಡಿಸಿ ಭಕ್ತಿಯಿಂದ ಅತ್ಯಂತ ಆನಂದ ತುಂದಿಲಳಾಗಿ ಸ್ತೋತ್ರಮಾಡಿ ದೇವಿಯನ್ನು ಸಂತೋಷಗೊಳಿಸಿದಳು.

||ಚಂಚುಲೋವಾಚ||

ಗಿರಿಜೇ ಸ್ಕಂದಮಾನಸ್ತ್ವಂ ಸೇವಿತಾ ಸರ್ವದಾ ನರೈಃ ।

ಸರ್ವಸೌಖ್ಯಪ್ರದೇ ಶಂಭುಪ್ರಿಯೇ ಬ್ರಹ್ಮಸ್ವರೂಪಿಣಿ || ೪||

ಚಂಚುಲೆಯು ಹೇಳುತ್ತಾಳೆ

೪ ಸುಬ್ರಹ್ಮಣ್ಯ ಸ್ವಾಮಿಯ ತಾಯಿಯಾಗಿರುವವಳು ನೀನು. ನೀನು ಯಾವಾಗಲೂ ಮನುಷ್ಯರಿಂದ ಸೇವಿಸಲ್ಪಡುತ್ತಿರುವವಳು. ಸರ್ವಸೌಖ್ಯವನ್ನು ನೀಡುವಂತಹವಳೂ, ಬ್ರಹ್ಮಸ್ವರೂಪಿಣಿಯೂ ಆಗಿರುವ ನೀನು ಶಿವ ಪ್ರೀತಿಪಾತ್ರಳಾಗಿರುವೆ.

ವಿಷ್ಣುಬ್ರಹ್ಮಾದಿಭಿಸ್ಸೇವ್ಯಾ ಸಗುಣಾ ನಿರ್ಗುಣಾಪಿ ಚ ।

ತ್ವಮಾದ್ಯಾ ಪ್ರಕೃತಿಸ್ಸೂಕ್ಷ್ಮಾ ಸಚ್ಚಿದಾನಂದರೂಪಿಣೀ ||೫||

೫ ನೀನು ಬ್ರಹ್ಮ, ವಿಷ್ಣುಗಳಿಂದ ಸೇವಿಸಲ್ಪಡುವವಳೂ, ಸಗುಣಳೂ, ನಿರ್ಗುಣಳೂ ಸಹ ಆಗಿರುವೆ. ನೀನು ಪ್ರಪಂಚದ ಸೃಷ್ಟಿಗೆ ಕಾರಣಳಾದ ಪ್ರಕೃತಿ ಸ್ವರೂಪಳಾಗಿರುವೆ. ಸೂಕ್ಷ್ಮಳೂ, ಸಚ್ಚಿದಾನಂದ ರೂಪಳೂ ಆಗಿರುವೆ.

ಸೃಷ್ಟಿಸ್ಥಿತಿಲಯಕರೀ ತ್ರಿಗುಣಾ ತ್ರಿಸುರಾಲಯಾ ।

ಬ್ರಹ್ಮವಿಷ್ಣು ಮಹೇಶಾನಾಂ ಸುಪ್ರತಿಷ್ಠಾಕರಾ ಪರಾ ||೬||

೬ ಪ್ರಪಂಚದ ಸೃಷ್ಟಿ, ಸ್ಥಿತಿ, ಸಂಹಾರಣರಕಳೂ, ಸತ್ವ, ರಜೋಸ್ತಮೋಗುಣ ಸ್ವರೂಪಳೂ ಸತ್ಯಲೋಕ ವಿಷ್ಣುಲೋಕ, ಕೈಲಾಸಗಳೂ ನಿನಗೆ ವಾಸಸ್ಥಾನವಾಗಿರತಕ್ಕಂಥವು. ತ್ರಿಮೂರ್ತಿಗಳ ಅಂದರೆ ಬ್ರಹ್ಮ, ವಿಷ್ಣು, ಮಹೇಶ್ವರರನ್ನು ಉತ್ಕೃಷ್ಟ ಪದವಿಯಲ್ಲಿರಿಸಿರುವ ನೀನು ಶ್ರೇಷ್ಟಳಾಗಿರುವೆ.

||ಸೂತ ಉವಾಚ||

ಇತಿ ಸ್ತುತ್ವಾ ಮಹೇಶೀಂ ತಾಂ ಚಂಚುಲಾ ಪ್ರಾಪ್ತಸದ್ಗತಿಃ ।

ವಿರರಾಮ ನತಸ್ಕಂಧಾ ಪ್ರೇಮಪೂರ್ಣಾಶ್ರುಲೋಚನಾ ||೭||

ಸೂತನು ಹೇಳುತ್ತಾನೆ

೭ ಹೀಗೆ ಸ್ತೋತ್ರ ಮಾಡಿ ಆ ರೀತಿ ಸದ್ಗತಿಯನ್ನು ಹೊಂದಿದ ಚಂಚುಲೆಯು ಪ್ರೀತಿ ಪೂರ್ಣವಾದ ಕಣ್ಣೀರಿನಿಂದ ತುಂಬಿದ ಕಣ್ಣುಗಳುಳ್ಳವಳಾಗಿ ಮಹೇಶ್ವರಿಗೆ ನಮಸ್ಕರಿಸಿ ನಿಂತುಕೊಂಡಳು.

ತತಸ್ಸಾ ಕರುಣಾವಿಷ್ಟಾ ಪಾರ್ವತೀ ಶಂಕರಪ್ರಿಯಾ ।
ತಾಮುವಾಚ ಮಹಾಪ್ರೀತ್ಯಾ ಚಂಚುಲಾಂ ಭಕ್ತವತ್ಸಲಾ ||೮||

೮ ಆನಂತರದಲ್ಲಿ ಶಂಕರನ ಪ್ರಿಯೆಯಾದ ಭಕ್ತವತ್ಸಲೆಯೂ ಆಗಿರುವಂತಹ ಪಾರ್ವತೀ ದೇವಿಯು ಕರುಣಾಯಿಂದ ಕೂಡಿದವಳಾಗಿ ಅತ್ಯಂತ ಪ್ರೀತಿಯಿಂದ ಚಂಚುಲೆಯನ್ನು ಕುರಿತು ಹೀಗೆ ಹೇಳಿದಳು.

||ಪಾರ್ವತ್ಯುವಾಚ ||

ಚಂಚುಲೇ ಸಖಿ ಸುಪ್ರೀತಾನಯಾ ಸ್ತುತ್ಯಾಸ್ಮಿ ಸುಂದರಿ ।
ಕಿಂ ಯಾಚಸೇ ವರಂ ಬ್ರೂಹಿ ನಾದೇಯಂ ವಿದ್ಯತೇ ತವ ||೯||

ಪಾರ್ವತಿಯು ಹೇಳುತ್ತಾಳೆ

೯ ಎಲೈ ಪ್ರಿಯಸಖಿಯಾದ ಚಂಚುಲೆಯೇ ಈ ರೀತಿ ನೀನು ಮಾಡಿದ ಸ್ತೋತ್ರದಿಂದ ಸುಪ್ರೀತಳಾಗಿದ್ದೇನೆ. ನೀನು ಏನನ್ನು ಕೇಳುತ್ತೀಯೆ ಕೇಳು. ಎಲೌ ಸುಂದರಿಯೇ ಏನು ಕೇಳಿದರೂ ಕೊಡುತ್ತೇನೆ.

||ಸೂತ ಉವಾಚ||

ಇತ್ಯುಕ್ತಾ ಸಾ ಗಿರಿಜಯಾ ಚಂಚುಲಾ ಸುಪ್ರಣಮ್ಯ ತಾಂ ।
ಪರ್ಯಪೃಚ್ಛತ ಸುಪ್ರೀತ್ಯಾ ಸಾಂಜಲಿರ್ನತಮಸ್ತಕಾ ||೧೦||

ಸೂತರು ಹೇಳುತ್ತಾರೆ.

೧೦ ಈ ರೀತಿ ಹೇಳಲ್ಪಟ್ಟ ಪಾರ್ವತಿಯ ಮಾತನ್ನುಕೇಳಿ ಚಂಚುಲೆಯು ಅವಳನ್ನು ಮತ್ತೆ ನಮಸ್ಕರಿಸಿ ಅಂಜಲಿಬದ್ಧಳಾಗಿ ತಲೆಯನ್ನು ಬಗ್ಗಿಸಿ ಭಕ್ತಿಯಿಂದ ಹೀಗೆ ಕೇಳಿದಳು.

||ಚಂಚುಲೋವಾಚ||

ಮಮ ಭರ್ತಾಧುನಾ ಕ್ವಾಸ್ತೇ ನೈವ ಜಾನಾಮಿ ತದ್ಗತಿಂ ।
ತೇನ ಯುಕ್ತಾ ಯಥಾಹಂ ವೈ ಭವಾಮಿ ಗಿರಿಜೇಽನಘೇ ||೧೧||

ಚಂಚುಲೆಯು ಹೇಳುತ್ತಾಳೆ

೧೧ ಎಲೌ ಪುಣ್ಯಮೂರ್ತಿಯಾದ ಪಾರ್ವತಿ ದೇವಿಯೇ ಈಗ ನನ್ನ ಪತಿಯಾದ ಬಿಂದುಗನು ಎಲ್ಲಿರುವನು. ಆತನ ಗತಿಯು ಈಗೇನಾಗಿದೆ ತಿಳಿಯೇನುಲ ಹಿಂದಿ ಅವನೊಡನೆ ಹೇಗಿದ್ದೆನೋ ಹಾಗೆ ಈಗಲೂ ಸಹ ಆ ನನ್ನ ಪತಿಯೊಡನೆ ಇರಬಯಸುವೆನು.

ತಥೈವ ಕುರು ಕಲ್ಯಾಣಿ ಕೃಪಯಾ ದೀನವತ್ಸಲೆ ।
ಮಹಾದೇವಿ ಮಹೇಶಾನಿ ಭರ್ತಾ ಮೇ ವೃಷಲೀಪತಿಃ ॥೧೨॥
ಮತ್ತಃ ಪೂರ್ವಂ ಮೃತಃ ಪಾಪೀ ನ ಜಾನೇ ಕಾಂ ಗತಿಂ ಗತಃ

೧೨ ಹಾಗೆ ನನಗೆ ಕೃಪೆಯಿಂದ ಅನುಗ್ರಹ ಮಾಡು. ದೀನವತ್ಸಲೆಯೇ, ಮಹಾದೇವಿಯೇ, ಈಶ್ವರನ ಪತ್ನಿಯೇ ನನ್ನ ಪತಿಯು ವೇಶ್ಯಾಪತಿಯಾಗಿದ್ದನು. ಹಾಗೆ ಪಾಪಿಷ್ಟನಾಗಿದ್ದು ಅವನು ಹಿಂದೆ ಸತ್ತು ಹೋದನು. ಅಂತಹ ಪಾಪಿಯಾದ ಆತನು ಯಾವಗತಿಯನ್ನು ಹೊಂದಿದನೋ ಕಾಣೆನು.

॥ ಸೂತ ಉವಾಚ ॥

ಇತ್ಯಾಕರ್ಣ್ಯ ವಚಸ್ತಸ್ಯಾಶ್ಚಂಚುಲಾಯಾ ಹಿ ಪಾರ್ವತಿ ।
ಪ್ರತ್ಯುವಾಚ ಸುಸಂಪ್ರೀತ್ಯಾ ಗಿರಿಜಾ ನಯವತ್ಸಲಾ ॥೧೩॥
ಸೂತ ಮುನಿಯು ಹೇಳುತ್ತಾರೆ.

೧೩ ಈ ರೀತಿಯಾದ ಚಂಚುಲೆಯು ಮಾತುಗಳನ್ನು ಕೇಳಿದ ಪಾರ್ವತೀ ದೇವಿಯು ಸುಸಂಪ್ರೀತಳಾಗಿ ಹೀಗೆ ಹೇಳಿದಳು.

॥ ಗಿರಿಜೋವಾಚ ॥

ಸುತೇ ಭರ್ತಾ ಬಿಂದುಗಹ್ವೋ ಮಹಾಪಾಪೀ ದುರಾಶಯಃ ।
ವೇಶ್ಯಾಭೋಗೀ ಮಹಾಮೂಢೋ ಮೃತ್ವಾ ಸ ನರಕಂ ಗತಃ ॥೧೪॥
ಗಿರಿಜೆಯು ಹೇಳುವಳು

೧೪ ಎಲೌ ಪುತ್ರಿಯಾದ ಚಂಚುಲೆಯೇ ನಿನ್ನ ಪತಿಯಾಗಿದ್ದ ಬಿಂದುಗನೆಂಬುವನು ಮಹಾಪಾಪಿಯೂ, ದುರಾಶೆಯುಳ್ಳವನೂ ಆಗಿ ಅತ್ಯಂತ ಮೂರ್ಖನಾಗಿದ್ದ ವೇಶ್ಯೆಯನ್ನು ಭೋಗಿಸುತ್ತಾ ಇರಲು ಕಾಲಾಂತರದಲ್ಲಿ ಅವನು ಮೃತನಾಗಿ ನರಕವನ್ನು ಹೊಂದಿದನು.

ಭುಕ್ತ್ವಾ ನರಕದುಃಖಾನಿ ವಿವಿಧಾನ್ಯಮಿತಾಃ ಸಮಾಃ ।
ಪಾಪಶೇಷೇಣ ಪಾಪಾತ್ಮಾ ವಿಂಧ್ಯೇ ಜಾತಃ ಪಿಶಾಚಕಃ ॥೧೫॥

೧೫ ಹಾಗೆ ನರಕವನ್ನು ಹೊಂದಿದ ಆತನು ಬಹಳ ವರ್ಷಗಳು ನರಕದ ದುಃಖಗಳನ್ನು ಅನುಭವಿಸಿ ಇನ್ನೂ ಪಾಪವು ಉಳಿದಿದ್ದರಿಂದ ಆ ಪಾಪಿಯು ವಿಂಧ್ಯ ಪರ್ವತದಲ್ಲಿ ಪಿಶಾಚಿಯಾಗಿ ಹುಟ್ಟಿದನು.

ಇದಾನೀಂ ಸ ಪಾಶಾಚೋಽಸ್ತಿ ನಾನಾಕ್ಲೇಶಸಮನ್ವಿತಃ ।
ತತ್ರೈವ ವಾತಭುಗ್ದುಷ್ಟಸ್ಸರ್ವಕಷ್ಟವಹಸ್ಸದಾ ॥೧೬॥

೧೬ ಈಗ ಅವನು ಪಿಶಾಚಿಯಾಗಿ ನಾನಾ ವಿಧವಾದ ಕಷ್ಟಗಳಿಂದ ಕೂಡಿದವನಾಗಿದ್ದಾನೆ. ಅಲ್ಲಿಯೇ ಅವನು ಗಾಳಿಯನ್ನೇ ತನ್ನ ಆಹಾರವನ್ನಾಗಿಸಿಕೊಂಡು ಸದಾ ಎಲ್ಲಾ ಕಷ್ಟಗಳನ್ನು ಅನುಭವಿಸುತ್ತಿದ್ದಾನೆ.

॥ ಸೂತ ಉವಾಚ ॥

ಇತಿ ಗೌರ್ಯಾ ವಚಃ ಶ್ರುತ್ವಾ ಚಂಚುಲಾ ಸಾ ಶುಭವ್ರತಾ ।
ಪತಿದುಃಖೇನ ಮಹತಾ ದುಃಖಿತಾಸೀತ್ತದಾ ಕಿಲ ॥೧೭॥

ಸೂತರು ಹೇಳುತ್ತಾರೆ

೧೭ ಈ ರೀತಿಯಾಗ ಗೌರಿ ದೇವಿಯು ಹೇಳಿದ ಮಾತುಗಳನ್ನು ಕೇಳಿ ಆ ಚಂಚುಲೆಯು ಶುಭವ್ರತಳಾದ್ದರಿಂದ ಪತಿಗೂಡಗಿನ ಕಷ್ಟವನ್ನು ನೆನೆದು ಅತ್ಯಂತ ದುಃಖಿತಳಾದಳು.

ಸಮಾಧಾಯ ತತಶ್ಚಿತ್ತಂ ಸುಪ್ರಣಮ್ಯ ಮಹೇಶ್ವರೀಂ ।
ಪುನಃ ಪಪ್ರಚ್ಛ ಸಾ ನಾರೀ ಹೃದಯೇನ ವಿದೂಯತಾ ॥೧೮॥

೧೮ ಅನಂತರ ಮನಸ್ಸನ್ನು ಸಮಾಧಾನಪಡಿಸಿಕೊಂಡು ಮಹೇಶ್ವರಿಯನ್ನು ಚೆನ್ನಾಗಿ ನಮಸ್ಕರಿಸಿ, ವೇದನೆಯಿಂದ ಕೂಡಿದ ಆ ಚಂಚುಲೆಯು ಮತ್ತೆ ದೇವಿಯನ್ನು ಕುರಿತು ಈ ರೀತಿ ಕೇಳಿದಳು.

॥ಚಂಚುಲೋವಾಚ॥

ಮಹೇಶ್ವರಿ ಮಹಾದೇವಿ ಕೃಪಾಂ ಕುರು ಮಮೋಪರಿ ।
ಸಮುದ್ಧರ ಪತಿಂ ಮೇಽದ್ಯ ದುಷ್ಟಕರ್ಮಕರಂ ಖಲಂ ॥೧೯॥

ಚಂಚುಲೆಯು ಹೇಳುತ್ತಾಳೆ

೧೯ ಎಲೈ ಮಹೇಶ್ವರಿಯೇ, ಮಹಾದೇವಿಯೇ ನನ್ನ ಮೇಲೆ ಕೃಪೆದೋರು. ದುಷ್ಟಕರ್ಮಮಾಡಿದವನೂ, ಮೂರ್ಖನೂ ಆದ ನನ್ನ ಪತಿಯನ್ನು ಉದ್ಧರಿಸು.

ಕೇನೋಪಾಯೇನ ಮೇ ಭರ್ತಾ ಪಾಪಾತ್ಮಾ ಸ ಕುಬುದ್ಧಿಮಾನ್ ।
ಸದ್ಗತಿಂ ಪ್ರಾಪ್ನುಯಾದ್ದೇವಿ ತದ್ವದಾತು ನಮೋಽಸ್ತು ತೇ ॥೨೦॥

೨೦ ಎಲೈ ದೇವಿಯೇ ಪಾಪಿಯು, ದುಷ್ಟ ಬುದ್ಧಿಯುಳ್ಳವನೂ ಆದ ನನ್ನ ಪತಿಯು ಯಾವ ಉಪಾಯದಿಂದ ಸದ್ಗತಿಯನ್ನು ಹೊಂದುವನು ಅಂತಹ ಉಪಾಯವನ್ನು ನನಗೆ ನೀನು ಬೇಗನೇ ಹೇಳು. ನಿನಗ ನನ್ನ ನಮಸ್ಕಾರವಿರಲಿ.

॥ಸೂತ ಉವಾಚ॥

ಇತ್ಯಾಕರ್ಣ್ಯ ವಚಸ್ತಸ್ಯಾಃ ಪಾರ್ವತೀ, ಭಕ್ತವತ್ಸಲಾ ।
ಪ್ರತ್ಯುವಾಚ ಪ್ರಸನ್ನಾತ್ಮಾ ಚಂಚುಲಾಂ ಸ್ವಸಖೀಂ ಚ ತಾಂ ॥೨೧॥

ಸೂತರು ಹೇಳುತ್ತಾರೆ

೨೧ ಈ ರೀತಿಯಾದ ಚಂಚುಲೆಯ ಮಾತನ್ನು ಕೇಳಿ ಭಕ್ತವತ್ಸಲೆಯಾದ ಪಾರ್ವತಿಯು ಪ್ರಸನ್ನಗೊಂಡವಳಾಗಿ ತನ್ನ ಸಖಿಯಾದ ಅವಳನ್ನು ಕುರಿತು ಪ್ರತಿಯಾಗಿ ಹೀಗೆ ಉತ್ತರಿಸಿದಳು.

॥ಪಾರ್ವತ್ಯುವಾಚ॥

ಶೃಣುಯಾದ್ಯದಿ ತೇ ಭರ್ತಾ ಪುಣ್ಯಾಂ ಶಿವಕಥಾಂ ಪರಾಂ ।
ನಿಸ್ತೀರ್ಯ ದುರ್ಗತಿಂ ಸರ್ವಾಂ ಸದ್ಗತಿಂ ಪ್ರಾಪ್ನುಯಾದಿತಿ ॥೨೨॥

ಪಾರ್ವತಿಯು ಹೇಳುತ್ತಾಳೆ

೨೨ ಎಲೈ ಚಂಚುಲೆಯೇ ಕೇಳು. ನಿನ್ನ ಪತಿಯು ಶ್ರೇಷ್ಠವೂ, ಪುಣ್ಯಕರವೂ ಆದ ಶಿವಕಥೆಯನ್ನು ಒಂದು ವೇಳೆ ಕೇಳಿದ್ದೇ ಆದರೆ, ಎಲ್ಲಾ ದುರ್ಗತಿಗಳನ್ನೂ ದಾಟಿ ಸದ್ಗತಿಯನ್ನು ಹೊಂದುವನು ಎನ್ನಲು,

ಇತಿಗೌರ್ಯಾ ವಚಃ ಶ್ರುತ್ವಾಮೃತಾಕ್ಷರಮಥಾದರಾತ್ ।
ಕೃತಾಂಜಲಿರ್ನತಸ್ಕಂಧಾ ಪ್ರಣನಾಮ ಪುನಃ ಪುನಃ ॥೨೩॥

೨೩ ಈ ರೀತಿಯಾದ ಅಮೃತ ಸಮಾನವಾದ ಪಾರ್ವತಿಯ ಮಾತನ್ನು ಪ್ರೀತಿ ಭಕ್ತಿಗಳಿಂದ ಕೇಳಿ ಆ ಚಂಚುಲೆಯು ಕೃತಾಂಜಲಿಯುಳ್ಳವಳಾಗಿ ತಲೆ ಬಾಗಿ ಆ ದೇವಿಯನ್ನು ಮತ್ತೆ ಮತ್ತೆ ನಮಸ್ಕರಿಸಿದಳು.

ತತ್ಕಥಾಶ್ರವಣಂ ಭರ್ತುಸ್ಸರ್ವಪಾಪವಿರುದ್ಧಯೆ ।
ಸದ್ಗತಿಪ್ರಾಪ್ತಯೇ ಚೈವ ಪ್ರಾರ್ಥಯಾಮಾಸ ತಾಂ ತದಾ ॥೨೪॥

೨೪ ಹಾಗೆ ನಮಸ್ಕರಿಸಿ, ತನ್ನ ಗಂಡನ ಸರ್ವಪಾಪಗಳೂ ನಾಶವಾಗಿ ಸದ್ಗತಿಪ್ರಾಪ್ತಿಯಾಗಲು ಪುಣ್ಯಕರವಾದ ಶಿವಕಥಾ ಶ್ರವಣ ಮಾಡಿಸಬೇಕೆಂದು ಶ್ರೀ ಗೌರಿ ದೇವಿಯನ್ನು ಪ್ರಾರ್ಥಿಸಿದಳು.

॥ ಸೂತ ಉವಾಚ ॥

ತಯಾ ಮುಹುರ್ಮುಹುರ್ನಾರ್ಯಾ ಪ್ರಾರ್ಥ್ಯಮಾನಾ ಶಿವಪ್ರಿಯಾ ।
ಗೌರೀ ಕೃಪಾನ್ವಿತಾಸೀತ್ಸಾ ಮಹೇಶೀ ಭಕ್ತವತ್ಸಲಾ ॥೨೫॥

ಸೂತರು ಹೇಳುತ್ತಾರೆ

೨೫ ಆ ಚಂಚುಲೆಯು ಈ ರೀತಿಯಾಗಿ ಪದೇ ಪದೇ ಪಾರ್ವತಿಯನ್ನು ಪ್ರಾರ್ಥಿಸಲು ಭಕ್ತವತ್ಸಲೆಯಾದ ಪಾರ್ವತಿಯು ಅವಳ ಮೇಲೆ ಪ್ರೀತಿಯುಳ್ಳವಳಾದಳು.

ಅಥ ತುಂಬುರುಮಾಹೂಯ ಶಿವಸತ್ಕೀರ್ತಿಗಾಯಕಂ ।
ಪ್ರೀತ್ಯಾ ಗಂಧರ್ವರಾಜಂ ಹಿ ಗಿರಿಕನ್ಯೇದಮಬ್ರವೀತ್ ॥೨೬॥

೨೬ ಹಾಗೆ ಅವಳ ಮೇಲೆ ಅತ್ಯಂತ ಪ್ರೀತಿಯುಳ್ಳವಳಾದ ಪಾರ್ವತೀ ದೇವಿಯು ಶಿವಕೀರ್ತನೆಯನ್ನು ಗಾನಮಾಡುತ್ತಾ ಸಂಚರಿಸುತ್ತಿರುವ ಗಂಧರ್ವ ರಾಜನಾದ ತುಂಬುರುವನ್ನು ಕರೆದು ಈ ರೀತಿ ಹೇಳಿದಳು.

॥ ಗಿರಿಜೋವಾಚ ॥

ಹೇ ತುಂಬುರೋ ಶಿವಪ್ರೀತ ಮಮ ಮಾನಸಕಾರಕ ।
ಸಹಾನಯಾ ವಿಂಧ್ಯಶೈಲಂ ಭದ್ರಂ ತೇ ಗಚ್ಛ ಸತ್ವರಂ ॥೨೭॥

ಗಿರಿಜೆಯು ಹೇಳುತ್ತಾಳೆ

೨೭ ಎಲೈ ತುಂಬುರನೇ ನಾನು ನನ್ನ ಮಾನಸಪುತ್ರನಾಗಿರುವೆ. ನೀನು ಯಾವಾಗಲು ಶಿವನಿಗೆ ಸಂತೋಷ ಉಂಟುಮಾಡುವವನು. ನೀನು ಜಾಗ್ರತೆಯಾಗಿ ಈ ಚಂಚುಲೆಯೊಡನೆ ವಿಂಧ್ಯ ಶೈಲಕ್ಕೆ ಹೋಗು. ನಿನಗೆ ಒಳ್ಳೆಯದಾಗ

**ಅಸ್ತೇ ತತ್ರ ಮಹಾಘೋರಃ ಪಿಶಾಚೋಽತಿ ಭಯಂಕರಃ ।**
**ತದ್ವೃತ್ತಂ ಶೃಣು ಸುಪ್ರೀತ್ಯಾದಿತಸ್ಸರ್ವಂ ಬ್ರವೀಮಿ ತೇ ॥೨೮॥**

೨೮ ಆ ವಿಂಧ್ಯಾರಣ್ಯದಲ್ಲಿ ಭಯಂಕರವಾದ ಅತ್ಯಂತ ಘೋರವಾದ ಪಿಶಾಚಿ ಇರುವುದು. ಅದರ ವೃತ್ತಾಂತವನ್ನೆಲ್ಲಾ ಹೇಳುವೆನು. ಆದರದಿಂದ ಕೇಳು.

**ಪುರಾಭವೇ ಪಿಶಾಚಸ್ಸ ಬಿಂದುಗಾಹ್ವೋಽಭವದ್ದ್ವಿಜಃ ।**
**ಅಸ್ಯಾ ನಾರ್ಯಾಃ ಪತಿರ್ದುಷ್ಟೋ ಮತ್ಸಖ್ಯಾ ವೃಷಲೀಪತಿಃ ॥೨೯॥**

೨೯ ಹಿಂದೆ ಈ ಪಿಶಾಚಿಯು ಬಿಂದುಗನೆಂಬ ಬ್ರಾಹ್ಮಣನಾಗಿದ್ದನು. ಈ ನನ್ನ ಸಖಿಯಾದ ಚಂಚುಲೆಯ ಗಂಡನೇ ಪಿಶಾಚಿಯಾಗಿರುವನು. ಅವನು ದುಷ್ಟನೂ, ವೇಶ್ಯಾಪತಿಯೂ ಆಗಿದ್ದನು.

**ಸ್ನಾನಸಂಧ್ಯಾಕ್ರಿಯಾಹೀನೋಽಶೌಚಃ ಕ್ರೋಧವಿಮೂಢಧೀಃ ।**
**ಭರ್ತ್ಸಕೋ ಸಜ್ಜನದ್ವೇಷೀ ದುಷ್ಪರಿಗ್ರಹಕಾರಕಃ ॥೩೦॥**

೩೦ ಅವನು ಸ್ನಾನ ಸಂಧ್ಯೆಗಳನ್ನು ಆಚರಿಸದೇ ಕೊಳಕನೂ, ಕೋಪಿಷ್ಟನೂ ಆಗಿ ಬುದ್ಧಿಹೀನನಾಗಿದ್ದನು. ಹಾಗೆ ಸಜ್ಜನರ ದ್ವೇಷಿಯೂ ಆಗಿ ಪರರನ್ನು ನಿಂದಿಸುತ್ತಿದ್ದನು. ಕೆಟ್ಟದ್ದನ್ನು ಸ್ವೀಕರಿಸುತ್ತಿದ್ದನು.

**ಹಿಂಸಕಃ ಶಸ್ತ್ರಧಾರೀ ಚ ಸವ್ಯಹಸ್ತೇನ ಭೋಜನಿ ।**
**ದೀನಾನಾಂ ಪೀಡಕಃ ಕ್ರೂರಃ ಪರವೇಶ್ಮಪ್ರದೀಪಕಃ ॥೩೧॥**

೩೧ ಆಯುಧ ಧಾರಿಯಾಗಿದ್ದುಕೊಂಡು ಎಲ್ಲರನ್ನೂ ಹಿಂಸಿಸುತ್ತಿದ್ದನು. ಹಾಗೆಯೇ ಎಡಗೈಯಲ್ಲಿ ಊಟಮಾಡುತ್ತಿದ್ದನು. ದೀನರಿಗೆ ಪೀಡೆ ಕೊಡುತ್ತಾ ಕ್ರೂರಿಯಾಗಿ ಬೇರೆಯವರ ಮನೆಗಳಲ್ಲೇ ಇರುತ್ತಿದ್ದನು.

**ಚಂಡಾಲಾಭಿರತೋ ನಿತ್ಯಂ ವೇಶ್ಯಾಭೋಗೀ ಮಹಾಬಲಃ ।**
**ಸ್ವಪತ್ನೀತ್ಯಾಗಕೃತ್ಪಾಪೀ ದುಷ್ಟಸಂಗರತಸ್ತದಾ ॥೩೨॥**

೩೨ ಅವನು ಯಾವಾಗಲೂ ಚಂಡಾಲರ ಜತೆ ಇರುತ್ತಾ ವೇಶ್ಯೆಯನ್ನು ಭೋಗಿಸುತ್ತಾ ಅತ್ಯಂತ ದುಷ್ಟನಾಗಿದ್ದನು. ತನ್ನ ಕೈಹಿಡಿದ ಹೆಂಡತಿಯನ್ನು ಬಿಟ್ಟು ಆ ಪಾಪಿಯು ದುಷ್ಟ ಜನರ ಜತೆ ಇರುತ್ತಿದ್ದನು.

ತೇನ ವೇಶ್ಯಾಕುಸಂಗೇನ ಸುಕೃತಂ ನಾಶಿತಂ ಮಹತ್ ।
ಚಿತ್ತಲೋಭೇನ ಮಹಿಷೀ ನಿರ್ಭಯಾ ಜಾರಿಣೀ ಕೃತಾ ॥೩೩॥

೩೩ ಅವನು ವೇಶ್ಯಾಸಂಗ ಮಾಡಿ ತನ್ನ ಪುಣ್ಯವನ್ನೆಲ್ಲಾ ನಾಶಪಡಿಸಿಕೊಂಡನು. ಮನಸ್ಸನ್ನು ನಿಗ್ರಹಿಸಲಾರದೇ ಅವನ ಹೆಂಡತಿಯೂ ಗಂಡನ ದಾರಿ ಹಿಡಿದು ಅವಳೂ ನಿರ್ಭಯಳಾಗಿ ಪರ ಪುರುಷರನ್ನು ಕಾಮಿಸುತ್ತಿದ್ದಳು.

ಅಮೃತ್ಯೋಽಸ್ಸ ದುರಾಚಾರೀ ಕಾಲೇನ ನಿಧನಂ ಗತಃ ।
ಯಯೌ ಯಮಪುರಂ ಘೋರಂ ಭೋಗಸ್ಥಾನಂ ಹಿ ಪಾಪಿನಾಂ ॥೩೪॥

೩೪ ಹೀಗೆ ಆತನು ಮರಣ ಕಾಲದವರೆಗೆ ಇದೇ ರೀತಿ ಜೀವಿಸಿ ಮರಣ ಹೊಂದಿದನು. ನಂತರ ಪಾಪಿಗಳು ಶಿಕ್ಷೆ ಅನುಭವಿಸುವ ಘೋರವಾದ ಯಮನ ಪಟ್ಟಣವನ್ನು ಹೊಂದಿದನು.

ತತ್ರ ಭುಕ್ತ್ವಾ ಸ ಗುಷ್ಟಾತ್ಮಾ ನರಕಾನಿ ಬಹೂನಿ ಚ ।
ಇದಾನೀಂ ಸ ಪಿಶಾಚೋಽಸ್ತಿ ವಿಂಧ್ಯೇಽದ್ರೌ ಪಾಪಭುಕ್ ಖಲಂ : ॥೩೫॥

೩೫ ಅಲ್ಲಿ ಅವನು ಪಾಪಿಯಾದುದರಿಂದ ಅನೇಕ ಶಿಕ್ಷೆಗಳನ್ನು ಅನುಭವಿಸಿ ಈಗ ಆ ದುಷ್ಟನು ಇನ್ನೂ ಉಳಿದ ಪಾಪವನ್ನು ಅನುಭವಿಸುವುದಕ್ಕೋಸ್ಕರ ವಿಂಧ್ಯ ಪರ್ವತ ಪ್ರದೇಶದಲ್ಲಿ ಪಿಶಾಚಿಯಾಗಿ ತಿರುಗುತ್ತಿರುವನು.

ತಸ್ಯಾಗ್ರೇ ಪರಮಾಂ ಪುಣ್ಯಾಂ ಸರ್ವಪಾಪವಿನಾಶಿನೀಂ ।
ದಿವ್ಯಾಂ ಶಿವಪುರಾಣಸ್ಯ ಕಥಾಂ ಕಥಯಾ ಯತ್ನತಃ ॥೩೬॥

೩೬ ಅವನ ಮುಂಭಾಗದಲ್ಲಿ ಸರ್ವಪಾಪಗಳನ್ನೂ ನಾಶಮಾಡುವ ಅತ್ಯಂತ ಪುಣ್ಯಕರವಾದ, ದಿವ್ಯವಾದ ಶಿವಪುರಾಣದ ಕಥೆಯನ್ನು ಪ್ರಯತ್ನಪಟ್ಟು ಹೇಳು.

ದ್ರುತಂ ಶಿವಪುರಾಣಸ್ಯ ಕಥಾಶ್ರವಣತಃ ಪರಾತ್ ।
ಸರ್ವಪಾಪವಿಶುದ್ಧಾತ್ಮಾ ಹಾಸ್ಯತಿ ಪ್ರೇತತಾಂ ಚ ಸಃ ॥೩೭॥

೩೭ ಬೇಗನೇ ಪವಿತ್ರವಾದ ಶಿವಪುರಾಣವನ್ನು ಶ್ರವಣಮಾಡಿಸುವಿಕೆಯಿಂದ ಸರ್ವಪಾಪಗಳಿಂದ ಅವನು ಮುಕ್ತನಾಗಿ ಪ್ರೇತಜನ್ಮವನ್ನು ಬಿಟ್ಟು ಶುದ್ಧನಾಗುವನು.

ಮುಕ್ತಂ ಚ ದುರ್ಗತೇಸ್ತ್ವಂ ವೈ ಬಿಂದುಗಂ ತ್ವಂ ಪಿಶಾಚಕಂ ।
ಮದಾಜ್ಞಯಾ ವಿಮಾನೇನ ಸಮಾನಯ ಶಿವಾಂತಿಕಂ ॥೩೮॥

೩೮ ಹಾಗೆ ಪಾಪ ವಿಮುಕ್ತನಾದ ಆ ಬಿಂದುಗನನ್ನು ನೀನು ವಿಮಾನದಲ್ಲಿ ಕುಳ್ಳಿರಿಸಿಕೊಂಡು ನನ್ನ ಆಜ್ಞೆಯ ಮೇರೆಗೆ ಶಿವನ ಸಮೀಪಕ್ಕೆ ಕರೆದುಕೊಂಡು ಬಾ ಎಂದು ಹೇಳಿದಳು.

॥ ಸೂತ ಉವಾಚ ॥

ಇತ್ಯಾದಿಷ್ಟೋ ಮಹೇಶಾನ್ಯಾ ಗಂಧರ್ವೇಂದ್ರಶ್ಚ ತುಂಬುರುಃ ।
ಮುಮುದೇತೀವ ಮನಸಿ ಭಾಗ್ಯಂ ನಿಜಮವರ್ಣಯತ್ ॥೩೯॥

ಸೂತರು ಹೇಳುತ್ತಾರೆ

೩೯ ಈ ರೀತಿಯಾಗಿ ಮಹಾದೇವಿಯಿಂದ ಆಜ್ಞಾಪಿಸಲ್ಪಟ್ಟ ಗಂಧರ್ವ ಶ್ರೇಷ್ಠನಾದ ತುಂಬುರುವು ತನ್ನ ಸೌಭಾಗ್ಯವನ್ನು ನೆನೆದು ಮನಸ್ಸಿನಲ್ಲಿ ಅತ್ಯಂತ ಸಂತೋಷಗೊಂಡನು. ಶಿವಪುರಾಣವನ್ನು ಶ್ರವಣಮಾಡಿಸುವ ಕಾರ್ಯ ದೊರಕಿದುದಕ್ಕಾಗಿ ಸಂತೋಷಗೊಂಡನು.

ಆರುಹ್ಯ ಸುವಿಮಾನಂ ಸ ಸತ್ಯಾ ತತ್ಪ್ರಿಯಯಾ ಸಹ ।
ಯಯೌ ವಿಂಧ್ಯಾಚಲೇ ಶೀಘ್ರಂ ಯತ್ರಾಸ್ತೇ ನಾರದಪ್ರಿಯಃ ॥೪೦॥

೪೦ ಅನಂತರ ತುಂಬುರುವು ಬಿಂದುಗನ ಹೆಂಡತಿಯಾದ ಚಂಚುಲೆಯೊಡನೆ ಒಳ್ಳೆಯ ವಿಮಾನವನ್ನೇರಿ ಬೇಗನೇ ಆ ಪಿಶಾಚವಿದ್ದ ವಿಂಧ್ಯ ಪರ್ವತಕ್ಕೆ ಹೋದನು.

ತತ್ರಾಪಶ್ಯತ್ಪಿಶಾಚಂ ತಂ ಮಹಾಕಾಯಂ ಮಹಾಹನುಂ ।
ಪ್ರಹಸಂತಂ ರುದಂತಂ ಚ ವಲ್ಗಂತಂ ವಿಕಟಾಕೃತಿಂ ॥೪೧॥

೪೧ ಅಲ್ಲಿ ತುಂಬುರನು ದೊಡ್ಡದಾದ ದೇಹವುಳ್ಳ, ದೊಡ್ಡದಾದ ದವಡೆಯುಳ್ಳ ಮತ್ತು ಕೆಲವು ಬಾರಿ ನಗುತ್ತಾ, ಕೆಲವು ಬಾರಿ ಅಳುತ್ತಾ, ಅತ್ತಿತ್ತ ಓಡಾಡುತ್ತಿದ್ದ ಪಿಶಾಚಿಯನ್ನು ನೋಡಿದನು.

ಬಲಾದ್ಬಗ್ರಾಹ ತಂ ಪಾಶೈಃ ಪಿಶಾಚಂ ಜಾತಿಭೀಕರಂ ।
ತುಂಬುರುಶ್ಚೈವಸತ್ಕೀರ್ತಿಗಾಯಕಶ್ಚ ಮಹಾಬಲೀ ॥೪೨॥

೪೨ ಅನಂತರ ತುಂಬುರುವು ಆ ಪಿಶಾಚಿಯನ್ನು ಹಗ್ಗಗಳಿಂದ ಬಿಗಿದು, ಶಿವನ ಕಥೆಯನ್ನು ಹಾಡಲುದ್ಯುಕ್ತನಾದನು.

**ಅಥೋ ಶಿವಪುರಾಣಸ್ಯ ವಾಚನಾರ್ಥಂ ಸ ತುಂಬುರುಃ ।**
**ನಿಶ್ಚಿತ್ಯ ರಚನಾಂ ಚಕ್ರೇ ಮಹೋತ್ಸವಸಮನ್ವಿತಂ ॥೪೩॥**

೪೩ ತುಂಬುರನು ಈ ರೀತಿಯಾಗಿ ಶಿವಕಥೆಯನ್ನು ಹೇಳಲು ಮೊದಲು ಆ ಪಿಶಾಚಿಯನ್ನು ಅನೇಕವಾದ ರೀತಿಯಲ್ಲಿ ಉತ್ಸಾಹ ಬರುವಂತೆ ಮಾಡಿದನು. ಅಂದರೆ ಆದಕ್ಕೆ ಬೇಕಾದ ಉತ್ಸವವನ್ನು ಮಾಡಿದನು. ಸಂತೋಷಗೊಳಿಸಿದನು.

**ಪಿಶಾಚಂ ತಾರಿತುಂ ದೇವ್ಯಾಃ ತಾಸನಾತ್ತುಂಬುದುರ್ಗತಃ।**
**ವಿಂಧ್ಯ ಶಿವಪುರಾಣಂ ಸ ಹ್ಯದ್ರಿಂ ತ್ರಾವಯಿತುಂ ಪರಂ ॥೪೪॥**

೪೪ ದೇವಿಯ ಅಪ್ಪಣೆಯಂತೆ ತುಂಬುರುವು ಶಿವಕಥಾಶ್ರವಣ ಮಾಡಿಸಿ ಪಿಶಾಚಿಯನ್ನು ಉದ್ಧರಿಸಲು ವಿಂಧ್ಯ ಪರ್ವತಕ್ಕೆ ಬಂದಿರುವನು ಅಲ್ಲಿ ಶಿವಕಥಾಶ್ರವಣವಾಗುವುದು.

**ಇತಿ ಕೋಲಾಹಲೋ ಜಾತಃ ಸರ್ವಲೋಕೇಷು ವೈ ಮಹಾರ್ ।**
**ತತ್ರ ತಚ್ಛ್ರವಣಾರ್ಥಾಯ ಯಯುರ್ದೇವರ್ಷಯೋ ದ್ರುತಂ ॥೪೫॥**

೪೫ ಈ ರೀತಿಯಾಗಿ ಎಲ್ಲಾ ಕಡೆಯಲ್ಲೂ ಕೋಲಾಹಲವೆದ್ದಿತು. ಆದರಿಂದಾಗಿ ತುಂಬುರನ ಬಾಯಿಂದ ಶಿವಕಥೆಯನ್ನು ಕೇಳುವುದಕ್ಕಾಗಿ ದೇವತೆಗಳೂ, ಋಷಿಗಳೂ ಎಲ್ಲರೂ ಸಹ ಒಟ್ಟಾಗಿ ಅಲ್ಲಿಗೆ ಬಂದು ಸೇರಿದರು.

**ಸಮಾಜಸ್ತತ್ರ ಪರಮೋऽದ್ಭುತಶ್ಚಾಸೀಚ್ಛುಭಾವಹಃ।**
**ತೇಷಾಂ ಶಿವಪುರಾಣಸ್ಯಾಗತಾನಾಂ ಶ್ರೋತುಮಾದರಾತ್ ॥೪೬॥**

೪೬ ಹೀಗೆ ಅಲ್ಲಿ ಶಿವಕಥೆಯನ್ನು ಕೇಳಲು ದೊಡ್ಡ ಗುಂಪೇ ಸೇರಿತು. ಅವರೆಲ್ಲರೂ ಮಂಗಳಕರವಾದ ಶಿವಕಥೆಯನ್ನು ತುಂಬುರುವಿನ ಬಾಯಿಂದ ಕೇಳಲು ಸೇರಿದ್ದರು.

**ಪಿಶಾಚಮಥ ತಂ ಪಾಶೈರ್ಬಧ್ವಾ ಸಮುಪವೇಶ್ಯ ಚ ।**
**ತುಂಬುರುರ್ವಲ್ಲಕೀಹಸ್ತೋ ಜಗೌ ಗೌರೀಪತೇಃ ॥೪೭॥**

೪೭ ಅನಂತರದಲ್ಲಿ ತುಂಬುರುವು ಆ ಪಿಶಾಚಿಯನ್ನು ಹಗ್ಗದಿಂದ ಕಟ್ಟಿ ತನ್ನ ಮುಂದೆ ಕುಳ್ಳಿರಿಸಿಕೊಂಡು ವೀಣೆಯನ್ನು ನುಡಿಸುತ್ತಾ ಶಿವಪುರಾಣ ಕಥೆಯನ್ನು ಹೇಳಲಾರಂಭಿಸಿದನು.

ಆರಭ್ಯ ಸಂಹಿತಾಮಾದ್ಯಾಂ ಸಪ್ತಮೀಸಂಹಿತಾವಧಿ ।
ಸ್ಪಷ್ಟಂ ಶಿವಪುರಾಣಂ ಹಿ ಸಮಾಹಾತ್ಮ್ಯಂ ಸಮಾವದತ್ ॥೪೮॥

೪೮ ಹೀಗೆ ಆರಂಭಿಸಿ ಮೊದಲನೆಯ ಸಂಹಿತೆಯಿಂದ ಆರಂಭಿಸಿ ಏಳನೇ ಸಂಹಿತೆಯವರೆವಿಗೆ ಸ್ಪಷ್ಟವಾಗಿ ಅರ್ಥವಾಗುವಂತೆ ಮಹಾತ್ಮೆಯಿಂದ ಕೂಡಿದ ಶಿವಕಥೆಯ ಪುರಾಣವನ್ನು ಚೆನ್ನಾಗಿ ಹಾಡಿ ಹೇಳಿದನು.

ಶ್ರುತ್ವಾ ಶಿವಪುರಾಣಂ ತಂ ಸಪ್ತಸಂಹಿತಮಾದರಾತ್ ।
ಬಭೂವುಃ ಸುಕೃತಾರ್ಥಾಸ್ತೇ ಸರ್ವೇ ಶ್ರೋತಾರ ಏವ ಹಿ ॥೪೯॥

೪೯ ಈ ರೀತಿಯಿಂದ ಏಳು ಸಂಹಿತೆಯವರೆವಿಗಿನ ಶಿವಪುರಾಣವನ್ನು ಪ್ರೀತಿಯಿಂದ ಕೇಳಿದ ಎಲ್ಲಾ ಋಷಿಗಳೇ ಮುಂತಾದವರು ಕೃತಾರ್ಥರಾದರು.

ಸ ಪಿಶಾಚೋ ಮಹಾಪುಣ್ಯಂ ಶ್ರುತ್ವಾ ಶಿವಪುರಾಣಕಂ ।
ವಿಧೂಯ ಕಲುಷಂ ಸರ್ವಂ ಜಹೌ ಪೈಶಾಚಿಕಂ ವಪುಃ ॥೫೦॥

೫೦ ಆ ಪಿಶಾಚರೂಪಿಯಾಗಿದ್ದ ಬಿಂದುಗನೂ ಸಹ ಮಹಾಪುಣ್ಯಕರವಾದ ಶಿವಪುರಾಣವನ್ನು ಕೇಳಿ ಎಲ್ಲಾ ಪಾಪಗಳೂ ನಾಶವಾಗಲು ಪಿಶಾಚರೂಪವನ್ನು ತೊರೆದು ಶುದ್ಧನಾದನು.

ದಿವ್ಯರೂಪೋ ಬಭೂವಾಶು ಗೌರವರ್ಣಃ ಸಿತಾಂಶುಕಃ ।
ಸರ್ವಾಲಂಕಾರದೀಪ್ತಾಂಗಸ್ತ್ರಿನೇತ್ರಶ್ಚಂದ್ರಶೇಖರಃ ॥೫೧॥

೫೧ ನಂತರ ಆ ಬಿಂದುಗನು ದೇವತೆಗಳಿಗೊಪ್ಪುವ ರೂಪವನ್ನು ಧರಿಸಿದನು. ಬಿಳುಪಾದ ದೇಹವುಳ್ಳವನೂ, ಬಿಳಿಯ ವಸ್ತ್ರ ಧರಿಸಿದವನೂ ಆಗಿ ಎಲ್ಲಾ ಅಲಂಕಾರಗಳಿಂದ ಕೂಡಿ ಹೊಳೆಯುವ ದೇಹವುಳ್ಳವನಾದನು. ಅಂತೆಯೇ ಶಿವನಂತೆ ಮೂರು ಕಣ್ಣುಳ್ಳವನೂ, ತಲೆಯಲ್ಲಿ ಚಂದ್ರನನ್ನು ಧರಿಸಿದನು.

ದಿವ್ಯಂ ದಿವ್ಯವಪುರ್ಭೂತ್ವಾ ತಯಾ ಸ ನಿಜಕಾಂತಯಾ ।
ಜಗೌ ಸ್ವಯಮಪಿ ಶ್ರೀಮಾಂಶ್ಚರಿತಂ ಪಾರ್ವತೀಪತೇಃ ॥೫೨॥

೫೨ ಇಂತು ದಿವ್ಯರೂಪಿಯಾದ ಆ ಬಿಂದುಗನು ತನ್ನ ಪತ್ನಿಯಿಂದೊಡಗೂಡಿ ತಾನೇ ಸ್ವತಃ ಪಾರ್ವತೀ ಪತಿಯಾದ ಪರಮೇಶ್ವರನ ಚರಿತ್ರೆಯನ್ನು ಹಾಡಿದನು.

ತದ್ವಭೂಮಿತಿ ಸಂದೃಷ್ಟ್ವಾ ಸರ್ವೇ ದೇವರ್ಷಯಶ್ಚ ತೇ ।
ಬಭೂವುರ್ವಿಸ್ಮಿತಾಶ್ಚಿತ್ತೇ ಪರಮಾನಂದಸಂಯುತಾಃ ॥೫೩॥

೫೩ ಈ ಬಿಂದುಗನು ಹೆಂಡತಿಯೇ ಚಂಚುಲೆ ಎಂಬುದಾಗಿ ತಿಳಿದು ಅಲ್ಲಿದ್ದ ದೇವತೆಗಳೂ, ಋಷಿಗಳೂ ಸಹ ನೋಡಿ ಆಶ್ಚರ್ಯವುಳ್ಳವರಾಗಿ ಆನಂದಿಸಿದರು.

ಸುಕೃತಾರ್ಥಾ ಮಹೇಶಸ್ಯ ಶ್ರುತ್ವಾ ಚರಿತಮದ್ಭುತಂ ।
ಸ್ವಂ ಸ್ವಂ ಧಾಮ ಯಯುಃ ಪ್ರೀತ್ಯಾ ಶಂಸಂತಃ ಶಾಂಕರಂ ಯಶಃ ॥ ೫೪॥

೫೪ ಈ ರೀತಿಯಾಗಿ ನಡೆದ ಶಿವಕಥೆಯನ್ನು ಕೇಳಿ ಅಲ್ಲಿದ್ದವರೆಲ್ಲರೂ ಪ್ರೀತಿಯಿಂದ ಶಿವನನ್ನು ಕೊಂಡಾಡಿ ಹೊಗಳುತ್ತಾ ಅವನ ಕೀರ್ತಿಯನ್ನು ಪ್ರಶಂಸಿಸುತ್ತಾ ತಮ್ಮ ತಮ್ಮ ಮನೆಗಳಿಗೆ ಹಿಂದಿರುಗಿದರು.

ಬಿಂದುಗಸ್ಸೋಽಪಿ ದಿವ್ಯಾತ್ಮಾ ಸುವಿಮಾನಸ್ಥಿತಸ್ಸುಖಿ ।
ಸ್ವಕಾಂತಾಪಾರ್ಶ್ವಗಃ ಶ್ರೀಮಾನ್ ಶುಶುಭೇಽತೀವ ಋಷ್ಠಿತಃ ॥೫೫॥

೫೫ ಬಿಂದುಗನೂ ಕೂಡಿ ದಿವ್ಯ ದೇಹವುಳ್ಳವನಾಗಿ ತನ್ನ ಪತ್ನಿಯನ್ನು ಪಕ್ಕದಲ್ಲಿ ಕುಳ್ಳಿರಿಸಿಕೊಂಡು ವಿಮಾನದಲ್ಲಿ ಈ ರೀತಿ ಇದ್ದು ಆನಂದಿಸಿದನು.

ಅಥ ಗಾಯನ್ಮಹೇಶಸ್ಯ ಸುಗುಣಾನ್ಸುಮನೋಹರಾನ್ ।
ಸ ತುಂಬುರುರ್ಜಗಾಮಾತು ಸಕಾಂತಶ್ಶಂಕರಂ ಪದಂ ॥೫೬॥

೫೬ ಅವರೊಡನೆ ತುಂಬುರುವು ಮನೋಹರವಾದ ಶಿವನ ಗುಣಾತಿಶಯಗಳನ್ನು ಗಾನ ಮಾಡುತ್ತಾ ಬೇಗನೆ ಶಿವನ ಸಮೀಪಕ್ಕೆ ಹೋದನು.

ಸುಸತ್ಕೃತೋ ಮಹೇಶೇನ ಪಾರ್ವತ್ಯಾ ಚ ಸಬಿಂದುಗಃ ।
ಸ್ವಗಣಶ್ಚ ಕೃತಃ ಪ್ರೀತ್ಯಾ ಸಾಽಭವದ್ಗಿರಿಜಾಸಖೀ ॥೫೭॥

೫೭ ಅಲ್ಲಿ ಬಿಂದುಗನನ್ನೂ ಚಂಚುಲೆಯನ್ನು ಪಾರ್ವತಿಯಿಂದೊಡಗೂಡಿದ ಪರಮೇಶ್ವರನು ಬಹಳ ಒಳ್ಳೆಯ ರೀತಿ ಅನುಗ್ರಹಿಸಿದನು. ದೇವಗಣಗಳೂ ಅನುಗ್ರಹೀತರಾದರು. ಆ ಚಂಚುಲೆಯು ಪಾರ್ವತಿಯ ಸಖಿಯಾದಳು.

**ತಸ್ಮಿನ್ ಲೋಕೇ ಪರಾನಂದೇ ಘನಜ್ಯೋತಿಷಿ ಶಾಶ್ವತೇ ।**
**ಲಬ್ಧ್ವಾ ನಿವಾಸಮಚಲಂ ಪ್ರಭಾತೇ ಪರಮಂ ಸುಖಂ ॥೫೮॥**

೫೮ ಆ ಲೋಕದಲ್ಲಿ ಅತ್ಯಂತ ಉತ್ಕೃಷ್ಟವಾದ ಆನಂದವೂ ಇದ್ದು, ಶಾಶ್ವತವಾದ ಉತ್ಕೃಷ್ಟವಾದ ಆ ಕೈಲಾಸದಲ್ಲಿ ಶಾಶ್ವತವಾದ ಶ್ರೇಷ್ಟವಾದ ಸುಖವನ್ನನುಭವಿಸಿ ಆ ಬಿಂದುಗನು ಪರಮ ಸುಖವನ್ನು ಹೊಂದಿದನು.

**ಇತ್ಯೇತ್ಕಥಿತಂ ಪುಣ್ಯಮಿತಿಹಾಸಮಘಾಪಹಂ ।**
**ಶಿವಾಶಿವಪರಾನಂದಂ ನಿರ್ಮಲಂ ಭಕ್ತಿವರ್ಧನಂ ॥೫೯॥**

೫೯ ಆದರಿಂದ ಈ ಪುರಾಣ ಕಥೆಯನ್ನು ಹೇಳಿದೆನು. ಈ ಇತಿಹಾಸವು ಈಶ್ವರ, ಪಾರ್ವತಿಯರಿಗೆ ಆನಂದವನ್ನುಂಟುಮಾಡುವುದು. ಇದನ್ನು ಕೇಳಿದವರಿಗೆ ಅಜ್ಞಾನ ನಾಶವಾಗಿ ಶಿವನಲ್ಲಿ ಭಕ್ತಿಯು ಹೆಚ್ಚಾಗುವುದು.

**ಯ ಇದಂ ಶೃಣುಯಾದ್ಭಕ್ತ್ಯಾ ಕೀರ್ತಯೇದ್ವಾಸಮಾಹಿತಃ ।**
**ಸ ಭುಕ್ತ್ವಾ ವಿಪುಲಾನ್ಭೋಗಾನಂತೇ ಮುಕ್ತಿಮವಾಪ್ನು ಯಾತ್ ॥೬೦॥**

೬೦ ಈ ರೀತಿಯಾದ ಈ ಪುರಾಣವನ್ನು ಸ್ವಸ್ಥಚಿತ್ತನಾಗಿ ಯಾವನು ಭಕ್ತಿಯಿಂದ ಕೇಳುವನೋ, ಪ್ರೀತಿಯಿಂದ ಕೀರ್ತನೆ ಮಾಡುವನೋ ಅವನು ಈ ಲೋಕದಲ್ಲಿ ಅನೇಕವಾದ ಭೋಗ ಭಾಗ್ಯಗಳನ್ನನುಭವಿಸಿ ಕೊನೆಗೆ ಶಿವಸಾಯುಜ್ಯವೆಂಬ ಮುಕ್ತಿಯನ್ನು ಪಡೆಯುವನು.

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಶಿವಪುರಾಣಮಾಹಾತ್ಮ್ಯೇ
ಬಿಂದುಗಸದ್ಗತಿವರ್ಣನಂ ನಾಮ ಪಂಚಮೋಽಧ್ಯಾಯಃ

ಇಲ್ಲಿಗೆ ಶ್ರೀ ಸ್ಕಾಂದ ಪುರಾಣದಲ್ಲಿ ಶಿವಪುರಾಣ ಮಹಾತ್ಮ್ಯೆಯಲ್ಲಿ ಬಿಂದುಗನ ಸದ್ಗತಿ ವರ್ಣನೆ ಎಂಬ ಐದನೇ ಅಧ್ಯಾಯವು ಮುಗಿದುದು.

|| ಶ್ರೀಃ ||

|| ಅಥ ಶ್ರೀ ಶಿವಪುರಾಣ ಮಾಹಾತ್ಮ್ಯೇ ||

# ಷಷ್ಠೋಽಧ್ಯಾಯಃ

|| ಶೌನಕ ಉವಾಚ ||

ಸೂತ ಸೂತ ಮಹಾಪ್ರಾಜ್ಞವ್ಯಾಸಶಿಷ್ಯ ನಮೋಽಸ್ತು ತೇ ।
ಧನ್ಯಸ್ತ್ವಂ ಶೈವವರ್ಯೋಽಸಿ ವರ್ಣನೀಯಮಹದ್ಗುಣಃ ||೧||

ಶೌನಕರು ಹೇಳುತ್ತಾರೆ

೧ ಎಲೈ ಸೂತ ಮಹರ್ಷಿಯೇ ನೀನು ಅತ್ಯಂತ ಬುದ್ಧಿಶಾಲಿಯು ವ್ಯಾಸ ಶಿಷ್ಯನಾದ ನಿನಗೆ ನಮಸ್ಕಾರವು. ನೀನೇ ಧನ್ಯನು. ಶಿವಭಕ್ತಾಗ್ರಣಿಯು ಶ್ರೇಷ್ಠವಾದ ಗುಣಗಳಿಂದಲೂ ಕೂಡಿ ಹೊಗಳಲು ಯೋಗ್ಯನಾಗಿದ್ದೀಯೆ.

ಶ್ರೀಮಚ್ಛಿವಪುರಾಣಸ್ಯ ಶ್ರವಣಸ್ಯ ವಿಧಿಂ ವದ ।
ಯೇನ ಸರ್ವಂ ಲಭೇಚ್ಛ್ರೋತಾ ಸಂಪೂರ್ಣಂ ಫಲಮುತ್ತಮಂ ||೨||

೨ ಶ್ರೀ ಶಿವಪುರಾಣದ ಶ್ರವಣಕ್ರಮವನ್ನು ನನಗೆ ಹೇಳು. ಯಾವ ಶಿವಪುರಾಣದ ಶ್ರವಣದಿಂದ ಶ್ರೇಷ್ಠ ವು ಸಂಪೂರ್ಣವಾದ, ಉತ್ತಮವಾದ, ಫಲವನ್ನು ಹೊಂದುವರೋ ಅಂತಹ ಕ್ರಮವನ್ನು ನಮಗೆ ಹೇಳು ಎಂದು ಹೇಳಿದರು.

|| ಸೂತ ಉವಾಚ ||

ಅಥ ತೇ ಸಂಪ್ರವಕ್ಷ್ಯಾಮಿ ಸಂಪೂರ್ಣಫಲಹೇತವೇ ।
ವಿಧಿಂ ಶಿವಪುರಾಣಸ್ಯ ಶೌನಕ ಶ್ರವಣೇ ಮುನೇ ||೩||

ಸೂತರು ಹೀಗೆ ಉತ್ತರಿಸುತ್ತಾರೆ

೩ ಎಲೈ ಶೌನಕ ಮುನಿಯೇ, ಸಂಪೂರ್ಣ ಫಲವನ್ನು ಪಡೆಯಲು ಕಾರಣವಾಗುಳ್ಳ ಶಿವಪುರಾಣ ಶ್ರವಣಕ್ರಮವನ್ನು ಹೇಳುತ್ತಾನೆ, ಕೇಳು.

ದೈವಜ್ಞಂ ಚ ಸಮಾಹೂಯ ಸಂತೋಷ್ಯ ಚ ಜನಾನ್ವಿತಃ ।
ಮುಹೂರ್ತಂ ಶೋಧಯೇಚ್ಛುದ್ಧಂ ನಿರ್ವಿಘ್ನೇನ ಸಮಾಪ್ತಯೇ ||೪||

೪ ಮೊದಲಿಗೆ ಈ ಶಿವಪುರಾಣ ಶ್ರವಣ ಮಾಡಬೇಕೆಂಬ ಇಚ್ಛೆಯುಳ್ಳವನು ಜ್ಯೋತಿಷ್ಕರನ್ನು ಗೌರವದಿಂದ ಕರೆದು ಅವರನ್ನು ಗೌರವಿಸಿ ಇಷ್ಟ ಜನರೊಂದಿಗೆ ಹೀಗೆ ಕೇಳಬೇಕು. ಸ್ವಾಮಿ ನಿರ್ವಿಘ್ನವಾಗಿ ಶಿವಪುರಾಣ ಶ್ರವಣವಾಗುವಂತಹ ಶುಭ ಮೂಹೂರ್ತವನ್ನು ತಿಳಿಸಿ ಎಂದು.

ವಾರ್ತಾ ಪ್ರೇಷ್ಯಾ ಪ್ರಯತ್ನೇನ ದೇಶೇ ದೇಶೇ ಚ ಸಾ ಶುಭಾ ।
ಭವಿಷ್ಯತಿ ಕಥಾ ಶೈವೀ ಆಗಂತವ್ಯಂ ಶುಭಾರ್ಥಿಭಿಃ ॥೫॥

೫ ನಂತರ ಶಿವಪುರಾಣ ಕಥಾ ಶ್ರವಣವು ನಡೆಯಲಿದೆ ಎಂದು ಊರು, ಊರುಗಳಲ್ಲಿಯೂ ತಿಳಿಯಪಡಿಸಿ ಬರುವವರೆಲ್ಲರೂ ಬರಬಹುದು ಎಂದು ತಿಳಿಸಬೇಕು.

ದೂರೇ ಹರಿಕಥಾಃ ಕೇಚಿದ್ದೂರೇ ಶಂಕರಕೀರ್ತನಾಃ ।
ಸ್ತ್ರಿಯಃ ಶೂದ್ರಾದಯೋ ಯೇ ಚ ಬೋಧಸ್ತೇಷಾಂ ಭವೇದ್ಯತಃ ॥೬॥

೬ ದೂರದ ಗ್ರಾಮಗಳಲ್ಲಿರುವ ಯಾರಿಗೆ ಹರಿಕಥೆಯಲ್ಲಿ ಆಸಕ್ತಿ ಇರುವುದೋ ಮತ್ತು ಯಾರು ಶಂಕರನಾಮಕೀರ್ತನಾಸಕ್ತರೋ ಅಂತಹ ಸ್ತ್ರೀಯರೂ, ಶೂದ್ರರೂ ಇವರೇ ಮೊದಲಾದವರೆಲ್ಲರಿಗೂ ತಿಳಿಸಿ ಈ ವಿಚಾರವಾಗಿ ತಿಳುವಳಿಕೆ ನೀಡಬೇಕು.

ದೇಶೇ ದೇಶೇ ಶಾಂಭವಾ ಯೇ ಕೀರ್ತನಶ್ರವಣೋತ್ಸುಕಾಃ ।
ತೇಷಾಮಾನಯನಂ ಕಾರ್ಯಂ ತತ್ಪುರಾರ್ಥಮಾದರಾತ್ ॥೭॥

೭ ಗ್ರಾಮ, ಪ್ರದೇಶಗಳಲ್ಲಿ ಶಿವಭಕ್ತರುಗಳಿರುವರೋ, ಯಾರಿಗೆ ಶಿವಕೀರ್ತನೆಯಲ್ಲಿ ಆಸಕ್ತಿಯುಂಟೋ ಅವರೆಲ್ಲರನ್ನೂ ಆದರದಿಂದ ಬರಮಾಡಿಕೊಳ್ಳಬೇಕು.

ಭವಿಷ್ಯತಿ ಸಮಾಜೋಽತ್ರ ಸಾಧೂನಾಂ ಪರಮೋತ್ಸವಃ ।
ಪಾರಾಯಣೇ ಪುರಾಣಸ್ಯ ಶೈವಸ್ಯ ಪರಮಾದ್ಭುತಃ ॥೮॥

೮ ಅಲ್ಲಿ ಸಾಧು ಜನರೆಲ್ಲರೂ ಸೇರುವರು. ಶ್ರೇಷ್ಠವಾದ ಉತ್ಸವವು ನಡೆಯುವುದು. ಪರಮಾದ್ಭುತವಾದ ಶಿವಕಥಾ ಪಾರಾಯಣ ನಡೆಯುವುದು.

**ಶ್ರೀಮಚ್ಛಿವಪುರಾಣಾಹ್ವರಸಪಾನಾಯ ಚಾದರಾತ್ ।**
**ಅಯಾಂತ್ವರಂ ಭವಂತಶ್ಚ ಕೃಪಯಾ ಪ್ರೇಮತತ್ಪರಾಃ ॥೯॥**

೯ ನೀವೆಲ್ಲಾ ಬನ್ನಿ, ಬಂದು ಶ್ರೇಷ್ಠವಾದ ಶಿವಪುರಾಣವೆಂಬ ರಸವನ್ನು ಸವಿಯಲು ಪ್ರೀತಿಯಿಂದ ಬನ್ನಿರಿ. ಅದರಲ್ಲಿ ಪ್ರೀತಿಯುಳ್ಳವರೂ ಆದ ನೀವೆಲ್ಲಾ ಕೃಪೆ ಮಾಡಿ ಬನ್ನಿರಿ.

**ನಾವಕಾಶೋ ಮದಿ ಪ್ರೇಮ್ಣಾ ಗಂತವ್ಯಂ ದಿನಮೇಕಕಂ ।**
**ಸರ್ವಥಾ ಗಮನಂ ಕಾರ್ಯಂ ದುರ್ಲಭಾ ಚ ಕ್ಷಣಸ್ಥಿತಿಃ ॥೧೦॥**

೧೦ ನಿಮಗೆ ಅವಕಾಶವಾಗಲಿಲ್ಲವೇ. ಒಂದು ದಿನ ಮಾತ್ರ ಉಳಿದಿದೆ. ಆದ್ದರಿಂದ ನೀವು ಖಂಡಿತ ಈ ಉತ್ಸವಕ್ಕೆ ಬರಬೇಕು. ಇಂತಹ ಕ್ಷಣಗಳು ಜೀವನದಲ್ಲಿ ಸಿಕ್ಕುವುದು ಅಪರೂಪ. ಜಾಗ್ರತೆ ನಡೆಯಿರಿ.

**ಶೇಷಾಮಾಹ್ವಾನಮೇವಂ ಹಿ ಕಾರ್ಯಂ ಸವಿನಯಂ ಮುದಾ ।**
**ಆಗತಾನಾಂ ಚ ಶೇಷಾಂ ಹಿ ಸರ್ವಥಾ ಕಾರ್ಯ ಆದರಃ ॥೧೧॥**

೧೧ ಈ ರೀತಿಯಾಗಿ ಅವರುಗಳಿಗೆ ವಿನಯದಿಂದಲೂ, ಸಂತೋಷದಿಂದಲೂ ಆಹ್ವಾನಿಸಬೇಕು. ಹಾಗೆಯೇ ಬಂದವರಿಗೆ ಆದರದಿಂದ ಸತ್ಕರಿಸಬೇಕು.

**ಶಿವಾಲಯೇ ಚ ತೀರ್ಥೇ ವಾ ವನೇ ವಾಪಿ ಗೃಹೇಽಥವಾ ।**
**ಕಾರ್ಯಂ ಶಿವಪುರಾಣಸ್ಯ ಶ್ರವಣಸ್ಥಲಮುತ್ತಮಂ ॥೧೨॥**

೧೨ ಶಿವನ ದೇವಾಲಯದಲ್ಲಾಗಲೀ, ತೀರ್ಥಕ್ಷೇತ್ರದಲ್ಲಾಗಲೀ, ಉಪವನದಲ್ಲಾಗಲೀ ಅಥವಾ ಮನೆಯಲ್ಲಾಗಲಿ ಪರಿಶುದ್ಧವಾದ ಸ್ಥಳದಲ್ಲಿ ಶಿವಪುರಾಣ ಪಠನ ಶ್ರವಣಗಳಿಗೆ ಸ್ಥಾನವನ್ನು ನಿಶ್ಚಯಿಸಬೇಕು.

**ಕಾರ್ಯಂ ಸಂಶೋಧನಂ ಭೂಮೇರ್ಲೇಪನಂ ಧಾತುಮಂಡನಂ ।**
**ವಿಚಿತ್ರಾ ರಚನಾ ದಿವ್ಯಾ ಮಹೋತ್ಸವಪುರಸ್ಸರಂ ॥೧೩॥**

೧೩ ಅಂತಹ ನಿಶ್ಚಿತ ಸ್ಥಳದಲ್ಲಿ ಚೆನ್ನಾಗಿ ಗುಡಿಸಿ, ಸಾರಿಸಿ, ಚಿತ್ರವಿಚಿತ್ರವಾದ ಬಣ್ಣಗಳಿಂದ ರಂಗವಲ್ಲಿಯನ್ನು ರಚಿಸಿ ಚೆನ್ನಾಗಿ ಕಾಣುವಂತೆ ಅಲಂಕರಿಸಬೇಕು. ದೇವತೆಗಳಿಗೆ ಯೋಗ್ಯವಾದ ಮಹೋತ್ಸವದಂತೆ ಸುಂದರವಾಗಿ ಅಲಂಕರಿಸಬೇಕು.

**ಗೃಹೋಪಸ್ಕರಮುದ್ಧೃತ್ಯ ನಿಖಿಲಂ ತದಯೋಗ್ಯಕಂ ।**
**ಏಕಾಂತೇ ಗೃಹಕೋಮೇ ಚಾದೃಶ್ಯೇ ಯತ್ನಾನ್ನಿವೇಷಯೇತ್ ॥೧೪॥**

೧೪ ಮನೆಯಲ್ಲಿರುವ ಬೇಡದಿರುವ ವಸ್ತುಗಳನ್ನೆಲ್ಲಾ ಪುರಾಣಪಠನ ಮಾಡುವ ಸ್ಥಳಗಳಲ್ಲಿ ಇಲ್ಲದಂತೆ ಅವುಗಳನ್ನೆಲ್ಲಾ ಬೇರೆ ಕೋಣೆಗಳಲ್ಲಾಗಲೀ ಅಥವಾ ಕಣ್ಣಿಗೆ ಕಾಣದ ಸ್ಥಳದಲ್ಲಾಗಲೀ ಇಡಬೇಕು.

**ಕರ್ತವ್ಯೋ ಮಂಡಪೋಽತ್ಯುಚ್ಚೈಃ ಕದಲೀಸ್ತಂಭಮಂಡಿತಃ ।**
**ಫಲಪುಷ್ಪಾದಿಭಿಸ್ಸಮ್ಯಗ್ವಿಷ್ವಗ್ಬ್ಯತಾನರಾಜಿತಃ ॥೧೫॥**

೧೫ ಎತ್ತರವಾಗಿರುವ ಸ್ಥಳದಲ್ಲಿ ಮನೋಹರವಾದ ಮಂಟಪವನ್ನು ನಿರ್ಮಿಸಿ ಅದರ ಕಂಬಗಳಿಗೆ ಬಾಳೆಯ ಕಂದುಗಳನ್ನು ಕಟ್ಟಿ, ಫಲ, ಪುಷ್ಪ ಮಾಲಿಕೆಗಳಿಂದ ತೋರಣಗಳಿಂದ ಸಿಂಗರಿಸಬೇಕು.

**ಚತುರ್ದಿಕ್ಷು ಧ್ವಜಾರೋಪಸ್ಸಪತಾಕಃ ಸಂಶೋಧನಃ ।**
**ಸಭಕ್ತಿಸ್ಸರ್ವಥಾ ಕಾರ್ಯಾ ಸರ್ವಾನಂದಪಿಧಾಯಿನೀ ॥೧೬॥**

೧೬ ನಾಲ್ಕು ದಿಕ್ಕುಗಳಲ್ಲಿಯೂ ಬಾವುಟಗಳನ್ನೂ ಪತಾಕೆಗಳನ್ನೂ ಚೆನ್ನಾಗಿ ಕಾಣುವಂತೆ ಕಟ್ಟಿ ಸರ್ವ ಆನಂದವನ್ನು ಉಂಟುಮಾಡುವ ಆ ಮಂಟಪದಲ್ಲಿ ಎಲ್ಲರೂ ಭಕ್ತಿಯನ್ನಿಡಬೇಕು.

**ಸಂಕಲ್ಪ್ಯ ಮಾಸನಂ ದಿವ್ಯಂ ಶಂಕರಸ್ಯ ಪರಾತ್ಮನಃ ।**
**ವಕ್ತುಶ್ಚಾಪಿ ತಥಾ ದಿವ್ಯಮಾಸನಂ ಸುಖಸಾಧನಂ ॥೧೭॥**

೧೭ ಪರಮೇಶ್ವರನನ್ನು ಇಟ್ಟು ಪೂಜಿಸಲು ಯೋಗ್ಯವಾದ ಆಸನವನ್ನೂ ಹಾಗೇ ಪುರಾಣವನ್ನು ಹೇಳುವವರಿಗೆ ಸಹ ಯೋಗ್ಯವಾದ ಆಸನವನ್ನು ಏರ್ಪಡಿಸಬೇಕು.

**ಶ್ರೋತೃಣಾಂ ಕಲ್ಪನೀಯಾನಿ ಸುಸ್ಥಲಾನಿ ಯಥಾರ್ಹತಃ ।**
**ಅನ್ಯೇಷಾಂ ಚ ಸ್ಥಲಾನ್ಯೇವ ಸಾಧಾರಣತಯಾ ಮುನೇ ॥೧೮॥**

೧೮ ಶ್ರೋತೃವೃಂದದವರಿಗೆ ಹಾಗೇ ಸಾಮಾನ್ಯರಿಗೆ ಯೋಗ್ಯತಾನುಸಾರ ಆಸನಗಳನ್ನು ಏರ್ಪಡಿಸಬೇಕು.

**ವಿವಾಹೇ ಯಾದೃಶಂ ಚಿತ್ತಂ ಶಾದೃಶಂ ಕಾರ್ಯಮೇವ ಹಿ ।**
**ಅನ್ಯಾ ಚಿಂತಾ ವಿನಿವಾರ್ಯಾ ಸರ್ವಾ ಶೌನಕ ಲೌಕಿಕೀ ॥೧೯॥**

೧೯ ಎಲೈ ಶೌನಕನೇ ಕೇಳು. ವಿವಾಹವಾಗಿ ಮಂಗಳ ಕಾರ್ಯಗಳಲ್ಲಿ ಹೇಗೋ ಹಾಗೆ ಮನಸ್ಸನ್ನು ಶ್ರೇಷ್ಠವಾಗಿರಿಸಿಕೊಳ್ಳಬೇಕು. ಬೇರೆ ಚಿಂತೆಗಳನ್ನು ಮಾಡಬಾರದು.

**ಉದುಙ್ಮುಖೋ ಭವೇದ್ವಕ್ತಾ ಶ್ರೋತಾ ಪ್ರಾಗ್ವದನಸ್ತಥಾ ।**
**ವ್ಯುತ್ಕ್ರಮಃ ಪಾದಯೋರ್ಜ್ಞೇಯೋ ವಿರೋಧೋ ನಾಸ್ತಿ ಕಶ್ಚನ ॥೨೦॥**

೨೦ ಪುರಾಣ ಹೇಳುವವನು ಉತ್ತರಮುಖರಾಗಿಯೂ ಶ್ರೋತೃವೃಂದದವರು ಪೂರ್ವ ಮುಖಉಳ್ಳವರೂ, ಆಗಿರಬೆಕು. ಕಾಲನ್ನು ಆ ಕಡೆಗೆ ಮಾಡಿ ಕುಳಿತುಕೊಳ್ಳಬಾರದು. ಬೇರೆ ದಿಕ್ಕಿಗೆ ಕುಳಿತರೂ ವಿರೋಧವಿಲ್ಲ.

**ಅಥವಾ ಪೂರ್ವದಿಗ್ಜ್ಞೇಯಾ ಪುಜ್ಯಪೂಜಕಮಧ್ಯತಃ ।**
**ಅಥವಾ ಸಂಮುಖೇ ವಕ್ತುಃ ಶ್ರೋತೃಣಾಮಾನನಂ ಸ್ಮೃತಂ ॥೨೧॥**

೨೧ ಅಥವಾ ಪುರಾಣ ಹೇಳುವವರ ಮತ್ತು ಕೇಳುವವರ ಮಧ್ಯಭಾಗವನ್ನೇ ಪೂರ್ವದಿಕ್ಕೆಂದೂ ಕೇಳುವವನು ಎದುರು ಮುಖವೆಂದು ತಿಳಿಯುವುದು.

**ವ್ಯಾಸಾಸನಸಮಾರೂಢೋ ಯದಾ ಪೌರಾಣಿಕೋ ದ್ವಿಜಃ ।**
**ಅಸಮಾಪ್ತೌ ಪ್ರಸಂಗಸ್ಯ ಸಮಸ್ಕುರ್ಯಾನ್ನಕಸ್ಯಚಿತ್ ॥೨೨॥**

೨೨ ಪುರಾಣ ಹೇಳುವವನು ವ್ಯಾಸಾಸನವನ್ನು ಹೊಂದಿ ಕುಳಿತು ಆರಂಭಿಸಿದ ನಂತರ ವಿಚಾರ ಅಥವಾ ಪ್ರಸಂಗ ಮುಗಿಯುವ ಮೊದಲು ಯಾರನ್ನೂ ನಮಸ್ಕರಿಸಬಾರದು.

**ಬಾಲೋ ಯುವಾಥ ವೃದ್ಧೋ ವಾ ದರಿದ್ರೋ ವಾಪಿ ದುರ್ಬಲಃ ।**
**ಪುರಾಣಜ್ಞಸ್ಸದಾ ವಂದ್ಯಃ ಪೂಜ್ಯಶ್ಚ ಸುಕೃತಾರ್ಥಿಭಿಃ ॥೨೩॥**

೨೩ ಪುರಾಣ ಹೇಳುವವನು ಬಾಲಕನು, ಯುವಕನು ಅಥವಾ ವೃದ್ಧನೂ, ದರಿದ್ರನು ದುರ್ಬಲನೇ ಮೊದಲಾದವನಾದರೂ ಸಹ ಯಾವ ರೀತಿ ಇದ್ದರೂ ಸಹ ಒಳ್ಳೆಯದನ್ನು ಬಯಸುವವರಿಂದ ಯಾವಾಗಲೂ ನಮಸ್ಕರಿಸಲ್ಪಡಬೇಕು. ಎಲ್ಲರೂ ಅವನನ್ನು ಗೌರವಿಸಬೇಕಂದು ಅರ್ಥವು.

ನೀಚಬುದ್ಧಿಂ ನ ಕುರ್ವೀತ ಪುರಾಣಜ್ಞೇ ಕದಾಚನ ।
ಯಸ್ಯ ವಕ್ತ್ರೋದ್ಗತಾ ವಾಣೀ ಕಾಮಧೇನುಶ್ಶರೀರಣಾಂ ॥೨೪॥

೨೪ ಆದ್ದರಿಂದ ಪುರಾಣಜ್ಞನ ವಿಚಾರದಲ್ಲಿ ನೀಚಬುದ್ಧಿಯನ್ನು ಇಡಬಾರದು. ಏಕೆಂದರೆ ಪುರಾಣಜ್ಞನ ಮಾತುಗಳು ಕಾಮಧೇನುವಿನಂತೆ ಜನಗಳಿಗೆ ಇಷ್ಟಾರ್ಥವನ್ನು ಕರುಣಿಸುವಂತಹದ್ದಾಗಿರುತ್ತದೆ.

ಗುರುವತ್ಸಂತಿ ಬಹವೋ ಜನ್ಮತೋ ಗುಣತಶ್ಚ ವೈ ।
ಪರೋ ಗುರುಃ ಪುರಾಣಜ್ಞಸ್ತೇಷಾಂ ಮಧ್ಯೇ ವಿಶೇಷತಃ ॥೨೫॥

೨೫ ಎಷ್ಟೋ ಜನರು ಜನ್ಮಾರಭ್ಯ ಗುರುಗಳಾಗಿಯೂ, ಕೆಲವರು ಗುಣಗಳಿಂದ ಗುರುಗಳಾಗಿಯೂ ಇರುತ್ತಾರೆ. ಪುರಾಣಜ್ಞನಾದರೋ ಇವರುಗಳಿಗೆಲ್ಲರಿಗಿಂತ ಶ್ರೇಷ್ಠನಾದ ಗುರುವಾಗಿರುತ್ತಾರೆ.

ಭವಕೋಟಿಸಹಸ್ರೇಷು ಭೂತ್ವಾ ಭೂತ್ವಾವಸೀದತಾಂ ।
ಯೋ ದದಾತಿ ಪರಾಂ ಮುಕ್ತಿಂ ಕೋಽನ್ಯಸ್ತಸ್ಮಾತ್ಪರೋ ಗುರುಃ॥ ೨೬॥

೨೬ ಈ ಸಂಸಾರವೆಂಬ ಸಾಗರದಲ್ಲಿ ಕೋಟಿ ಸಾವಿರ ಜನ್ಮಗಳನ್ನೆತ್ತಿ ತೊಳಲಾಡುತ್ತಿರುವವರಿಗೆ ಯಾವನು ಪುರಾಣ ಕೇಳಿಸುವಿಕೆಯೆಂಬ ಕೆಲಸದಿಂದ ಶ್ರೇಷ್ಠವಾದ ಮೋಕ್ಷವನ್ನು ಕೊಡುವನೋ ಅವನಿಗಿಂತ ಶ್ರೇಷ್ಠನಾದ ಗುರುವು ಯಾರು ತಾನೇ ಇರುವನು.

ಪುರಾಣಜ್ಞಃ ಶುಚಿರ್ದಕ್ಷಃ ಶಾಂತೋ ವಿಜಿತಮತ್ಸರಃ ।
ಸಾಧುಃ ಕಾರುಣ್ಯವಾನ್ವಾಗ್ಮೀ ವದೇತ್ಪುಣ್ಯಕಥಾಮಿಮಾಂ ॥೨೭॥

೨೭ ಪುರಾಣವನ್ನು ತಿಳಿದವನು, ಶುಚಿಯಾಗಿರತಕ್ಕವನೂ, ದಕ್ಷತೆ ಉಳ್ಳವನೂ, ಶಾಂತಸ್ವಭಾವವುಳ್ಳವನೂ, ಯಾರಲ್ಲೂ ದ್ವೇಷವಿರದವನೂ ಸಾಧು ಸ್ವಭಾವದವನೂ, ಕರುಣಾಮಯಿಯೂ, ಒಳ್ಳೆಯ ಮಾತುಗಾರನೂ, ಆಗಿ ಪುಣ್ಯಕರವಾದ ಈ ಕಥೆಯನ್ನು ಹೇಳಬೇಕು.

ಆಸೂರ್ಯೋದಯಮಾರಭ್ಯ ಸಾರ್ಧತ್ರಿಪ್ರಹರಾಂತಕಂ ।
ಕಥಾ ಶಿವಪುರಾಣಸ್ಯ ವಾಚ್ಯಾ ಸಮ್ಯಕ್ ಸುಧೀಮತಾ ॥೨೮॥

೨೮ ಸೂರ್ಯೋದಯದಿಂದ ಪ್ರಾರಂಭಿಸಿ ಮೂರುವರೆ ಯಾಮ ಪೂರ್ತಿ ಬುದ್ಧಿವಂತನಾದ ಪುರಾಣಜ್ಞನು ಶಿವಪುರಾಣವನ್ನು ಹೇಳಬೇಕು.

**ಯೇ ಧೂರ್ತಾ ಯೇ ಚ ದುರ್ವೃತ್ತಾ ಯೇ ಜಾನ್ಯೇ ವಿಜಿಗೀಷವಃ ।**
**ತೇಷಾಂ ಕುಟಿಲವೃತ್ತೀನಾಮಗ್ರೇ ನೈವ ವದೇತ್ಕಥಾಂ ॥೨೯॥**

೨೯ ಯಾರು ಧೂರ್ತರೋ, ಕೆಟ್ಟ ನಡತೆಯುಳ್ಳವರೋ, ಸ್ವಪ್ರತಿಷ್ಠೆಯುಳ್ಳವರೋ, ವಕ್ರಬುದ್ಧಿಯುಳ್ಳವರೋ ಅಂತಹವರಿಗೆ ಶಿವಪುರಾಣ ಕಥೆಯನ್ನು ಹೇಳಬಾರದು.

**ನ ದುರ್ಜನಸಮಾಕೀರ್ಣೇ ನ ತು ದಸ್ಯುಸಮಾವೃತೇ ।**
**ದೇಶೇ ಚ ಧೂರ್ತಸದನೇ ವದೇತ್ಪುಣ್ಯಕಥಾಮಿಮಾಂ ॥೩೦॥**

೩೦ ದುರ್ಜನರ ಸಮೂಹದಲ್ಲಿ, ಕಳ್ಳರು ಸೇರಿರುವ ಪ್ರದೇಶದಲ್ಲಿ, ಧೂರ್ತರ ಮನೆಗಳಲ್ಲಿ ಪುರಾಣ ಪಠನ ಮಾಡಬಾರದು.

**ಕಥಾವಿರಾಮಃ ಕರ್ತವ್ಯೋ ಮಧ್ಯಾಹ್ನೇ ಹಿ ಮೂಹುರ್ತಕಂ ।**
**ಮಲಮೂತ್ರೋತ್ಸರ್ಜನಾರ್ಥಂ ತತ್ಕಥಾಕೀರ್ತನಾನ್ನರೈಃ ॥೩೧॥**

೩೧ ಪುರಾಣ ಹೇಳುವಾಗ ಮಧ್ಯಾಹ್ನದಲ್ಲಿ ಕೇಳುವ ಮನುಷ್ಯರಿಗೆ ಮಲಮೂತ್ರ ವಿಸರ್ಜನೆಗಾಗಿ ಒಂದು ಮುಹೂರ್ತಕಾಲ ವಿರಾಮ ನೀಡಬೇಕು.
ವಿ.ಸೂ. ಮುಹೂರ್ತವೆಂದರೆ ನಲವತ್ತೆಂಟು ನಿಮಿಷಗಳು.
ಯಾವುವೆಂದರೆ ೩ ಘಂಟೆಗಳ ಕಾಲ.

**ವಕ್ತ್ರಾ ಕ್ಷೌರಂ ಹಿ ಸಂಕಾರ್ಯಂ ದಿನಾದರ್ವಾಗ್ವ್ರತಾಪ್ತಯೇ ।**
**ಕಾರ್ಯಃ ಸಂಕ್ಷೇಪತೋ ನಿತ್ಯಕ್ರಮಃ ಸರ್ವಪ್ರಯತ್ನತಃ ॥೩೨॥**

೩೨ ಪುರಾಣವನ್ನು ಹೇಳುವವನು ಪುರಾಣ ಶ್ರವಣ ಮಾಡಿಸಲು ನಿಗದಿತವಾದ ದಿನಕ್ಕೆ ಒಂದು ದಿನ ಮೊದಲೇ ಕ್ಷೌರ ಮಾಡಿಸಿಕೊಂಡು ದೀಕ್ಷಾ ಬದ್ಧನಾಗಿರಬೇಕು. ಸರ್ವಪ್ರಯತ್ನದಿಂದಲೂ ನಿತ್ಯಕರ್ಮವನ್ನು ಸಂಕ್ಷೇಪವಾಗಿ ಮಾಡಬೇಕು.

**ವಕ್ತುಃ ಪಾರ್ಶ್ವೇ ಸಹಾಯಾರ್ಥಮನ್ಯಃ ಸ್ಥಾಪ್ಯಸ್ತಥಾವಿಧಃ**
**ಪಂಡಿತಃ ಸಂಶಯಚ್ಛೇತ್ತಾ ಲೋಕಬೋಧನತತ್ಪರಃ ॥೩೩॥**

೩೩ ಪುರಾಣ ಹೇಳುವವನ ಪಕ್ಕದಲ್ಲಿ ಅವನಷ್ಟೇ ಯೋಗ್ಯನಾದ ಪಂಡಿತನು ಇರಬೇಕು. ಅವನು ಸಂಶಯಗಳನ್ನು ಹೋಗಲಾಡಿಸುವವನೂ, ಜನರಿಗೆ ತಿಳಿಯುವಂತೆ ಹೇಳುವವನೂ ಆಗಿರಬೇಕು.

**ಕಥಾವಿಘ್ನ ವಿನಾಶಾರ್ಥಂ ಗಣನಾಥಂ ಪ್ರಪೂಜಯೇತ್ ।**
**ಕಥಾಧೀಶಂ ಶಿವಂ ಭಕ್ತ್ಯಾ ಪುಸ್ತಕಂ ಚ ವಿಶೇಷತಃ ॥೩೪॥**

೩೪ ಶಿವ ಪುರಾಣ ಕಥೆಯು ನಿರ್ವಿಘ್ನವಾಗಿ ಪರಿಸಮಾಪ್ತಿಯಾಗಲೆಂದು ಮೊದಲಿಗೆ ಗಣಪತಿಯನ್ನು ಪೂಜಿಸಬೇಕು. ಹಾಗೆಯೇ ಕಥೆಗೆ ಅಧಿಪತಿಯಾದ ಶಿವನನ್ನೂ ನಂತರ ಪುರಾಣದ ಪುಸ್ತಕವನ್ನೂ ಪೂಜಿಸಬೇಕು.

**ಶ್ರೋತಾ ಸವಿಧಿನಾ ಶುದ್ಧಃ ಶುದ್ಧಚಿತ್ತಃ ಪ್ರಸನ್ನಧೀಃ ।**
**ಕಥಾಂ ಶಿವಪುರಾಣಸ್ಯ ಶೃಣುಯಾದಾದರಾತ್ಸುಧೀಃ ॥೩೫॥**

೩೫ ಶಿವ ಪುರಾಣವನ್ನು ಕೇಳುವವರೂ ಸಹ ವಿಧಿವತ್ತಾಗಿ ನಿತ್ಯಕರ್ಮಗಳನ್ನು ಮಾಡಿ ಪರಿಶುದ್ಧರಾಗಿದ್ದುಕೊಂಡು ಪರಿಶುದ್ಧ ಮನಸ್ಸು, ಬುದ್ಧಿಗಳುಳ್ಳವರಾಗಿ ಪ್ರೀತಿಯಿಂದ ಕೇಳಬೇಕು.

**ಅನೇಕಕರ್ಮವಿಭ್ರಾಂತಃ ಕಾಮಾದಿಷಡ್ವಿಕಾರವಾನ್ ।**
**ಸ್ತ್ರೈಣಃ ಪಾಷಂಡವಾದೀ ಚ ವಕ್ತಾ ಶ್ರೋತಾ ನ ಪುಣ್ಯಭಾಕ್ ॥೩೬॥**

೩೬ ಅನೇಕ ಕರ್ಮಗಳಲ್ಲಿ ಆಸಕ್ತರಾಗಿರುವ, ಕಾಮಾದಿ ವಿಕಾರವುಳ್ಳವರೂ, ನಾಸ್ತಿಕರೂ, ಆಗಿರುವಂತಹ ಶ್ರೋತೃವಾಗಲೀ ವಕ್ತೃವಾಗಲೀ ಪುಣ್ಯವನ್ನು ಹೊಂದಲಾರರು. ವಿ.ಸೂ.ಕಾಮಾದಿ ವಿಚಾರಗಳು ಇದನ್ನೇ ಅರಿಷಡ್ವರ್ಗವೆನ್ನುವರು. ಅಂದರೆ ದೇಹದೊಳಗಿರುವ ವಿಕಾರಗಳು. ಇವು ಮೋಕ್ಷಾದಿ ಸಾಧನೆಗಳಿಗೆ ಬಾಧಕಗಳು. ಆದ್ದರಿಂದಲೇ ಶತ್ರುರೂಪವಾದುವೆಂದು ತಿಳಿಸಿದ್ದಾರೆ. ಅರಿ ಎಂದರೆ ಶತ್ರು, ಷಡ್ವರ್ಗವೆಂದರೆ ಆರರ ಗುಂಪು.

೧. ಕಾಮವೆಂದರೆ ಒಂದು ವಸ್ತುವಿನಲ್ಲಿ ಹೆಚ್ಚಿನ ಆಸೆ. ೨. ಕ್ರೋಧವೆಂದರೆ ಕೋಪ. ೩. ಲೋಭವೆಂದರೆ ಜಿಪುಣತನ. ೪.ಮೋಹವೆಂದರೆ ಒಂದು ವಸ್ತುವಿನಲ್ಲಿ ಹೆಚ್ಚಿನ ಆಸಕ್ತಿ. ಅದನ್ನು ಅಗಲದಿರುವಿಕೆ. ೫.ಮದವೆಂದರೆ ಅಹಂಭಾವ ತಾನೇ ಹೆಚ್ಚೆಂಬ ಭಾವನೆ

೬.ಮಾತ್ಸರ್ಯವೆಂದರೆ ಇನ್ನೊಬ್ಬರ ಏಳಿಗೆ ಸಹಿಸದೇ ಹೊಟ್ಟೆಕಿಚ್ಚು ಪಡುವುದು,

ಲೋಕಚಿಂತಾಂ ಧನಾಗಾರಪುತ್ರಚಿಂತಾಂ ವ್ಯುದಸ್ಯ ಚ ।
ಕಥಾಚಿತ್ತಃ ಶುದ್ಧಮತಿಃ ಸ ಲಭೇತ್ಫಲಮುತ್ತಮಂ ॥ ೩೭॥

೩೭ ಲೋಕದ ವ್ಯವಹಾರದ ಚಿಂತೆ, ಹಣ, ಮನೆ, ಮಕ್ಕಳು ಇವುಗಳ ಚಿಂತೆಯನ್ನು ತ್ಯಜಿಸಿ ಶುದ್ಧ ಬುದ್ಧಿಯಿಂದ ಕಥಾಶ್ರವಣವನ್ನು ಏಕಾಗ್ರತೆ, ಶ್ರದ್ಧೆಯಿಂದ ಮಾಡುವವನು ಉತ್ತಮವಾದ ಫಲವನ್ನು ಹೊಂದುವನು.

ಶ್ರದ್ಧಾಭಕ್ತಿಸಮಾಯುಕ್ತಾ ನಾನ್ಯಕಾರ್ಯೇಷು ಲಾಲಸಾಃ ।
ವಾಗ್ಯತಾಃ ಶುಚಯೋಽವ್ಯಗ್ರಾಃ ಶ್ರೋತಾರಃ ಪುಣ್ಯಭಾಗಿನಃ ॥೩೮॥

೩೮ ಶ್ರದ್ಧಾ ಭಕ್ತಿಯುಳ್ಳ, ಬೇರೆ ಕಾರ್ಯಾಸಕ್ತರಲ್ಲದ, ಶುದ್ಧರಾದ, ಮುನಿಗಳಾದ, ಕೋಪವನ್ನು ತ್ಯಜಿಸಿದ ಶ್ರೋತೃಗಳೆ ಪುಣ್ಯಭಾಜನರಾಗಿರುತ್ತಾರೆ.

ಅಭಕ್ತಾ ಯೇ ಕಥಾಂ ಪುಣ್ಯಾಂ ಶೃಣ್ವಂತೀಮಾಂ ನರಾಧಮಾಃ ।
ತೇಷಾಂ ಶ್ರವಣಜಂ ನಾಸ್ತಿ ಫಲಂ ದುಃಖಂ ಭವೇ ಭವೇ ॥೩೯॥

೩೯ ಶಿವನಲ್ಲಿ ಭಕ್ತಿ ಇಲ್ಲದೇ ಇರುವವರು ಸುಮ್ಮನೆ ವ್ಯಂಗ್ಯಕ್ಕಾಗಿ ಕಥಾಶ್ರವಣ ಮಾಡಿದರೆ ಅವರಿಗೆ ಕಥಾಶ್ರವಣ ಫಲ ಲಭಿಸದೇ ಪ್ರತಿ ಜನ್ಮದಲ್ಲೂ ದುಃಖವನ್ನೇ ಹೊಂದುತ್ತಾರೆ.

ಅಸಂಪೂಜ್ಯ ಪುರಾಣಂ ಯೇ ಯಥಾಶಕ್ತ್ಯಾ ಹ್ಯುಪಾಯನೈಃ ।
ಶೃಣ್ವಂತೀಮಾಂ ಕಥಾಂ ಮೂಢಾಃ ಸ್ಯುರ್ದರಿದ್ರಾ ನ ಪಾವನಾಃ ॥೪೦॥

೪೦ ಪುರಾಣವನ್ನು ಪೂಜಿಸದೇ ಗೌರವಿಸದೇ ಯಥಾಶಕ್ತಿ ಕಾಣಿಕೆಯನ್ನು ಸಲ್ಲಿಸದೇ ಶಿವಕಥೆಯನ್ನು ಯಾರು ಕೇಳುವರೋ ಅಂತಹವರು ಪವಿತ್ರರಾಗದೇ ಮುಂದೆ ದರಿದ್ರರೂ, ಮೂಢರೂ ಆಗುವರು.

ಕಥಾಯಾಂ ಕಥ್ಯಮಾನಾಯಾಂ ಗಚ್ಛಂತ್ಯನ್ಯತ್ರ ಯೇ ನರಾಃ ।
ಭೋಗಾಂತರೇ ಪ್ರಣಶ್ಯಂತಿ ತೇಷಾಂ ದಾರಾದಿಸಂಪದಃ ॥೪೧॥

೪೧ ಕಥೆಯು ನಡೆಯುವ ಮಧ್ಯದಲ್ಲಿ ಬೇರೆಡೆಗೆ ಯಾವ ಮನುಷ್ಯನು ಹೋಗುವನೋ ಅಂತಹವನಿಗೆ ಪತ್ನಿ ವಿಷಯಕವಾದ ಭೋಗಾದಿಗಳಲ್ಲಿ ನಾಶವು ಅಂದರೆ ಅಲ್ಲೂ ಸಹ ಮಧ್ಯದಲ್ಲಿ ತೊಂದರೆ ಉಂಟಾಗುವುದು.

**ಸೋಷ್ಣೀಷಮಸ್ತಕಾ ಯೇ ಚ ಶ್ರುಣ್ವಂತೀಮಾಂ ಕಥಾಂ ನರಾಃ ।**
**ತತ್ಪುತ್ರಾಶ್ಚ ಪ್ರಜಾಯಂತೇ ಪಾಪಿನಃ ಕುಲದೂಷಕಾಃ ॥೪೨॥**

೪೨ ತಲೆಗೆ ಪೇಟ, ರುಮಾಲು, ಇತ್ಯಾದಿ ಶಿರೋಭೂಷಣಗಳನ್ನು ಧರಿಸಿ ಕಥಾಶ್ರವಣ ಮಾಡುವ ಜನರಿಗೆ, ಹುಟ್ಟುವ ಮಕ್ಕಳು ಪಾಪಿಗಳೂ, ಕುಲವನ್ನು ದೂಷಿಸುವರೂ ಆಗಿರುವರು.

**ತಾಂಬೂಲಂ ಭಕ್ಷಯಂತೋ ಯೇ ಶ್ರುಣ್ವಂತೀಮಾಂ ಕಥಾಂ ನರಾಃ ।**
**ಸ್ವವಿಷ್ಠಾಂ ಸ್ವಾದಯಂತ್ಯೇತಾನ್ನರಕೇ ಯಮಕಿಂಕರಾಃ ॥೪೩॥**

೪೩ ಯಾವ ಮನುಷ್ಯರು ತಾಂಬೂಲವನ್ನು ಮೆಲ್ಲುತ್ತಾ ಕಥಾಶ್ರವಣ ಮಾಡುತ್ತಾರೋ, ಅಂತಹವರನ್ನು ಯಮನ ದೂತರು ನರಕಕ್ಕೆ ಕರೆದುಕೊಂಡು ಹೋಗಿ ಅವರಿಗೆ ಅವರ ಮಲವನ್ನೇ ತಿನ್ನಿಸುವರು.

**ಯೇ ಚ ತುಂಗಾಸನಾರೂಢಾಃ ಶ್ರುಣ್ವಂತೀವಣಂ ಕಥಾಂ ನರಾಃ ।**
**ಭುಕ್ತ್ವಾ ತೇ ನರಕಾನ್ಸರ್ವಾಂಸ್ತತಃ ಕಾಕಾ ಭವಂತಿ ಹ ॥೪೪॥**

೪೪ ಯಾರು ಎತ್ತರವಾದ ಆಸನದಲ್ಲಿ ಕುಳಿತು ಈ ಶಿವ ಪುರಾಣವನ್ನು ಕೇಳುವರೋ, ಅಂತಹ ಮಾನವರು ನರಕ ಲೋಕದಲ್ಲಿ ದುಃಖವನ್ನು ಅನುಭವಿಸಿ ನಂತರ ಅವರುಗಳು ಕಾಗೆಗಳಾಗಿ ಆಗುತ್ತಾರೆ.

**ಯೇ ವಿರಾದ್ಯಾಸನಾರೂಢಾಃ ಶ್ರುಣ್ವಂತೀಮಾಂ ಕಥಾಂ ಶುಭಾಂ ।**
**ಭುಕ್ತ್ವಾ ತೇ ನರಕಾನ್ಸರ್ವಾನ್ವಿಷವೃಕ್ಷಾ ಭವಂತಿ ವೈ ॥೪೫॥**

೪೫ ಯಾರು ವೀರಾಸನದಲ್ಲಿ ಕುಳಿತು ಶಿವಪುರಾಣದ ಕಥೆಯನ್ನು ಕೇಳುವರೋ ಅವರು ನರಕ ದುಃಖವನ್ನು ಅನುಭವಿಸಿ ವಿಷವೃಕ್ಷಗಳಾಗಿ ಜನ್ಮತಾಳುತ್ತಾರೆ.

ಮರು ಹುಟ್ಟುವರು.

ಅನಾತುರಾಶ್ಶಯಾನಾ ಯೇ ಶ್ರುಣ್ವಂತೀಮಾಂ ಕಥಾಂ ನರಾಃ ।
ಭುಕ್ತ್ವಾ ತೇ ನರಕಾನ್ಸರ್ವಾರ್ನ್ ಭವಂತ್ಯಜಗರಾದಯಃ ॥೪೭॥

೪೭ ಯಾವ ರೋಗಗಳಿಲ್ಲದಿದ್ದರೂ ಸಹಯಾರು ಮಲಗಿ ಯಾರು ಶಿವಪುರಾಣ ಶ್ರವಣ ಮಾಡುವರೋ ಅಂತಹವರು ಅನೇಕ ನರಕ ಕಷ್ಟಗಳನ್ನನುಭವಿಸಿ ನಂತರ ಹೆಬ್ಬಾವೇ ಮೊದಲಾದ ಹಾವುಗಳಾಗಿ ಜನಿಸುವರು.

ವಕ್ತುಸ್ಸಮಾಸನಾರೂಢಾ ಯೇ ಶೃಣ್ವಂತಿ ಕಥಾಮಿಮಾಂ ।
ಗುರುತಲ್ಪಸಮಂ ಪಾಪಂ ಪ್ರಾಪ್ಯತೇ ನಾರಕೈಃ ಸದಾ ॥೪೮॥

೪೮ ಪುರಾಣ ಹೇಳುವವನ ಸಮಾನವಾದ ಆಸನದಲ್ಲಿ ಕುಳಿತು ಪುರಾಣ ಶ್ರವಣ ಮಾಡಿದವನು ನರಕವನ್ನು ಅನುಭವಿಸಿ ಕಡೆಗೆ ಗುರುತಲ್ಪಗಮನ ಸಮವಾದ ಪಾಪವನ್ನು ಹೊಂದುವನು.

ವಿ.ಸೂ. ಗುರುತಲ್ಪ ಗಮನವೆಂದರೆ ಗುರುವಿನ ಹಾಸಿಗೆಯ ಮೇಲೆ ಮಲಗುವುದು ಅಥವಾ ಗುರುಪತ್ನಿ ಗಮನ ಇತ್ಯಾದಿ ಇದು ೫ ಮಹಾಪಾತಕಗಳಲ್ಲಿ ಒಂದು. ಬ್ರಹ್ಮಹತ್ಯೆಗೆ ಸಮ.

ಯೇ ನಿಂದಂತಿ ಚ ವಕ್ತಾರಂ ಕಥಾಂ ಚೇಮಾಂ ಸುದಾವನೀಂ ।
ಭವಂತಿ ಶುನಕಾ ಭುಕ್ತ್ವಾ ದುಃಖಂ ಜನ್ಮಶತಂ ಹಿ ತೇ ॥೪೯॥

೪೯ ಯಾರು ಪುರಾಣವನ್ನು ಪುರಾಣ ಹೇಳುವವರನ್ನೂ ನಿಂದಿಸುವರೋ ಅವರು ನೂರು ಜನ್ಮ ದುಃಖವನ್ನು ಅನುಭವಿಸಿ ನಂತರ ನಾಯಿಗಳಾಗಿ ಹುಟ್ಟುವರು.

ಕಥಯಾಂ ವರ್ತಮಾನಾಯಾಂ ದುರ್ವಾದಂ ಯೇ ವದಂತಿ ಹಿ ।
ಭುಕ್ತ್ವಾ ತೇ ನರಕಾರ್ನ್ ಘೋರಾರ್ನ್ ಭವಂತಿ ಗರ್ದಭಾಸ್ತತಃ ॥೫೦॥

೫೦ ಪುರಾಣ ಹೇಳುವಾಗ, ಪುರಾಣ ಪಠನ ಕಾಲದಲ್ಲಿ ಯಾರು ಕೆಟ್ಟ ವಾದ ಮಾಡುವರೋ ಅವರು ನರಕದ ದುಃಖಗಳನ್ನು ಅನುಭವಿಸಿ ನಂತರ ಕತ್ತೆಗಳಾಗಿ ಜನ್ಮತಾಳುವರು.

ಕದಾಚಿನ್ನಾಪಿ ಶೃಣ್ವಂತಿ ಕಥಾಮೇತಾಂ ಸುಪಾವನೀಂ ।
ಭುಕ್ತ್ವಾ ತೇ ನರಕಾನ್ ಘೋರಾನ್ ಭವಂತಿ ವನಸೂಕರಾಃ ॥೫೧॥

೫೧ ಯಾರು ಪರಮ ಪವಿತ್ರವಾದ ಈ ಶಿವಪುರಾಣವನ್ನು ಒಂದು ಬಾರಿಯೂ ತಮ್ಮ ಜೀವಿತದಲ್ಲಿ ಕೇಳುವುದಿಲ್ಲವೋ ಅಂತಹ ಮನುಜರು ಘೋರವಾದ ನರಕ ದುಃಖಗಳನ್ನು ಅನುಭವಿಸಿ ಕಡೆಗೆ ಕಾಡು ಹಂದಿಗಳಾಗಿ ಹುಟ್ಟುವರು.

ಕಥಾಯಾಂ ಕೀರ್ತ್ಯಮಾನಾಯಾಂ ವಿಘ್ನಂ ಕುರ್ವಂತಿ ಯೇ ಖಲಾಃ ।
ಕೋಟ್ಯಬ್ದಂ ನರಕಾನ್ ಭುಕ್ತ್ವಾ ಭವಂತಿ ಗ್ರಾಮಸೂಕರಾಃ ॥೫೨॥

೫೨ ಈ ಶಿವಕಥೆ ನಡೆಯುವ ಸ್ಥಳದಲ್ಲಿ ಯಾರು ವಿಘ್ನಗಳನ್ನು ಮಾಡುವರೋ ಅಂತಹವರು ಒಂದು ಕೋಟಿ ವರ್ಷಗಳು ನರಕವನ್ನು ಅನುಭವಿಸಿ ಗ್ರಾಮದ ಹಂದಿಗಳಾಗಿ ಜನ್ಮವೆತ್ತುವರು.

ಏವಂ ವಿಚಾರ್ಯ ಶುದ್ಧಾತ್ಮಾ ಶ್ರೋತಾ ವಕ್ತೈಸುಭಕ್ತಿಮಾನ್ ।
ಕಥಾಶ್ರವಣಹೇತೋರ್ಹಿ ಭವೇತ್ಪ್ರೀತ್ಯೋದ್ಯತಃ ಸುಧೀಃ ॥೫೩॥

೫೩ ಈ ರೀತಿಯಾಗಿರತಕ್ಕಂತಹ ವಿಚಾರಗಳನ್ನು ತಿಳಿದು ಪರಿಶುದ್ಧಾತ್ಮನಾಗಿ ಪುರಾಣ ಕೇಳುವವನು ಪುರಾಣ ಶ್ರವಣ ಮಾಡಬೇಕು. ಹಾಗೇ ಪುರಾಣಿಕನಲ್ಲಿ ಒಳ್ಳೆಯ ಭಕ್ತಿ ಇಡಬೇಕು. ಸಂತೋಷದಿಂದ ಸಹ ಕೇಳಬೇಕು. ಇಂತಹವನೇ ಜ್ಞಾನಿಯು.

ಕಥಾವಿಘ್ನವಿನಾಶಾರ್ಥಂ ಗಣೇಶಂ ಪೂಜಯೇತ್ಪುರಾ ।
ನಿತ್ಯಂತ ಸಂಪಾದ್ಯ ಸಂಕ್ಷೇಪಾತ್ಪ್ರಾಯಶ್ಚಿತ್ತಂ ಸಮಾಚರೇತ್ ॥೫೪॥

೫೪ ಕಥೆ ಪ್ರಾರಂಭಮಾಡುವ ಮೊದಲು ವಿಘ್ನಗಳು ಪರಿಹಾರವಾಗಲು ಗಣೇಶನನ್ನು ಪೂಜಿಸಬೇಕು. ಈ ರೀತಿ ಪ್ರತಿನಿತ್ಯದಲ್ಲೂ ಗಣೇಶಾರಾಧನೆ ಮಾಡಿ ನಂತರ ಸಂಕ್ಷೇಪವಾಗಿ ಪ್ರಾಯಶ್ಚಿತ್ತವನ್ನೂಸಹ ಮಾಡಬೇಕು.

ನವಗ್ರಹಾಂಶ್ಚ ಸಂಪೂಜ್ಯ ಸರ್ವತೋಭದ್ರದೈವತಂ ।
ಶಿವಪೂಜೋಕ್ತವಿಧಿನಾ ಪುಸ್ತಕಂ ತತ್ಸಮರ್ಚಯೇತ್ ॥೫೫॥

೫೫ ನವಗ್ರಹಗಳನ್ನೂ ಪೂಜಿಸಬೇಕು. ಸರ್ವತೋಭದ್ರವೆಂಬ ಮಂಡಲದಲ್ಲಿ ಹೆಸರೆ ಹೇಳುವಂತ ಎಲ್ಲೆಡೆ ಮಂಗಳವಾಗಲೆಂಬ ಉದ್ದೇಶದಿಂದ ಆ ಮಂಡಲದೇವತೆಯನ್ನೂ ಪೂಜಿಸಬೇಕು. ನಂತರ ಶಿವಪೂಜೆಗೆ ಹೇಳಿರುವ ಕ್ರಮದಿಂದ ಪುರಾಣದ ಪುಸ್ತಕವನ್ನೂ ಪೂಜಿಸಬೇಕು.

ವಿ.ಸೂ.ತಸರ್ವತೋಭದ್ರನೆಂಬುದು ತಂತ್ರ ಶಾಸ್ತ್ರಗಳಲ್ಲಿ ವವರಿಸುವ ಮಂಡಲ. ಈ ಮಂಡಲವನ್ನು ಅಲ್ಲಿ ಹೇಳುವ ವರ್ಣಗಳಿಂದ ರಚಿಸಿ ಪೂಜಿಸಬೇಕು. ಹೀಗೆ ಪೂಡಿಸುವುದರಿಂದ ಮಂಗಳ ಪರಂಪರಿ ಉಂಟಾಗುತ್ತದೆ.

ಇದರ ಲಕ್ಷಣತಿ

ಪೂಜನಾಂತೇ ಮಹಾಭಕ್ತ್ಯಾ ಕರೌ ಬದ್ಧ್ವಾವಿನೀತಕಃ ।
ಸಾಕ್ಷಾಚ್ಛಿವಪುರಾಣಸ್ಯ ಪುಸ್ತಕಸ್ಯ ಸ್ತುತಿಂ ಚರೇತ್ ॥೫೬॥

೫೬ ಪೂಜೆಯ ನಂತರ ಬಹಳ ಭಕ್ತಿಯಿಂದ ಕೈ ಜೋಡಿಸಿ ವಿನಯದಿಂದ ಶಿವ ಸ್ವರೂಪವಾದ ಪುಸ್ತಕವನ್ನು ಪ್ರಾರ್ಥಿಸಿ ಸ್ತೋತ್ರ ಮಾಡಬೇಕು.

ಶ್ರೀಮಚ್ಛಿವಪುರಾಣಾಖ್ಯಃ ಪ್ರತ್ಯಕ್ಷಸ್ತ್ವಂ ಮಹೇಶ್ವರಃ ।
ಶ್ರವಣಾರ್ಥಂ ಸ್ವೀಕೃತೋಽಸಿ ಸಂತುಷ್ಟೋ ಭವವೈ ಮಯಿ ॥೫೭॥

೫೭ ಎಲೈ ಶ್ರೀ ಶಿವಪುರಾಣವೆಂದು ಪ್ರಸಿದ್ಧವಾದ ಪುಸ್ತಕವೇ ನೀನು ಎದುರಿಗೆ ಕಾಣುವ ಶಿವಸ್ವರೂಪವುಳ್ಳವನಾಗಿರುವೆ. ನಿನ್ನನ್ನು ಕೇಳಲು ಎಅಂದರೆ ನಿನ್ನ ವಿಚಾರಗಳನ್ನು ಕೇಳಲುಪಿ ಬಂದಿದ್ದೇನೆ. ನೀನು ನನ್ನಲ್ಲಿ ಪ್ರಸನ್ನನಾಗು .

ಮನೋರಥೋ ಮದೀಯೋಽಯಂ ಕರ್ತವ್ಯಸ್ಸಫಲಸ್ತ್ವಯಾ ।
ನಿರ್ವಿಘ್ನೇನ ಸುಸಂಪೂರ್ಣಂ ಕಥಾಶ್ರವಣಮಸ್ತು ಮೇ ॥೫೮॥

೫೮ ನೀನು ನನ್ನ ಇಷ್ಟಾರ್ಥಗಳೆಲ್ಲವೂ ಎಒಳ್ಳೆಯ ಫಲವಾಗುವಂತೆಪಿ ಈಡೇರುವಂತೆ ಅನುಗ್ರಹಿಸು. ನಿನ್ನಿಂದ ಈ ಕಥಾಶ್ರವಣವು ಯಾವ ತೊಂದರೆ ಇಲ್ಲದಂತೆ ಪೂರ್ತಿಯಾಗಿ ಆಗಲಿ.

ಭವಾಬ್ಧಿಮಗ್ನಂ ದೀನಂ ಮಾಂ ಸಮುದ್ಧರ ಭವಾರ್ಣವಾತ್ ।
ಕರ್ಮಗ್ರಾಹಗೃಹೀತಾಂಗಂ ಬಾಸೋಽಹಂ ತವ ಶಂಕರ ॥೫೯॥

೫೯ ಎಲೈ ಪರಮೇಶ್ವರನೇ ಸಂಸಾರ ಸಾಗರದಲ್ಲಿ ಮುಳುಗಿರುವ ದೀನನಾಗಿರುವ ನನ್ನನ್ನು ಸಂಸಾರವೆಂಬ ಸಾಗರದಿಂದ ಚೆನ್ನಾಗಿ ಉದ್ಧಾರಮಾಡು. ಕರ್ಮಗಳೆಂಬ ಮೊಸಳೆಗಳಿಂದ ಹಿಡಿಯಲ್ಪಟ್ಟ ದೇಹವುಳ್ಳ ನನ್ನನ್ನು ಉದ್ಧರಿಸು. ನಾನು ನಿನ್ನ ಸೇವಕನಾಗಿರುವೆನು.

ಏವಂ ಶಿವಪುರಾಣ ಹಿ ಸಾಕ್ಷಾಚ್ಛಿವಸ್ವರೂಪಕಂ ।
ಸ್ತುತ್ವಾ ದೀನವಚಃ ಪ್ರೋಚ್ಯ ವಕ್ತುಃ ಪೂಜಾಂ ಸಮಾರಭೇತ್ ॥೬೦॥

೬೦ ಈ ರೀತಿಯಾಗಿ ಸಾಕ್ಷಾತ್ ಶಿವಸ್ವರೂಪವಾಗಿರುವ ಶಿವಪುರಾಣವನ್ನು ನಮ್ರತೆಯಿಂದ ಪ್ರಾರ್ಥಿಸಿ ಪುರಾಣ ಹೇಳುವವರನ್ನೂ ಸಹ ಪೂಜಿಸಬೇಕು.

ಶಿವಪೂಜೋಕ್ತವಿಧಿನಾ ವಕ್ತಾರಂ ಚ ಸಮರ್ಚಯೇತ್ ।
ಸಪುಷ್ಪವಸ್ತ್ರಭೂಷಾಭಿರ್ಧೂಪದೀಪಾದಿನಾರ್ಚಯೇತ್ ॥೬೧॥

೬೧ ಶಿವಪೂಜಾಕ್ರಮದಂತೆಯೇ ಪುರಾಣ ಹೇಳುವ ಪುರಾಣಿಕನನ್ನು ಒಳ್ಳೆಯ ಹೂ, ಶ್ರೇಷ್ಟವಾದ ವಸ್ತ್ರ, ಆಭರಣ, ಧೂಪ, ದೀಪಗಳಿಂದ ಭಕ್ತಿಯಿಂದ ಪೂಜಿಸಬೇಕು.

ತದಗ್ರೇ ಶುದ್ಧಚಿತ್ತೇನ ಕರ್ತವ್ಯೋ ನಿಯಮಸ್ತದಾ ।
ಅಸಮಾಪ್ತಿ ಯಥಾಶಕ್ತ್ಯಾ ಧಾರಣೀಯಸ್ಸುಯತ್ನತಃ ॥೬೨॥

೬೨ ಹಾಗೆ ಪೂಜಿಸಿದ ನಂತರ ಪುರಾಣಿಕರ ಮುಂದೆ ಪರಿಶುದ್ಧವಾದ ಮನಸ್ಸಿನಿಂದ ನಾನು ಪುರಾಣ ಮುಗಿಯುವವರೆವಿಗೂ ಪ್ರಯತ್ನಪೂರ್ವಕ ನಿಯಮದಿಂದಿರುತ್ತೇನೆ, ಎಂದು ನಿಯಮವನ್ನು ಮಾಡಿಕೊಳ್ಳಬೇಕು.

ವ್ಯಾಸರೂಪ ಪ್ರಭೋಧಾಗ್ರ್ಯ ಶಿವಶಾಸ್ತ್ರವಿಶಾರದೇ ।
ಏತತ್ಕಥಾಪ್ರಕಾಶೇನ ಮದಜ್ಞಾನಂ ವಿನಾಶಾಯ ॥೬೩॥

೬೩ ನಂತರ ಪುರಾಣಿಕನನ್ನು ಈ ಮುಂದೆ ಹೇಳುವ ರೀತಿ ಪ್ರಾರ್ಥಿಸಬೇಕು. ಎಲೈ ವ್ಯಾಸಸ್ವರೂಪಿಯಾದ ಪುರಾಣಿಕನೇ ನೀನು ವಿಶೇಷವುಳ್ಳ ಜ್ಞಾನಿಯು, ಶಿವಶಾಸ್ತ್ರವನ್ನು

ಚೆನ್ನಾಗಿ ತಿಳಿದವನಾಗಿರುವೆ. ಆದ್ದರಿಂದ ಈ ಪರಮಪವಿತ್ರವಾದ ಶಿವಕಥಾ ಪ್ರಕಾಶುದಿಂದ ನನ್ನ ಅಜ್ಞಾನುವನ್ನು ವಿಶೇಷವಾಗಿ ನಾಶಮಾಡು.

ವಿ.ಸೂ.ಈ ಮೇಲಿನ ಶ್ಲೋಕದಲ್ಲಿ ಕಥಾಪ್ರಕಾಶೇನು ಎಂದರೆ ಕಥೆಯನ್ನು ತಿಳಿಸುವಿಕೆಯಿಂದ ಮದಜ್ಞಾನಂ ಎಂದರೆ ನನ್ನ ಅಜ್ಞಾನುವನ್ನು ಹೋಗಲಾಡಿಸು ಎಂದು ಹೇಳಿದ್ದಾರೆ. ವಿಶೇಷವೆಂದರೆ ಸಂಸ್ಕೃತ ಭಾಷೆಯ ಎಲ್ಲಾ ಶಾಸ್ತ್ರಗಳೂ, ವಿಶೇಷವಾಗಿ ಅಲಂಕಾರ ಶಾಸ್ತ್ರದಲ್ಲಿ ಸಹ ಜ್ಞಾನು ಎಂಬುದು ಬಿಳಿಯ ಬಣ್ಣ. ಬೆಳಕು ಎಂಬ ಅರ್ಥ ಅಜ್ಞಾನುವೆಂಬುದು ಕತ್ತಲೆ, ಕಪ್ಪು ಎಂದು ವಿವರಿಸಿದ್ದಾರೆ. ಇಲ್ಲಿ ನನ್ನಲ್ಲಿರುವ ಅಜ್ಞಾನು ಎಂಬುದು ಕತ್ತಲೆ, ಅಂತಹ ಕತ್ತಲೆಯನ್ನು ಹೋಗಲಾಡಿಸುವ ಬೆಳಕೆಂದರೆ ಶಿವಕಥೆಯೆಂಬ ಬೆಳಕು ಎಂದರ್ಥ. ಅಂದರೆ ಸತ್ಕಥಾಶ್ರವಣದಿಂದ ಮನುಷ್ಯರ ದೇಹ, ಮನಸ್ಸುಗಳು ನಿರ್ಮಲಭಾವ ಪಡೆಯುತ್ತದೆ ಎಂದರ್ಥ.

ಉದಾತ ಅಜ್ಞಾನ ತಿಮಿರಾಂಧಸ್ಯ ಜ್ಞಾನಾಂಜನಶಲಾಕಯಾ ಇತ್ಯಾದಿ ಅನೇಕ ಉದಾಹರಣೆಗಳು ಸಿಗುತ್ತವೆ.

ವರಣಂ ಪಂಚವಿಪ್ರಾಣಾಂ ಕಾರ್ಯಂ ವೈಕಸ್ಯ ಭಕ್ತಿತಃ ।
ಶಿವಪಂಚಾರ್ಣಮಂತ್ರಸ್ಯ ಜಪಃ ಕಾರ್ಯಶ್ಚ ತೈಸ್ಸದಾ ॥೬೪॥

೬೪ ಅನಂತರ ಐದು ಜನ ಅಥವಾ ಒಬ್ಬರನ್ನಾದರೂ ಕರೆದು ಸತ್ಕರಿಸಿ ಅವರಿಗೆ ಶಿವಪಂಚಾಕ್ಷರೀ ಜಪ ಮಾಡಲು ವರಣ ಕೊಡಬೇಕು, ಎಂದರೆ ಮಂತ್ರ ಪೂರ್ವಕ ಅವರನ್ನು ಸತ್ಕರಿಸಿ ಜಪಿಸಲು ನಮ್ಮ ಬದಲಾಗಿ ಅವರು ಪ್ರಾರ್ಥಿಸಬೇಕು.

ಇತ್ಯುಕ್ತಸ್ತೇ ಮುನೇ ಭಕ್ತ್ಯಾ ಕಥಾಶ್ರವಣಸದ್ವಿಧಿಃ ।
ಶ್ರೋತ್ರ್ಯಾಣಾಂ ಚೈವ ಭಕ್ತಾನಾಂ ಕಿಮನ್ಯಚ್ಛ್ರೋತುಮಿಚ್ಛಸಿ ॥೬೫॥

೬೫ ಎಲೈ ಶೌನಕನೇ ಈ ರೀತಿಯಾಗಿ ಕೇಳುವವನ, ಹೇಳುವವನ ಪುರಾಣವನ್ನು ಕ್ರಮವನ್ನು ತಿಳಿಸಿರುವೆನು. ಮತ್ತೇನನ್ನು ಕೇಳಬೇಕೆಂದಿರುವಿ ಕೇಳು, ಎಂದು ಸೂತರು ಹೇಳಿದರು. ಇತಿ ಶ್ರೀ ಸ್ಕಾಂದಪುರಾಣೇ ಶಿವಪುರಾಣಮಾತ್ಮ್ಯೇ ಶ್ರವಣವಿಧಿವರ್ಣನಂ ನಾಮ ಷಷ್ಠೋಽಧ್ಯಾಯಃ

ಇಲ್ಲಿಗೆ ಶ್ರೀ ಸ್ಕಾಂದ ಪುರಾಣದಲ್ಲಿ ಶಿವಪುರಾಣ ಮಹಾತ್ಮೆಯಲ್ಲಿ ಶ್ರವಣವಿಧಿಯೆಂಬ ಆರನೇ ಅಧ್ಯಾಯವು ಮುಗಿದುದು.

|| ಶ್ರೀಃ ||

|| ಅಥ ಶಿವಪುರಾಣ ಮಾಹಾತ್ಮ್ಯೇ ||

# ಸಪ್ತಮೋಧ್ಯಾಯಃ

|| ಶೌನಕ ಉವಾಚ ||

ಸೂತ ಸೂತ ಮಹಾಪ್ರಾಜ್ಞ ಧನ್ಯಸ್ತ್ವಂ ಶೈವಪುಂಗವ ।
ಶ್ರಾವಿಶೇಯಂ ಕಥಾಸ್ಮಾಕಮದ್ಭುತೇಯಂ ಶುಭಾವಹಾ ||೧||

ಶೌನಕರು ಹೇಳುತ್ತಾರೆ

೧ ಎಲೈ ಸೂತ ಮಹರ್ಷಿಯೇ ನೀನು ಶೈವರಲ್ಲಿ ಶ್ರೇಷ್ಠನು. ಅತ್ಯಂತ ಬುದ್ಧಿವಂತನು, ನೀನೇ ಶ್ರೇಷ್ಠನು, ಧನ್ಯನು, ಶುಭಕರವೂ ಅತ್ಯದ್ಭುತವಾದುದೂ ಆದ ಈ ಶಿವಕಥೆಯನ್ನು ನಮಗೆ ಹೇಳಿದ್ದೀಯೆ.

ಪುಂಸಾಂ ಶಿವಪುರಾಣಸ್ಯ ಶ್ರವಣಂ ವ್ರತಿನಾಂ ಮುನೆ ।
ಸರ್ವಲೋಕಹಿತಾರ್ಥಾಯ ದಯಯಾ ನಿಯಮಂ ವದ ||೨||

೨ ಶಿವಪುರಾಣವನ್ನು ಕೇಳುವ ಇಚ್ಛೆಯುಳ್ಳ ಜನರಿಗೆ, ಸರ್ವಲೋಕಗಳ ಹಿತಕ್ಕಾಗಿಯೂ ನನ್ನ ಮೇಲೆ ದಯೆಉಳ್ಳವನಾಗಿ, ಈ ಪುರಾಣ ಶ್ರವಣದ ನಿಯಮ, ವ್ರತಗಳನ್ನು ತಿಳಿಸು.

|| ಸೂತ ಉವಾಚ ||

ನಿಯಮಂ ಶೃಣು ಸದ್ಭಕ್ತ್ಯಾ ಪುಂಸಾಂ ತೇಷಾಂ ಚ ಶೌನಕ ।
ನಿಯಮಾತ್ ಸತ್ಕಥಾಂ ಶ್ರುತ್ವಾ ನಿರ್ವಿಘ್ನ ಫಲಮುತ್ತಮಂ ||೩||

ಸೂತ ಮುನಿಗಳು ಹೇಳುತ್ತಾರೆ

೩ ಎಲೈ ಶೌನಕ ಮುನಿಯೇ ಮನುಷ್ಯರು ಶಿವಪುರಾಣದ ಶ್ರವಣ ಮಾಡಬೇಕಾದರೆ ಇರಬೇಕಾದ ನಿಯಮವನ್ನು ಹೇಳುತ್ತೇನೆ, ಕೇಳು. ಭಕ್ತಿಯಿಂದ ಈಗ ನಾನು ಹೇಳುವುದನ್ನು ಕೇಳು. ನಿಯಮದಿಂದ ಈ ಸತ್ಕಥೆಯನ್ನು ಕೇಳಿದ್ದೇ. ಆದರೆ ಉತ್ತಮವಾದ ಫಲವನ್ನು ಯಾವ ತೊಡರಿಲ್ಲದೇ ಹೊಂದುವನು.

ಪುಂಸಾಂ ದೀಕ್ಷಾವಿಹೀನಾನಾಂ ನಾಧಿಕಾರಃ ಕಥಾಶ್ರವೇ ।
ಶ್ರೋತುಕಾಮೈರತೋ ವಕ್ತುರ್ದೀಕ್ಷಾ ಗ್ರಾಹ್ಯಾ ಚ ತೈರ್ಮುನೇ ॥೪॥

೪ ದೀಕ್ಷಾ ಹೀನರಾದ ಮನುಜರಿಗೆ ಕಥಾಶ್ರವಣದಲ್ಲಿ ಅಧಿಕಾರವಿರುವುದಿಲ್ಲ. ಕೇಳಲಿಚ್ಛೆಯುಳ್ಳ ಮನುಷ್ಯರು ಪುರಾಣ ಪಠನ ಮಾಡುವವರಿಂದ ದೀಕ್ಷೆಯನ್ನು ಪಡೆಯಬೇಕು.

ಬ್ರಹ್ಮಚರ್ಯಮಧಸ್ಸುಪ್ತಿಃ ಪತ್ರಾವಳ್ಯಾಂ ಚ ಭೋ ।
ಕಥಾಸಮಾಪ್ತೌ ಭುಕ್ತಿಂ ಕುರ್ಯಾನ್ನಿತ್ಯಂ ಕಥಾವ್ರತೀ ॥೫॥

೫ ಪುರಾಣವನ್ನು ಕೇಳುವವರು ಈ ಮುಂದೆ ಹೇಳುವ ನಿಯಮವನ್ನು ಪಾಲಿಸಬೇಕು. ಬ್ರಹ್ಮಚರ್ಯವ್ರತದಲ್ಲಿರಬೇಕು. ಹಾಸಿಗೆ ಮುಂತಾದುವುಗಳ ಮೇಲೆ ಮಲಗದೇ ನೆಲದ ಮೇಲೆ ಮಲಗಬೇಕು. ಎಲೆಯಲ್ಲಿ ಊಟ ಮಾಡಬೇಕು. ಕಥಾ ಸಮಾಪ್ತಿಯಾದ ಮೇಲೆ ಊಟ ಮಾಡಬೇಕು. ಕಥಾ ಸಮಾಪ್ತಿಗೆ ಮುಂಚೆ ಊಟಮಾಡಬಾರದು.

ಅಸಮಾಪ್ತಪುರಾಣಂ ಹಿ ಸಮುಪೋಷ್ಯ ಸುಶಕ್ತಿಮಾನ್ ।
ಶೃಣುಯಾದ್ಭಕ್ತಿತಃ ಶುದ್ಧಃ ಪುರಾಣಂ ಶೈವಮುತ್ತಮಂ ॥೬॥

೬ ಪುರಾಣ ಮುಗಿಯುವವರೆಗೂ ಪ್ರತಿ ದಿನ ಸಾಧ್ಯವಾದರೆ ಉಪವಾಸವಿರಬೇಕು. ಭಕ್ತಿ, ಶ್ರದ್ಧೆಗಳಿಂದ ಶುದ್ಧನಾಗಿ ಉತ್ತಮವಾದ ಶಿವಪುರಾಣವನ್ನು ಕೇಳಬೇಕು.

ಘೃತಪಾನಂ ಪಯಃಪಾನಂ ಕೃತ್ವಾ ವಾ ಶೃಣುಯಾತ್ಸುಖಂ ।
ಫಲಾಹಾರೇಣ ವಾ ಶ್ರಾವ್ಯಮೇಕಭುಕ್ತಂ ವಾ ಹಿ ತತ್ ॥೭॥

೭ ಈ ರೀತಿ ಉಪವಾಸ ಮಾಡಲು ಸಾಧ್ಯವಿಲ್ಲವಾದರೆ ಹಾಲನ್ನಾಗಲೀ, ತುಪ್ಪವನ್ನಾಗಲೀ ಸೇವಿಸಿ ಪುರಾಣ ಶ್ರವಣ ಮಾಡಬಹುದು. ಸಾಧ್ಯವಿಲ್ಲವಾದರೆ ಹಣ್ಣು ಸೇವಿಸಿ ಅದಕ್ಕೂ ಅಸಾಧ್ಯವೆಂದಾದರೆ ಒಂದು ವೇಳೆ ಊಟ ಮಾಡಿ ಪುರಾಣ ಶ್ರವಣ ಮಾಡಬಹುದು.

ಏಕವಾರಂ ಹವಿಷ್ಯಾನ್ನಂ ಭುಂಜ್ಯಾದೇತ್ಕಥಾವ್ರತೀ ।
ಸುಖಸಾಧ್ಯಂ ಯಥಾ ಸ್ಯಾತ್ತಚ್ಛ್ರವಣಂ ಕಾರ್ಯಮೇವ ಚ ॥೮॥

೮ ಒಂದು ಬಾರಿ ಹವಿಷ್ಯಾನ್ನವನ್ನು ಊಟ ಮಾಡಿ ಪುರಾಣ ಕೇಳಬಹುದು. ಮತ್ತು ಸುಖವಾಗಿ ಪುರಾಣ ಕೇಳಲು ಸಾಧ್ಯವಾಗುವಷ್ಟು ಮಾತ್ರ ಆಹಾರ ಸೇವಿಸಬಹುದು.

ವಿ.ಸೂ. ಹವಿಷ್ಯಾನ್ನಂ ಎಂದರೆ ದೇವರ ಕಾರ್ಯಕ್ಕಾಗಿ ಶಾಸ್ತ್ರೋಕ್ತ ರೀತಿಯಿಂದ ಮಂತ್ರೋಚ್ಚಾರಣ ಪೂರ್ವಕ ಅನ್ನವನ್ನು ತಯಾರಿಸುವುದು. ಅಂದರೆ ದೇವತೋದ್ದೇಶದಿಂದ ಹಾಲು ಅಥವಾ ತುಪ್ಪ ಬೆರೆಸಿ ಬೇಯಿಸಿದ ಅನ್ನ, ಅಂದರೆ ತನಗಾಗಿ ಎಂದು ಆಹಾರ ತಯಾರಿಸಬಾರದು ದೇವರಿಗೆಂದು ತಯಾರಿಸಿ ಪರಮಾತ್ಮನಿಗೆ ಅರ್ಪಿಸಿ ನಂತರ ಪ್ರಸಾದವೆಂದು ತಿಳಿದು ಭಕ್ತಿಯಿಂದ ಭುಂಜಿಸಬೇಕು. ಅಮರ ಕೋಶಕಾರರು ಹಾಗೆ ಹೇಳಿದ್ದಾರೆ. ಹವ್ಯಕವ್ಯೇ ದೇವಪುತ್ರ್ಯೇಪ ಎಂದರೆ ದೇವತೋದ್ದೇಶದಿಂದ ತಯಾರಾದ್ದಕ್ಕೆ ಹವ್ಯ ಅಥವಾ ಹವಿಸ್ಸು ಎಂದು ಹೆಸರು. ಪಿತೃದೇವತೆಗಳ ಉದ್ದೇಶದಿಂದ ತಯಾರಾದದ್ದಕ್ಕೆ ಹವ್ಯ ಎಂದು ಹೆಸರು.

ಭೋಜನಂ ಸುಕರಂ ಮನ್ಯೇ ಕಥಾಸು ಶ್ರವಣಪದಂ ।
ನೋಪವಾಸೋ ವರಶ್ಚೇತ್ಸ್ಯಾತ್ಕಥಾಶ್ರವಣವಿಘ್ನಕೃತ್ ॥೯॥

೯ ಉಪವಾಸಕ್ಕೆ ಅಶಕ್ತನಾದವನು ಉಪವಾಸವಿದ್ದು ಪುರಾಣ ಶ್ರವಣಕ್ಕೆ ತೊಂದರೆ ಮಾಡಿಕೊಳ್ಳುವುದಕ್ಕಿಂತ ಊಟಮಾಡುವುದೇ ಒಳ್ಳೆಯದು.

ಗರಿಷ್ಠಂ ದ್ವಿದಲಂ ದಗ್ಧಂ ನಿಷ್ಪಾವಾಂಶ್ಚ ಮಸೂರಿಕಾಂ ।
ಭಾವದುಷ್ಟಂ ಪರ್ಯುಷಿತಂ ಜಗ್ಧ್ವಾ ನಿತ್ಯಂ ಕಥಾವ್ರತೀ ॥೧೦॥

೧೦ ಪುರಾಣವನ್ನು ಕೇಳುವವರು ಈ ಮುಂದೆ ತಿಳಿಸುವ ಧಾನ್ಯಾದಿಗಳನ್ನು ಉಪಯೋಗಿಸಬಾರದು. ಬೇಳೆಗಳು, ಅಂದರೆ ಅವರೆ, ಕಾಡು ಕಡಲೆ, ಹಾಗೇ ಭಾವನೆಗಳನ್ನು ವ್ಯತ್ಯಾಸಗೊಳಿಸುವ ದುಷ್ಟಕರವಾದ ಆಹಾರ, ತಂಗಳು ಪದಾರ್ಥ, ಇಂತಹವನ್ನು ಕಥಾವ್ರತಿಯಾದವನು ಉಪಯೋಗಿಸಬಾರದು.

ವಾರ್ತಾಕಂ ಚ ಕಲಿಂದಂ ಚ ಪಿಚಂಡಂ ಮೂಲಕಂ ತಥಾ ।
ಕೂಷ್ಮಾಂಡಂ ನಾಲಿಕೇಶಂ ಚ ಮೂಲಂ ಜಗ್ಧ್ವಾ ಕಥಾವ್ರತೀ ೯ತಿಳಿ೨ ॥೧೧॥

೧೧ ಹಾಗೇ ಬದನೆಕಾಯಿ, ಕೊಡಸೇಹಣ್ಣು, ಸೋರೇಕಾಯಿ, ಮೂಲಂಗಿ, ಕುಂಬಳಕಾಯಿ, ತೆಂಗಿನಕಾಯಿ, ಇಂತಹ ತರಕಾರಿಗಳನ್ನು ಉಪಯೋಗಿಸಬಾರದು.

ಪಲಾಂಡುಂ ಲತುನಂ ಹಿಂಗುಂ ಗೃಂಜನಂಮಾದಕಂ ಹಿ ತತ್ |
ವಸ್ತೂನ್ಯಾಮಿಷಸಂಜ್ಞಾನಿ ವರ್ಜಯೇದ್ಯಃ ಕಥಾವ್ರತೀ ||೧೨||

೧೨ ಈರುಳ್ಳಿ, ಬೆಳ್ಳುಳ್ಳಿ, ಇಂಗು ಗಾಂಜಾಂ ಮೊದಲಾದ ಮಾಧಕ ಪದಾರ್ಥಗಳನ್ನೂ ಆಸೆಯುಂಟಾಗುವ ಪದಾರ್ಥಗಳನ್ನೂ ವ್ರತಿಯಾದವನ್ನು ವರ್ಜ್ಯಮಾಡಬೇಕು.

ಕಾಮಾದಿಷಡ್ವಿಕಾರಂ ಚ ದ್ವಿಜಾನಾಂ ಚ ವಿನಿಂದನಂ |
ಪತಿವ್ರತಾಸತಾಂ ನಿಂದಾಂ ವರ್ಜಯೇದ್ಯಃ ಕಥಾವ್ರತೀ ||೧೩||

೧೩ ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯವೆಂಬ ಆಂತರಿಕ ಶತ್ರುಗಳನ್ನು ಜಯಿಸಿರಬೇಕು. ಅಂದರೆ ನಮ್ಮ ಮನಸ್ಸಿನಲ್ಲಿ ಇವುಗಳು ಸೇರದೆ ಇರುವ ರೀತಿ ನಾವಿರಬೇಕು. ಹಾಗೇ ಬ್ರಹ್ಮ, ಕ್ಷತ್ರಿಯ, ವೈಶ್ಯರನ್ನೂ ಪತಿವ್ರತೆಯರನ್ನೂ ಸಜ್ಜನರನ್ನೂ ನಿಂದಿಸಬಾರದು.

ರಜಸ್ವಲಾಂ ನ ಪಶ್ಯೇಚ್ಚ ಪತಿತಾನ್ನ ವದೇತ್ಕಥಾಂ |
ದ್ವಿಜದ್ವಿಷೋ ವೇದವರ್ಜ್ಯಾನ್ನ ವದೇದ್ಯಃ ಕಥಾವ್ರತೀ ||೧೪||

೧೪ ಪುರಾಣ ಕೇಳುವ ಮನುಷ್ಯರು ರಜಸ್ವಲಾ ಹೊರಗಾದ ಸ್ತ್ರೀಯರನ್ನು ನೋಡಬಾರದು. ಪತಿತರಾದವರೊಡನೆ ಮಾತನಾಡಬಾರದು. ಬ್ರಹ್ಮದ್ವೇಷಿಗಳ ಮತ್ತು ವೇದಮಾರ್ಗರಹಿತರಾದವರ ಸಹವಾಸವನ್ನೂ ಬಿಡಬೇಕು.

ಸತ್ಯಂ ಶೌಚಂ ದಯಾಂ ಮೌನಮಾರ್ಜವಂ ವಿನಯಂ ತಥಾ |
ಔದಾರ್ಯಂ ಮನಸಶ್ಚೈವ ಕುರ್ಯಾನ್ನಿತ್ಯಂ ಕಥಾವ್ರತೀ ||೧೫||

೧೫ ಪುರಾಣ ಕೇಳುವವನು ಸತ್ಯವಾದಿಯೂ, ಶೌಚಪರನೂ, ದಯಾಬುದ್ಧಿ ಉಳ್ಳವನೂ, ಮೌನಿಯೂ, ಮೃದುಸ್ವಭಾವದವನೂ, ವಿನಯಶಾಲಿಯೂ, ಉದಾರಮನಸ್ಸಿನವನೂ, ಆಗಿರಬೇಕು.

ವಿ.ಸೂ. ಶೌಚು ಅಗಸ್ತ್ಯ ಸಂಹಿತೆಯಲ್ಲಿ ದೇಹದ ನವರಂಧ್ರಗಳಿಂದ ರೋಮ ಬೆಳೆಯುವ ಜಾಗಗಳಿಂದ ಬರುವ ಕೊಳೆಯನ್ನು ಮಲ ಎಂದೂ ಅದು ಬರುವ ಸ್ಥಳವನ್ನು ಶುಚಿಗಳಿಸುವುದೇ ಶೌಚವೆಂದೂ ಹೇಳಿದ್ದಾರೆ.

ಶ್ಲೋ॥ ನಿರ್ಗಕಂ ನವರಂಧ್ರೇಭ್ಯಃ ರೋಮಕೂಪೇಭ್ಯ ಏವಚ
ಮಲವದಂತಿ ತದ್ವಾರ ಕ್ಷಾಳನಂ ಶೌಚಮುಚ್ಯತೇಲ

ನವರಂಧ್ರಗಳು ೩ ಕಣ್ಣು, ಕಿವಿಗಳೆರಡು, ಮೂಗಿನ ಹೊಳ್ಳೆ ಎರಡು, ಬಾಯಿ, ಮೂತ್ರ ಜನಕಾಂಗ, ಮಲದ್ವಾರ ಒಟ್ಟು ಒಂಭತ್ತು ರಂದ್ರ ತೂತುಗಳು.

ನಿಷ್ಕಾಮಶ್ಚ ಸಕಾಮಶ್ಚ ನಿಯಮಾಚ್ಛೃಣುಯಾತ್ಕಥಾಂ ।
ಸಕಾಮಃ ಕಾಮಮಾಪ್ನೋತಿ ನಿಷ್ಕಾಮೋ ಮೋಕ್ಷಮಾಪ್ನುಯಾತ್ ॥೧೬॥

೧೬ ಈ ಮೇಲೆ ಹೇಳಿದ ನಿಯಮಗಳನ್ನು ಪಾಲಿಸುತ್ತಾ ಫಲಾಪೇಕ್ಷೆ ಉಳ್ಳವನಾಗಿ, ಅಥವಾ ಫಲಾಪೇಕ್ಷೆ ಇಲ್ಲದವನಾಗಿಯಾಗಲೀ ಇರಬಹುದು. ಫಲಾಪೇಕ್ಷಿಯು ತನ್ನ ಇಷ್ಟಾರ್ಥವನ್ನು ಪಡೆಯುವನು, ಫಲಾಪೇಕ್ಷೆ ಇಲ್ಲದವನು ಮೋಕ್ಷವನ್ನೂ ಹೊಂದುವನು.

ದರಿದ್ರಶ್ಚ ಕ್ಷಯಿ ರೋಗೀ ಪಾಪೀ ನಿರ್ಭಾಗ್ಯ ಏವ ಚ ।
ಅನಪತ್ಯೋऽಪಿ ಪುರುಷಃ ಶೃಣುಯಾತ್ಸತ್ಕಥಾಮಿಮಾಂ ॥೧೭॥

೧೭ ದರಿದ್ರನೂ, ಕ್ಷಯರೋಗಿಯೂ, ಪಾಪಿಯೂ, ನಿರ್ಭಾಗ್ಯನೂ, ಧನಹೀನನೂ ಮಕ್ಕಳಿಲ್ಲದವನೂ, ಈ ಶ್ರೇಷ್ಠವಾದ ಶಿವಕಥೆಯನ್ನು ಕೇಳಬಹುದು.

ಕಾಕವಂಧ್ಯಾದಯಸ್ಸಪ್ತವಿಧಾ ಅಪಿ ಖಲಸ್ತ್ರಿಯಃ ।
ಸ್ತ್ರಂದ್ಯಭರ್ಾ ಚ ಯಾ ನಾರೀ ತಾಧ್ಯಾಂ ಶ್ರಾವ್ಯಾ ಕಥಾಪರೀ ॥೧೮॥

೧೮ ಕಾಕವಂಧ್ಯಾ ಮೋದಲಾದ ಏಳು ವಿಧವಾದ ದುಷ್ಟ ಸ್ತ್ರೀಯರೂ, ಗರ್ಭಸ್ರಾವವುಳ್ಳ ಸ್ತ್ರೀಯರೂ ಈ ಶಿವಕಥೆಯನ್ನು ಕೇಳಬಹುದು.

ಸರ್ವೇಷಾಂ ಶ್ರವಣಂ ಕಾರ್ಯಂ ಸ್ತ್ರೀಭಿಃ ಪುಂಭಿಶ್ಚ ಯತ್ನತಃ ।
ಏತಚ್ಛಿವಪುರಾಣಸ್ಯ ವಿಧಿನಾ ಚ ಕಥಾಂ ಮುನೇ ॥೧೯॥

೧೯ ಎಲ್ಲಾ ಸ್ತ್ರೀ, ಪುರುಷರೂ, ಪ್ರಯತ್ನಪೂರ್ವಕವಾಗಿ ಈ ಶಿವಪುರಾಣವನ್ನು ವಿಧಿವತ್ತಾಗಿ ಕೇಳಬಹುದು.

ಏತಚ್ಛಿವಪುರಾಣಸ್ಯ ಪಾರಾಯಣದಿನಾನಿ ವೈ ।
ಅತ್ಯುತ್ತಮಾನಿ ಬೋಧ್ಯಾನಿ ಕೋಟಿಯಜ್ಞಸಮಾನಿ ಚ ॥೨೦॥

೨೦ ಈ ಶಿವಪುರಾಣವನ್ನು ಪಾರಾಯಣ, ಶ್ರವಣ ಮಾಡುವ ದಿನಗಳು ಅತ್ಯುತ್ತಮವೆಂದು ತಿಳಿಯಬೇಕು ಮತ್ತು ಕೋಟಿಯಜ್ಞಗಳಿಗೆ ಸಮವೆಂದು ತಿಳಿಯಬೇಕು.

**ಏತೇಷು ವಿಧಿನಾ ದತ್ತಂ ಯದಲ್ಪಮಪಿ ವಸ್ತು ಹಿ ।**
**ದಿವಸೇಷು ವರಿಷ್ಠೇಷು ತದಕ್ಷಯ್ಯಫಲಂ ಲಭೇತ್ ॥೨೧॥**

೨೧ ಈ ಪುರಾಣ ಶ್ರವಣ ದಿನಗಳಲ್ಲಿ ಕಡಿಮೆಯಾದರೂ ಶಾಸ್ತ್ರೋಕ್ತವಾಗಿ ದಾನ ಮಾಡಿದ್ದು ನಾಶರಹಿತವಾದ ಅಂದರೆ ಅನಂತವಾದ ಫಲವನ್ನು ನೀಡುವಂತಹದ್ದಾಗಿರುತ್ತದೆ.

**ಏವಂ ಕೃತ್ವಾ ವರ್ತವಿಧಿಂ ಶ್ರುತ್ವೇಮಾಂ ಪರಮಾಂ ಕಥಾಂ ।**
**ಪರಾನಂದಯುತಃ ಶ್ರೀಮಾನುದ್ಯಾಪನಮಥಾಚರೇತ್ ॥೨೨॥**

೨೨ ಈ ರೀತಿಯಾಗಿ ಶ್ರೇಷ್ಠವಾದ ಈ ಕಥಾ ಶ್ರವಣವನ್ನು ಮಾಡಿ ವಿಧಿಯನ್ನು ಅನುಸರಿಸಿ ಅತ್ಯಂತ ಆನಂದಯುತನಾಗಿ ಉದ್ಯಾಪನೆಯನ್ನು ಮಾಡಬೇಕು.

**ಏತದುದ್ಯಾಪನವಿಧಿಶ್ಚತುರ್ದಶ್ಯಾಸ್ಸಮೋ ಮತಃ ।**
**ಕಾರ್ಯಸ್ತದ್ವದ್ಧನಾಢ್ಯೈಶ್ಚ ತದುಕ್ತಫಲಕಾಂಕ್ಷಿಭಿಃ ॥೨೩॥**

೨೩ ಈ ಉದ್ಯಾಪನೆಯನ್ನು ಚತುರ್ದಶಿ ಉದ್ಯಾಪನೆಯಂತೆಯೇ ಮಾಡುವುದು ಈ ವಿಧಿಯನ್ನು ಅನುಸರಿಸಿ ಉದ್ಯಾಪನಾ ಫಲಾಕಾಂಕ್ಷಿಗಳಾದ ಹಣವಂತರು ಮಾಡಬಹುದು.

**ಅಕಿಂಚನೇಷು ಭಕ್ತೇಷು ಪ್ರಾಯೋ ನೋದ್ಯಾಪನಗ್ರಹಃ ।**
**ಶ್ರವಣೇನೈವ ಪೂತಾಸ್ತೇ ನಿಷ್ಕಾಮಾಶ್ಶಾಂಭವಾ ಮತಾಃ ॥೨೪॥**

೨೪ ಬಡವರಾದವರು, ಭಕ್ತರು ಉದ್ಯಾಪನೆ ಮಾಡಬೇಕಾಗಿಲ್ಲ, ಅಂದರೆ ಮಾಡದಿದ್ದಲ್ಲಿ ತೊಂದರೆ ಇಲ್ಲ, ಸಾಧ್ಯವಿದ್ದಲ್ಲಿ ಮಾಡಬಹುದು. ಏಕೆಂದರೆ ಯಾವ ಫಲಾಪೇಕ್ಷೆಯಲ್ಲದೇ ಭಕ್ತಿಯಿಂದ ಶಿವ ಪುರಾಣ ಕಥೆಯನ್ನು ಕೇಳುವ ಶಿವಭಕ್ತರು ಕೇಳುವಿಕೆಯಿಂದಲೇ ಶುದ್ಧರಾಗುತ್ತಾರೆ.

**ಏವಂ ಶಿವಪುರಾಣಸ್ಯ ಪಾರಾಯಣಮಖೋತ್ಸವೇ ।**
**ಸಮಾಪ್ತೇ ಶ್ರೋತೃಭಿರ್ಭಕ್ತ್ಯಾ ಪೂಜಾ ಕಾರ್ಯಾ ಪ್ರಯತ್ನತಃ ॥೨೫॥**

೨೫ ಈ ಶಿವಪುರಾಣದ ಪಾರಾಯಣ ಮಹೋತ್ಸವವು ಪೂರ್ತಿಯಾದ ಮೇಲೆ ಕೇಳಲು ಬಂದವರೆಲ್ಲರೂ ಭಕ್ತಿಯಿಂದ ಶಿವನನ್ನು ಪೂಜಿಸಬೇಕು ಪುಸ್ತಕವನ್ನು.

ಶಿವಪೂಜನವತ್ಸಮ್ಯಕ್ ಪುಸ್ತಕಸ್ಯ ಪುರೋಮುನೇ ।
ಪೂಜಾ ಕಾರ್ಯಾ ಸುವಿಧಿನಾ ವಕ್ತುಶ್ಚ ತದನಂತರಂ ॥೨೬॥

೨೬ ಶಿವಪೂಜಾಕ್ರಮದಂತೆ ಪುಸ್ತಕ ಪೂಜೆಯನ್ನು ಮಾಡಬೇಕು ನಂತರ ಪುರಾಣ ಹೇಳಿದವರನ್ನೂ ಶಾಸ್ತ್ರೋಕ್ತ ರೀತಿಯಿಂದ ಪೂಜಿಸಿ ಗೌರವಿಸಬೇಕು.

ಪುಸ್ತಕಾಚ್ಛಾದನಾರ್ಥಂ ಹಿ ನವೀನಂ ಚಾಸನಂ ಶುಭಂ ।
ಸಮರ್ಚಯೇದ್ದೃಢಂ ದಿವ್ಯಂ ಬಂಧನಾರ್ಥಂ ಚ ಸೂತ್ರಕಂ ॥೨೭॥

೨೭ ಪುಸ್ತಕವನ್ನು ಮುಚ್ಚಲು ಹೊಸದಾದ ಬಟ್ಟೆಯನ್ನೂ, ಆಸನವನ್ನೂ ಗಟ್ಟಿಯಾದ ದಾರವನ್ನು ಪುಸ್ತಕವನ್ನು ಕಟ್ಟಲು ಪೂಜಿಸಬೇಕು.

ಪುರಾಣಾರ್ಥಂ ಪ್ರಯಚ್ಛಂತಿ ಯೇ ಸೂತ್ರಂ ವಸನಂ ನವಂ ।
ಭೋಗಿನೋ ಜ್ಞಾನಸಂಪನ್ನಾಸ್ತೇ ಭವಂತಿ ಭವೇ ಭವೇ ॥೨೮॥

೨೮ ಪುರಾಣಕ್ಕೋಸ್ಕರ ಯಾರು ವಸ್ತ್ರವನ್ನೂ ದಾರವನ್ನೂ ಹೊಸದಾಗಿರುವುದನ್ನು ಕೊಡುತ್ತಾರೋ ಅವರು ಪ್ರತಿಜನ್ಮದಲ್ಲೂ ಭೋಗಿಗಳಾಗಿ ಜ್ಞಾನಸಂಪನ್ನರಾಗುತ್ತಾರೆ.

ವಕ್ತ್ರೇ ದದ್ಯಾನ್ಮಹಾರ್ಹಾಣಿ ವಸೂನಿ ವಿವಿಧಾನಿ ಚ ।
ವಸ್ತ್ರಭೂಷಣಪಾತ್ರಾಣಿ ದಿವ್ಯಂ ಬಹು ವಿಶೇಷತಃ ॥೨೯॥

೨೯ ಪುರಾಣ ಹೇಳುವ ಪುರಾಣಿಕರಿಗೆ ಯಾರು ಬಹಳ ಬೆಲೆಬಾಳುವ ಉತ್ತಮ ವಸ್ತುಗಳನ್ನು ಯಾರು ಕೊಡುತ್ತಾರೋ, ದೇವಯೋಗ್ಯವಾದ ವಸ್ತ್ರ, ಆಭರಣ, ಪಾತ್ರಾದಿಗಳನ್ನು ವಿಶೇಷವಾಗಿ ಯಾರು ಕೊಡುತ್ತಾರೋ.

ಆಸನಾರ್ಥಂ ಪ್ರಯಚ್ಛಂತಿ ಪುರಾಣಸ್ಯ ಚ ಯೇ ನರಾಃ ।
ಕಂಬಲಾಜಿನವಾಸಾಂಸಿ ಮಂಚಂ ಫಲಕಮೇವ ಚ ೀತಿಳಿ ॥೨ ೩॥

೩೦ ಹಾಗೆಯೇ ಪುರಾಣಿಕರ ಆಸನಕ್ಕೋಸ್ಕರ ಯಾವ ಮನುಷ್ಯರು, ಕಂಬಲಾಸನ,

ಕೃಷ್ಣಾಜಿನ ಉತ್ತಮವಾದ ಬಟ್ಟೆಗಳು, ಮಂಚ, ಮಣೆ, ಮುಂತಾದುವನ್ನೂ ಸಹ ನೀಡುತ್ತಾರೋ.

ಸ್ವರ್ಗಲೋಕಂ ಸಮಾಸಾದ್ಯ ಭುಕ್ತ್ವಾ ಭೋಗಾನ್ಯಥೇಪ್ಸಿತಾನ್ |
ಸ್ಥಿತ್ವಾ ಬ್ರಹ್ಮಪದೇ ಕಲ್ಪಂ ಯಾಂತಿ ಶೈವಪದಂ ತತಃ ||೩೧||

೩೧ ಅಂತಹ ಮನುಷ್ಯರು ಸ್ವರ್ಗಲೋಕವನ್ನು ಸೇರಿ ಅಲ್ಲಿ ಅವರವರು ಇಚ್ಛಿಸುವಂತಹ ಸುಖಗಳನ್ನನುಭವಿಸಿ ಒಂದು ಕಲ್ಪ ಕಾಲ ಬ್ರಹ್ಮಪದವಿಯನ್ನು ಹೊಂದಿ, ಅನಂತರ ಶಿವನ ಸ್ಥಾನವನ್ನು ಪಡೆಯುತ್ತಾರೆ.

ಏವಂ ಕೃತ್ವಾ ವಿಧಾನೇನ ಪುಸ್ತಕಸ್ಯ ಪ್ರಪೂಜನಂ |
ವಕ್ತುಶ್ಚ ಭುವಿಶಾರ್ದೂಲ ಮಹೋತ್ಸವಪುರಸ್ಸರಂ ||೩೨||

೩೨ ಈ ರೀತಿ ಮಾಡಿದ ಮೇಲೆ ವಿಧಿವತ್ತಾಗಿ ಪುಸ್ತಕವನ್ನೂ ಸಹ ಮತ್ತೆ ಪೂಜಿಸಿ, ಪುರಾಣಿಕರಿಗೂ ಮುಂಭಾಗದಲ್ಲಿ ಮಹೋತ್ಸವದೊಡನೆ ಅತ್ಯಂತ ವೈಭವದಿಂದ ಎಂದರ್ಥ ಅವರನ್ನು ಪೂಜಿಸಬೇಕು.

ಸಹಾಯಾರ್ಥಂ ಸ್ಥಾಪಿಸತಸ್ಯ ಪಂಡಿತಸ್ಯ ಪ್ರಪೂಜನಂ |
ಕುರ್ಯಾತ್ತದನುಸಾರೇಣ ಕಿಂಚಿದೂನಂ ಧನಾದಿಭಿಃ ||೩೩||

೩೩ ಅನಂತರ ಪುರಾಣಿಕರ ಸಹಾಯಕ್ಕೋಸ್ಕರ ನಿಯಮಿಸಿದ್ದ ಪಂಡಿತರನ್ನೂ ಸಹ ಪುರಾಣಿಕರನ್ನೂ ಸತ್ಕರಿಸಿದಂತೆಯೇ ಸತ್ಕರಿಸಬೇಕು. ಪುರಾಣಿಕರಿಗಿಂತ ಸ್ವಲ್ಪ ಮಾತ್ರ ಕಡಿಮೆಯಾಗಿ ಧನಾದಿಗಳಿಂದ ತೃಪ್ತಿಪಡಿಸಬೇಕು.

ಸಮಾಗತೇಭ್ಯೋ ವಿಪ್ರೇಭ್ಯೋ ದದ್ಯಾದನ್ನಂ ಧನಾದಿಕಂ |
ಮಹೋತ್ಸವಃ ಪ್ರಕರ್ತವ್ಯೋ ಗೀತವಾದ್ಯೈಶ್ಚ ನರ್ತನೈಃ ||೩೪||

೩೪ ಇನ್ನು ಈ ಪುರಾಣ ಶ್ರವಣ ಮಹೋತ್ಸವಕ್ಕಾಗಿ ನಾನಾ ಪ್ರದೇಶದಿಂದ ಬಂದಿರುವ ಬ್ರಾಹ್ಮಣರಿಗೆಲ್ಲಾ ಭೋಜನ ಮಾಡಿಸಿ ಧನಾದಿಗಳಿಂದ ತೃಪ್ತಿಪಡಿಸಬೇಕು. ಸಂಗೀತ, ನೃತ್ಯ, ವಾದ್ಯ ಗೋಷ್ಠಿಗಳನ್ನು ಏರ್ಪಡಿಸಿ ಉತ್ಸಾಹದಿಂದ ಈ ಉತ್ಸವವನ್ನು ಆಚರಿಸಬೇಕು.

ವಿರಕ್ತಶ್ಚ ಭವೇಚ್ಛ್ರೋತಾ ಪರೇಽಹನಿ ವಿಶೇಷತಃ ।
ಗೀತಾ ವಾಚ್ಯಾ ಶಿವೇನೋಕ್ತಾ ರಾಮಚಂದ್ರಾಯ ಯಾ ಮುನೇ ॥೩೫॥

೨೫ ಸಂಗೀತ, ನೃತ್ಯ, ವಾದ್ಯಗಳಲ್ಲಿ ಆಸಕ್ತರಲ್ಲದವರಿದ್ದರೆ ಮಾರನೆಯ ದಿನ ಶಿವನಿಂದ ಶ್ರೀರಾಮಚಂದ್ರನಿಗೆ ಉಪದೇಶಿಸಲ್ಪಟ್ಟ ಶಿವಗೀತೆಯನ್ನು ವಾಚನ ಮಾಡಿಸಬೇಕು.

ಗೃಹಸ್ಥಶ್ಚೇದ್ಭವೇಚ್ಛ್ರೋತಾ ಕರ್ತವ್ಯಸ್ತೇನ ಧೀಮತಾ ।
ಹೋಮಃ ಶುದ್ಧೇನ ಹವಿಷಾ ಕರ್ಮಣಸ್ತಸ್ಯ ಶಾಂತಯೇ ॥೩೬॥

೩೬ ಪುರಾಣ ಶ್ರವಣ ಮಾಡುವವನು ಗೃಹಸ್ಥನಾದರೆ ಶುದ್ಧ ಹವಿಸ್ಸಿನಿಂದ ಕರ್ಮಶಾಂತಿಗೋಸ್ಕರ ಹೋಮವನ್ನು ಮಾಡಬೇಕು.

ರುದ್ರಸಂಹಿತಯಾ ಹೋಮಃ ಪ್ರತಿಶ್ಲೋಕೇನ ವಾ ಮುನೆ ।
ಗ್ರಾಯತ್ರ್ಯಾಸ್ತನ್ಮಯತ್ವಾಚ್ಚ ಪುರಾಣಸ್ಯಾಸ್ಯ ತತ್ತ್ವತಃ ॥೩೭॥

೩೭ ರುದ್ರ ಸಂಹಿತೆಯ ಹೋಮವಾಗಲೀ, ಶಿವಗಾಯತ್ರಿ ಶಿವಪುರಾಣದ ತತ್ವ ಸ್ವರೂಪವಾದ್ದರಿಂದ ಈ ಪುರಾಣದ ಪ್ರತಿಶ್ಲೋಕದಿಂದಲಾದರೂ ಹೋಮವನ್ನು ಮಾಡಬೇಕು.

ಅಥವಾ ಮೂಲಮಂತ್ರೇಣ ಪಂಚವರ್ಣೇನ ಶೈವತಃ ।
ಹೋಮಶಕ್ತೋ ಬಂಧೋ ಹೋಮ್ಯಹವಿರ್ದದ್ಯಾದ್ದ್ವಿಜಾಯ ತತ್ ॥೩೮॥

೩೮ ಅಥವಾ ಶಿವಪಂಚಾಕ್ಷರೀ ಮೂಲ ಮಂತ್ರದಿಂದ ಹೋಮ ಮಾಡಬಹುದು. ಹೋಮ ಮಾಡಲಶಕ್ತನಾದವನು, ಹೋಮದ್ರವ್ಯ, ಹವಿಸ್ಸುಗಳನ್ನು ಬ್ರಾಹ್ಮಣನಿಗೆ ಕೊಡಬೇಕು. ಆಮೇಲೆ ತಿಳಿಸಿದ ಎಲ್ಲಾ ಕರ್ಮದಲ್ಲೂ ಹೆಚ್ಚು ಕಡಿಮೆಯಾದ ಕರ್ಮವಾಗಿದ್ದರೆ ಅದರ ಶಾಂತಿಗಾಗಿ ಶಿವಸಹಸ್ರನಾಮವನ್ನು ಪಠಿಸಬೇಕು. ಅಥವಾ ಓದಿಸಿ ಕೇಳಬೇಕು.

ತೇನ ಸ್ಯಾತ್ಸಫಲಂ ಸರ್ವಂ ಸಫಲಂ ನಾತ್ರ ಸಂಶಯಃ ।
ಯತೋ ನಾಸ್ತ್ಯಧಿಕಂ ತ್ವಸ್ಮಾತ್ತ್ರೈಲೋಕ್ಯೇ ವಸ್ತು ಕಿಂಚನ ॥೪೦॥

೪೦ ಈ ರೀತಿಯಾಗಿ ಮಾಡುವುದರಿಂದ ಕರ್ಮವು ಒಳ್ಳೆಯ

ಫಲದಾಯಕವಾಗುವುದು. ಖಂಡಿತ ಉತ್ತಮ ಫಲವು ಪ್ರಾಪ್ತವಾಗುವುದು ಇಷ್ಟಾರ್ಥಪ್ರಾಪ್ತಿ ಇದರಲ್ಲಿ ಸಂಶಯವಿಲ್ಲ. ಇದಕ್ಕಿಂತಲೂ ಅಧಿಕವಾದ ವಸ್ತುವು ಮೂರು ಲೋಕಗಳಲ್ಲಿಯೂ ಎಲ್ಲಿಯೂ ಇಲ್ಲ. ಎಂದರೆ ಇದರ ಫಲಪ್ರಾಪ್ತಿಗಿಂದ ಅಧಿಕವಾದುದಿಲ್ಲವೆಂದು ಅರ್ಥವು.

ಏಕಾದಶಮಿತಾನ್ವಿಪ್ರಾನ್ಭೋಜಯೇನ್ಮಧುಪಾಯಸೈಃ ।
ದದ್ಯಾತ್ತೇಭ್ಯೋ ದಕ್ಷಿಣಾಂ ಚ ವ್ರತಪೂರ್ಣತ್ವಸಿದ್ಧಯೇ ॥೪೧॥

೪೧ ನಂತರ ಹನ್ನೊಂದು ಜನ ಬ್ರಾಹ್ಮಣರನ್ನು ಮಧು, ಪಾಯಸ ಮುಂತಾದುವುಗಳೊಡನೆ ಊಟಮಾಡಿಸಿ ಅವರಿಗೆ ವ್ರತಪೂರ್ಣಪ್ರಾಪ್ತಿಗಾಗಿ ದಕ್ಷಿಣೆಯನ್ನು ನೀಡಬೇಕು.

ಶಕ್ತೌ ಫಲತ್ರಯಮಿತಸ್ವರ್ಣೇನ ಸುಂದರಂ ಮುನೇ ।
ಸಿಂದಂ ವಿಧಾಯ ತತ್ರಾಸ್ಯ ಪುರಾಣಸ್ಯ ಶುಭಾಕ್ಷರಂ ॥೪೨॥

೪೨ ಕರ್ತೃವು ಶಕ್ತಿ ಉಳ್ಳವನಾದರೆ ಮೂರು ಫಲ ಪ್ರಮಾಣದ ತೂಕದ ಚಿನ್ನದಿಂದ ಸುಂದರವಾದ ಸಿಂಹವನ್ನು ಮಾಡಿಸಿ ಅದರಲ್ಲಿ ಶಿವಪುರಾಣವೆಂಬ ಶುಭಾಕ್ಷರಗಳನ್ನು ಬರೆದು,

ಲೇಖಿತಂ ಲಿಖಿತಂ ವಾಪಿ ಸಂಸ್ಥಾಪ್ಯ ವಿಧಿನಾ ಪುಮಾ ।
ಸಂಪೂಜ್ಯ ವಾಹನಾದ್ಯೈಶ್ಚ ಹ್ಯುಪಚಾರೈಸ್ಸದಕ್ಷಿಣಾಂ ॥೪೩॥

೪೩ ಅಥವಾ ಬರೆಯಿಸಿ ವಿಧಿವತ್ತಾಗಿ ಸ್ಥಾಪಿಸಿ ವಾಹನಾದ್ಯುಪಚಾರಗಳಿಂದ ಪೂಜಿಸಿ, ದಕ್ಷಿಣಾಸಹಿತವಾಗಿ ಆಚಾರ್ಯನಿಗೆ ದಾನಮಾಡಬೇಕು.

ವಸ್ತ್ರಭೂಷಣಗಂದಾದ್ಯೈಃ ಪೂಜಿತಾಯ ಯತಾತ್ಮನೆ ।
ಆಚಾರ್ಯಾಯ ಸುಧೀರ್ದದ್ಯಾಚ್ಛಿವಸಂತೋಷಹೇತವೇ ॥೪೪॥

೪೪ ವಸ್ತ್ರ, ಆಭರಣ, ಗಂಧಾದಿಗಳಿಂದ ಪೂಜಿಸಿ ಆಚಾರ್ಯನಿಗೆ ಶಿವಪ್ರೀತಿ ಯಾಗಲೆಂದು ಭಾವಿಸ್ಸಿ ದಾನ ಮಾಡಬೇಕು ಮೇಲೆ ಹೇಳಿದ ಚಿನ್ನದ ಸಿಂಹವನ್ನು.

ತೇನ ದಾನಪ್ರಭಾವೇಣ ಪುರಾಣಸ್ಯಾಸ್ಯ ಶೌನಕ ।
ಸಂಪ್ರಾಪ್ಯಾನುಗ್ರಹಂ ಶೈವಂ ಮುಕ್ತಃ ಸ್ಯಾದ್ಭವಬಂಧನಾತ್ ॥೪೫॥

೪೫ ಈ ರೀತಿಯಾದ ದಾನದಿಂದ ಎಲೈ ಶೌನಕನೇ ಈಶ್ವರನ ಪರಮಾನುಗ್ರಹಕ್ಕೆ ಪಾತ್ರನಾಗಿ ಈ ಸಂಸಾರ ಬಂಧನದಿಂದ ಬಿಡಲ್ಪಡುವವನಾಗುತ್ತಾನೆ.

ಏವಂ ಕೃತೇ ವಿಧಾನೇ ಚ ಶ್ರೀಮಚ್ಛಿವಪುರಾಣಕಂ ।
ಸಂಪೂರ್ಣಫಲದಂ ಸ್ಯಾದ್ವೈ ಭುಕ್ತಿಮುಕ್ತಿಪ್ರದಾಯಕಂ ॥೪೬॥

೪೬ ಈ ವಿಧಾನದಿಂದ ಶ್ರೀ ಶಿವಪುರಾಣದ ಶ್ರವಣಾದಿಗಳನ್ನು ಮಾಡಿದ್ದೇ ಆದರೆ ಸಂಪೂರ್ಣ ಫಲಪ್ರಾಪ್ತಿಯಾಗಿ ಈ ಲೋಕದಲ್ಲಿ ಸುಖವನ್ನು ಅನುಭವಿಸಿ ಕೊನೆಗೆ ಮುಕ್ತಿಯನ್ನು ಹೊಂದುತ್ತಾರೆ.

ಇತೀ ತೇ ಕಥಿತಂ ಸರ್ವಂ ಕಿಂ ಭೂಯಃ ಶ್ರೋತುಮಿಚ್ಛಸಿ ।
ಶ್ರೀಮಚ್ಛಿವಪುರಾಣಸ್ಯ ಮಾಹಾತ್ಮ್ಯಂ ಸರ್ವಕಾಮದಂ ॥೪೭॥

೪೭ ಎಲೈ ಶೌನಕನೇ ಸರ್ವಕಾಮನೆಗಳನ್ನು ನೀಡುವಂತಹ ಶ್ರೀ ಶಿವಪುರಾಣ ಮಹಾತ್ಮೆಯು ಪೂರ್ತಿಯಾಗಿ ಈವರೆವಿಗೆ ನನ್ನಿಂದ ಹೇಳಲ್ಪಟ್ಟಿತು. ಮತ್ತೆ ಏನನ್ನು ಕೇಳಲು ಇಷ್ಟಪಡುವೆ.

ಶ್ರೀಮಚ್ಛಿವಪುರಾಣಂ ತು ಪುರಾಣತಿಲಕಂ ಸ್ಮೃತಂ ।
ಮಹಚ್ಛಿವಪ್ರಿಯಂ ರಮ್ಯಂ ಭವರೋಗನಿವಾರಣಂ ॥೪೮॥
ಯೇ ಜನ್ಮಭಾಜಃ ಖಲಂ ಜೀವಲೋಕೇ
ಯೇ ವೈ ಸದಾ ಧ್ಯಾಯಂತಿ ವಿಶ್ವನಾಥಂ।

೪೮ ಈ ಶ್ರೀ ಶಿವಪುರಾಣವು ಪುರಾಣಗಳಲ್ಲಿ ತಿಲಕಪ್ರಾಯವೆಂದು ಹೇಳಲ್ಪಟ್ಟಿದೆ. ಇದು ಈಶ್ವರನಿಗೆ ಅತ್ಯಂತ ಪ್ರಿಯವಾದುದು, ರಮಣಿಯವಾದುದೂ, ಸಂಸಾರವೆಂಬ ರೋಗವನ್ನು ನಿವಾರಿಸುವಂತದೂ ಆಗಿದೆ.

ವಾಣೀ ಗುಣಾನ್ ಸ್ತೌತಿ ಕಥಾಂ ಶೃಣೋತಿ ।
ಶ್ರೋತ್ರೃವರಾಸ್ತೇ ಭವಮುತ್ತರಂತಿ ॥೪೯॥

೪೯ ಯಾರು ಈ ಜೀವಲೋಕದಲ್ಲಿ ಜನ್ಮವೆತ್ತಿ ಸಕಲ ವಿಶ್ವಗಳಿಗೊಡೆಯನಾದ

ಪರಮೇಶ್ವರನನ್ನು ಯಾವಾಗಲೂ ಧ್ಯಾನಮಾಡುವರೋ, ಅಂತಹವರ ಗುಣಗಳ ಸಮೂಹವನ್ನು ಸಾಕ್ಷಾತ್ ಸರಸ್ವತಿಯೇ ಸ್ತುತಿ ಮಾಡುತ್ತಾಳೆ. ಯಾರು ಈ ಪುಣ್ಯಕರವಾದ ಕಥೆಯನ್ನು ಕೇಳುತ್ತಾರೋ ಅಂತಹ ಶ್ರೋತೃಶ್ರೇಷ್ಠರು ಸಂಸಾರ ಬಂಧನವನ್ನು ದಾಟುತ್ತಾರೆ.

ಸಕಲಗುಣವಿಭೇದೈರ್ನಿತ್ಯಮಸ್ಪಷ್ಟರೂಪಂ
ಜಗತಿ ಚ ಬಹಿರಂಗರ್ಭಾಸಮಾನಂ ಮಹಿಮ್ನಾ ।
ಮನಸಿ ಚ ಬಹಿರಂದರ್ವಾಜ್ಮನೋವೃತ್ತಿರೂಪಂ
ಪರಮಶಿವಮನಂತಾನಂದಸಾಂದ್ರಂ ಪ್ರಪದ್ಯೇ ॥೫೦॥

೫೦ ಪರಮೇಶ್ವರನು ಸತ್ವ, ರಜ, ತಮೋ ಗುಣರಹಿತನಾಗಿ, ಯಾವಾಗಲೂ ಇರುವವನಾಗಿ, ಅಸ್ಪಷ್ಟರೂಪನಾಗಿದ್ದಾನೆ. ಎಂದರೆ ಅವ್ಯಕ್ತನು ಎಂದರ್ಥ. ತನ್ನ ಅಸಾಧಾರಣವಾದ ಮಹಿಮೆಯಿಂದ ಈ ಪ್ರಪಂಚದ ಒಳಗೂ, ಹೊರಗೂ ಪ್ರಕಾಶಮಾನನಾಗಿರುವವನೂ, ಮನಸ್ಸಿನಲ್ಲಿಯೂ ಸಹ ಒಳ, ಹೊರಭಾಗದಲ್ಲಿದ್ದುಕೊಂಡು ಮಾತು, ಮನಸ್ಸಿನ ರೂಪನಾಗಿರುವನು, ಅಂತ್ಯವಿಲ್ಲದವನೂ, ಶಾಶ್ವತಾನಂದ ಸ್ವರೂಪನೂ ಆಗಿರುವ ಈ ಪರಮೇಶ್ವರನನ್ನು ಭಕ್ತಿಯಿಂದ ಧ್ಯಾನ ಹೊಂದುವೆನು.

ಇತಿ ಶ್ರೀಸ್ಕಾಂದೇಮಹಾಪುರಾಣೇ ಸನತ್ಕುಮಾರಸಂಹಿತಾಯಾಃ ಶಿವಪುರಾಣ ಶ್ರವಣವ್ರತೀನಾಂ ವಿಧಿನಿಷೇಧಪುಸ್ತಕ ವಕ್ತೃಪೂಜನವರ್ಣನಂ ನಾಮ ಸಪ್ತಮೋಽಧ್ಯಾಯಃ ಇಲ್ಲಿಗೆ ಶ್ರೀ ಸ್ಕಾಂದ ಮಹಾಪುರಾಣದಲ್ಲಿ ಸನತ್ಕುಮಾರ ಸಂಹಿತೆಯಲ್ಲಿ ಶಿವಪುರಾಣ ಶ್ರವಣ ವ್ರತಗಳ ವಿಧಿ, ನಿಷೇಧ, ಪುಸ್ತಕಪೂಜನ ವಕ್ತೃಪೂಜನಾ ವರ್ಣನೆ ಎಂಬ ಏಳನೇ ಅಧ್ಯಾಯವು ಸಂಪೂರ್ಣವಾದುದು.



ಶ್ರೀ

ಶ್ರೀ ವ್ಯಾಸಮಹರ್ಷಿ ಪ್ರಣೀತಂ

# ಶ್ರೀ ಶಿವಮಹಾಪುರಾಣಂ

ಪ್ರಕಾಶಕರು

ಪುರಾಣ ಸಮುಚ್ಚಯ ಪ್ರಕಾಶನ

ಶ್ರೀ ಶ್ರೀಕಂಠೇಶ್ವರಸ್ವಾಮಿ ದೇವಸ್ಥಾನದ ಬೀದಿ,

ನಂಜನಗೂಡು,

|| ಶ್ರೀಃ ||

|| ಓಂ ನಮಃ ಶಿವಾಯ ||

ಶ್ರೀ ವ್ಯಾಸಮಹರ್ಷಿ ಪ್ರಣೀತಂ

|| ಶ್ರೀ ಶಿವಮಹಾಪುರಾಣಂ ||

ವಿದ್ಯೇಶ್ವರಸಂಹಿತಾಯಾಂ

# ಪ್ರಥಮೋಽಧ್ಯಾಯಃ

ಆದ್ಯಂತಮಂಗಲಮಜಾತಸಮಾನಭಾವ
ಮಾರ್ಯಂ ತಮೀಶಮಜರಾಮರಮಾತ್ಮದೇವಂ
ಪಂಚಾನನಂ ಪ್ರಬಲಪಂಚವಿನೋದಶೀಲಂ
|| ಸಂಭವಯೇ ಮನಸಿ ಶಂಕರಮಂಬಿಕೇಶಂ ||

ಪುರಾಣಗಳಲ್ಲಿ ಶ್ರೇಷ್ಠವೆನಿಸಿದ ಶಿವಪುರಾಣವನ್ನು ಪ್ರಾರಂಭಿಸುತ್ತಾ ವ್ಯಾಸಮಹರ್ಷಿಗಳು ಈ ಪುರಾಣ ಪ್ರತಿಪಾದ್ಯನಾದ ಪರಮೇಶ್ವರನನ್ನು ಮನಸ್ಸಿನಲ್ಲಿ ಧ್ಯಾನಮಾಡುವುದರ ಮೂಲಕ ಮಂಗಳಾಚರಣೆ ಮಾಡಿ ಗ್ರಂಥಾರಂಭವನ್ನು ಮಾಡುವರು.

ಸೃಷ್ಟಿ, ಜಗತ್ತಿನ ಸಂಹಾರ ಕಾಲಗಳಲ್ಲಿಯೂ ಸಮಸ್ತ ಪ್ರಾಣಿಗಳಿಗೆ ಮಂಗಳ ಉಂಟುಮಾಡುವವನೂ, ಎಲ್ಲ ಪ್ರಾಣಿಗಳಲ್ಲಿಯೂ ಸಮಾನ ಭಾವವುಳ್ಳವನೂ, ಪರಮ ಪೂಜ್ಯನೂ, ಎಲ್ಲದಕ್ಕೂ ಒಡೆಯನೂ, ಮುಪ್ಪು, ಮರಣಗಳ ಸಂಬಂಧವಿಲ್ಲದವನೂ, ಸ್ವಯಂ ಪ್ರಕಾಶನೂ, ಐದು ಮುಖವುಳ್ಳವನೂ, ಶಬ್ದಾದಿ ಪಂಚ ತನ್ಮಾತ್ರಗಳನ್ನು ವಿನೋದವಾಗಿ ಉಂಟು ಮಾಡೂಉವವನೂ ಆದ ಪಾರ್ವತಿಗೆ ಒಡೆಯನಾದ ಶಂಕರನನ್ನು ಮನಸ್ಸಿನಲ್ಲಿ ಚೆನ್ನಾಗಿ ಸ್ಮರಿಸುತ್ತಾನೆ.

ಈ ರೀತಿ ಮಂಗಳಾಚರಣೆ ಮಾಡಿ ವ್ಯಾಸರು ಶಿವಪುರಾಣವನ್ನು ಹೇಳಲು ಪ್ರಾರಂಭಿಸಿದರು.

||ವ್ಯಾಸ ಉವಾಚ ||

ಧರ್ಮಕ್ಷೇತ್ರೇ ಮಹಾಕ್ಷೇತ್ರೇ ಗಂಗಾಕಾಲಿಂದಿಸಂಗಮೇ ।
ಪ್ರಯಾಗೇ ಪರಮೇ ಪುಣ್ಯೇ ಬ್ರಹ್ಮಲೋಕಸ್ಯ ವರ್ತ್ಮನಿ ||೧||

ವ್ಯಾಸರು ಹೇಳುತ್ತಾರೆ

೧ ಗಂಗಾಯಮುನಾನದಿಗಳ ಸಂಗಮ ಪ್ರದೇಶದಲ್ಲಿ, ಧರ್ಮಕ್ಷೇತ್ರವೂ, ಮಹಾಕ್ಷೇತ್ರವೂ ಆದ ಪ್ರಯಾಗವೆಂಬ ಕ್ಷೇತ್ರವಿರುವುದು. ಈ ಪರಮ ಪುಣ್ಯಕರವಾದ ಕ್ಷೇತ್ರವು ಬ್ರಹ್ಮಲೋಕಕ್ಕೆ ಮಾರ್ಗವಾಗಿರುವುದು, ಎಂದರೆ ಬ್ರಹ್ಮಲೋಕಪ್ರಾಪ್ತಿಗೆ ಸಾಧನವಾದ ಪುಣ್ಯಕ್ಷೇತ್ರವಾಗಿರುವುದು.

ಮುನಯಃ ಶಂಸಿತಾತ್ಮಾನಃ ಸತ್ಯವ್ರತಪರಾಯಣಾಃ ।
ಮಹೌಜಸೋ ಮಹಾಭಾಗಾ ಮಹಾಸತ್ರಂ ವಿಶೇನಿರೇ ॥೨॥

೨ ಅಲ್ಲಿ ಜಿತೇಂದ್ರಿಯರೂ, ಸತ್ಯವ್ರತಪರಾಯಣರೂ, ಮಹಾತೇಜಸ್ವಿಗಳೂ, ಮಹಾಮಹಿಮರೂ, ಆದ ಮುನಿಗಳು ಮಹಾಸತ್ರವೆಂಬ ದೊಡ್ಡಯಾಗವನ್ನು ಮಾಡಿದರು.

ತತ್ರ ಸತ್ರಂ ಸಮಾಕರ್ಣ್ಯ ವ್ಯಾಸಶಿಷ್ಯೋ ಮಹಾಮುನಿಃ ।
ಅಜಗ್ರಾಮ ಮುನೀನ್ದ್ರಷ್ಟುಂ ಸೂತಃ ಪೌರಾಣಿಕೋತ್ತಮಃ ॥೩॥

೩ ಅಲ್ಲಿ ನಡೆಯುತ್ತಿರುವ ಯಾಗವನ್ನು ಯಾಗದ ವಿಚಾರ ತಿಳಿದು ನೋಡಲು ವ್ಯಾಸ ಶಿಷ್ಯನೂ, ಮಹಾಮುನಿಯೂ ಆದ ಸೂತ ಪುರಾಣಿಕನೆಂಬ ಪುರಾಣಿಕರಲ್ಲಿ ಶ್ರೇಷ್ಠ ನಾದ ಮುನಿಯು ಪ್ರಯಾಗ ಕ್ಷೇತ್ರದಲ್ಲಿರುವ ಋಷಿಗಳನ್ನು ನೋಡಲು ಬಂದನು.

ತಂ ದೃಷ್ಟ್ವಾ ಸೂತಮಾಯಾಂತಂ ಹರ್ಷಿತಾ ಮುನಯಸ್ತದಾ ।
ಚೇತಸಾ ಸುಪ್ರಸನ್ನೇನ ಪೂಜಾಂ ಚಕ್ರುರ್ಯಥಾವಿಧಿ ॥೪॥

೪ ಹೀಗೆ ಅಲ್ಲಿಗೆ ಆಗಮಿಸುತ್ತಿರುವಂತಹ ಸೂತನನ್ನು ನೋಡಿ ಅಲ್ಲಿದ್ದಂತಹ ಮುನಿಗಳಲ್ಲೂ ಅತ್ಯಂತ ಸಂತೋಷಗೊಂಡವನಾಗಿ ಬಂದ ಸೂತ ಪುರಾಣಿಕರನ್ನು ಪ್ರಸನ್ನ ಮನಸ್ಕರಾಗಿ ಅರ್ಘ್ಯಪಾದ್ಯಾದಿಗಳಿಂದ ಪೂಜಿಸಿ ಸತ್ಕರಿಸಿದರು.

ತತೋ ವಿನಯಸೂಯುಕ್ತಾಃ ಪ್ರೋಚುಃ ಸಾಂಜಲಯಶ್ಚ ತೇ ।
ಸುಪ್ರಸನ್ನಾ ಮಹಾತ್ಮಾನಃ ಸ್ತುತಂ ಕೃತ್ವಾ ಯಥಾವಿಧಿ ॥೫॥

೫ ಅನಂತರದಲ್ಲಿ ಅವರೆಲ್ಲರೂ ಅತ್ಯಂತ ವಿನಯವಂತರಾಗಿ, ಅಂಜಲಿಬದ್ಧರಾಗಿ, ಸುಪ್ರಸನ್ನರಾಗಿ ಮಹಾತ್ಮರಾದ ಅವರು ಆತನನ್ನು ವಿಧಿವತ್ತಾಗಿ ಹೀಗೆ ಸ್ತೋತ್ರಮಾಡಿದರು.

ರೋಮಹರ್ಷಣ ಸರ್ವಜ್ಞಭವಾನ್ನೈ ಭಾಗ್ಯಗೌರವಾತ್ ।
ಪುರಾಣವಿದ್ಯಾಮಖಿಲಾಂ ವ್ಯಾಸಾತ್ಪ್ರತ್ಯರ್ಥಮೀಯಿವಾರ್ ॥೬॥

೬ ಎಲೈ ಸರ್ವಜ್ಞನಾದ ಸೂತ ಮಹಾಮುನಿಯೇ ನೀನು ನಿನ್ನ ಪುಣ್ಯ ವಿಶೇಷದಿಂದ ಈ ಪುರಾಣ ವಿದ್ಯೆ ಎಲ್ಲವನ್ನೂ ವ್ಯಾಸರಿಂದ ಪಡೆದವನಾಗಿರುವೆ ಗುರುವಾದ ವ್ಯಾಸರಿಂದ ಅಧ್ಯಯನ ಮಾಡಿರುವೆ.

ತಸ್ಮಾದಾಶ್ಚರ್ಯಭೂತಾನಾಂ ಕಥಾನಾಂ ತ್ವಂ ಹಿ ಭಾಜನಂ ।
ರತ್ನಾನಾಮುರುನಾರಾಣಾಂ ರತ್ನಾಕರ ಇವಾರ್ಣವಃ ॥೭॥

೭ ಆದ್ದರಿಂದ ನೀನು ಆಶ್ಚರ್ಯಕರವಾದ ಕಥೆಗಳ ವಿಧಿಯಾಗಿರುವೆ. ರತ್ನಗಳಿಗೆ ಸಮುದ್ರವು ಆ ವಾಸಸ್ಥಾನವಾಗಿರುವಂತೆ ಉತ್ತಮವಾದ ಕಥೆಗಳಿಗೆ ನೀನು ನಿಧಿಯಾಗಿರುವೆ.

ಯಚ್ಚ ಭೂತಂ ಚ ಭವ್ಯಂ ಚ ಯಚ್ಚಾನ್ಯದ್ವಸ್ತು ವರ್ತತೆ ।
ನ ತ್ವಯಾವಿದಿತಂ ಕಿಂಚಿತ್ರಿಷು ಲೋಕೇಷು ವಿದ್ಯತೇ ॥೮॥

೮ ಈ ಮೂರು ಲೋಕಗಳಲ್ಲಿ ಈ ಹಿಂದೆ ಯಾವುದು ನಡೆದಿರುವುದೋ, ಈಗ ಯಾವುದು ನಡೆಯುತ್ತಿರುವುದೋ, ಮುಂದೆ ಯಾವುದು ನಡೆಯುವುದೋ ಈ ವಿಚಾರದಲ್ಲಿ ನೀನು ತಿಳಿಯಲ್ಪಡದಿರುವುದು ಯಾವುದೂ ಇರುವುದಿಲ್ಲ.

ತ್ವಂ ಮದಿಷ್ಟಿವಶಾದಸ್ಯ ದರ್ಶನಾರ್ಥಮಿಹಾಗತಃ ।
ಕುರ್ವನ್ಕಿಮಪಿ ನಃ ಶ್ರೇಯೋ ನ ವೃಥಾ ಗಂತುಮರ್ಹಸಿ ॥೯॥

೯ ಈ ನಮ್ಮ ಯಜ್ಞವನ್ನು ನೋಡುವ ಇಚ್ಛೆಯಿಂದ ನಮಗೆ ನೀನು ದರ್ಶನ ಕೊಡುವುದಕ್ಕಾಗಿ ಆಗಮಿಸಿರುವೆ. ಹಾಗಿರುವಂತಹ ನೀನು ನಮಗೆ ಯಥೋಚಿತವಾದ ಶ್ರೇಯಸ್ಸನ್ನು ಉಂಟು ಮಾಡದೇ ಹಾಗೇ ಹೋಗುವುದು ಯೋಗ್ಯವಲ್ಲ.

ತತ್ತ್ವಂ ಶ್ರುತಂ ಸ್ಮನಃ ಸರ್ವಂ ಪೂರ್ವಮೇವ ಶುಭಾಶುಭಂ ।
ನ ತೃಪ್ತಿಮಧಿಗಚ್ಛಾಮಃ ಶ್ರವಣೇಚ್ಛಾ ಮುಹುರ್ಮುಹುಃ ॥೧೦॥

೧೦ ಶುಬಾಶುಭ ವಿಚಾರಗಳನ್ನು ಅಂದರೆ ಇದರ ಸಂಬಂಧವಾದ ತತ್ವವಿಚಾರಗಳನ್ನು ಈ ಮೊದಲೇ ಕೇಳಿದ್ದೇವೆ. ಆದರೂ ಅದರಿಂದ ನಾವು ತೃಪ್ತಿಹೊಂದಿ ಮತ್ತೆ ಮತ್ತೆ ಕೇಳುವ ಕುತೂಹಲವುಳ್ಳವರಾಗಿರುವೆವು.

ಇದಾನೀಮೇಕಮೇವಾಸ್ತಿ ಶ್ರೋತವ್ಯಂ ಸೂತ ಸನ್ಮತೇ ।
ತದ್ರಹಸ್ಯಮಪಿ ಬ್ರೂಹಿ ಯದಿ ತೇನುಗ್ರಹೋ ಭವೇತ್ ॥೧೧॥

೧೧ ಸಮೃದ್ಧಿ ಇರುವ ಎಲೈ ಸೂತ ಮಹಾಮುನಿಯೇ ನಾವು ಈಗ ಕೇಳಬೇಕಾಗಿರುವ ವಿಷಯ ಒಂದಿರುವುದು. ನೀನು ನಮ್ಮಲ್ಲಿ ಅನುಗ್ರಹಿಸಬೇಕೆಂದು ಆಸೆ ಇದ್ದರೆ ರಹಸ್ಯವಾದರೂ ಆ ವಿಷಯವನ್ನೂ ನಮಗೆ ಹೇಳಬೇಕು.

ಪ್ರಾಪ್ತೇ ಕಲಿಯುಗೇ ಘೋರೇ ನರಾಃ ಪುಣ್ಯವಿವರ್ಜಿತಾಃ ।
ದುರಾಚಾರರತಾಃ ಸರ್ವೇ ಸತ್ಯವಾರ್ತಾಪರಾಙ್ಮುಖಾಃ ॥೧೨॥

೧೨ ಆ ವಿಷಯವೇನೆಂದರೆ ಘೋರವಾದ ಕಲಿಯುಗವು ಬರಲು ಮನುಷ್ಯರೆಲ್ಲರೂ ಪುಣ್ಯ ಕಾರ್ಯಗಳನ್ನು ಬಿಟ್ಟವರಾಗಿ ದುರಾಚಾರದಲ್ಲಿ ಆಸಕ್ತಿಯುಳ್ಳವರಾಗಿ, ಸತ್ಯ ಮಾರ್ಗವನ್ನು ಬಿಟ್ಟುಬಿಡುವರು.

ಪರಾಪವಾದನಿರತಾಃ ಪರದ್ರವ್ಯಾಭಿಲಾಷಿಣಃ ।
ಪರಸ್ತ್ರೀಸಕ್ತಮನಸಃ ಪರಹಿಂಸಾಪರಾಯಣಾಃ ॥೧೩॥

೧೩ ಮತ್ತು ಕಲಿಯುಗದಲ್ಲಿ ಪರರನ್ನು ದೂಷಿಸುತ್ತಾ, ಬೇರೆಯವರ ದ್ರವ್ಯವನ್ನು ಅಪೇಕ್ಷಿಸುತ್ತಾ, ಪರಸ್ತ್ರೀಯರಲ್ಲಿ ಆಸಕ್ತರಾಗಿ, ಬೇರೆಯವರಿಗೆ ಹಿಂಸೆ ಕೊಡುವುದರಲ್ಲಿಯೇ ಆಸಕ್ತರಾಗಿರುವರು.

ದೇಹಾತ್ಮದೃಷ್ಟಯೋ ಮೂಢಾ ನಾಸ್ತಿಕಾಃ ಪಶುಬುದ್ಧಯಃ ।
ಮಾತೃಪಿತೃಕೃತದ್ವೇಷಾಃ ಸ್ತ್ರೀದೇವಾಃ ಕಾಮಕಿಂಕರಾಃ ॥೧೪॥

೧೪ ತಮ್ಮ ದೇಹವೆಂಬ ಆತ್ಮವೆಂಬ ದೃಷ್ಟಿಯುಳ್ಳವರೂ, ಮೂಢರೂ, ನಮ್ಮ ಸನಾತನ ಧರ್ಮದಲ್ಲಿ, ಪರಮೇಶ್ವರನಲ್ಲಿ ನಂಬಿಕೆ ಇಲ್ಲದವರಾಗಿ, ಪಶುಗಳಂತೆ ವರ್ತಿಸುವರು, ಹಾಗೂ ಹೆತ್ತ ತಾಯಿತಂದೆಯರನ್ನೇ ದ್ವೇಷಿಸುವವರಾಗಿ, ಸ್ತ್ರೀಯರಿಗೆ ವಶರಾಗಿ ಅವರನ್ನು ದೇವರಂತೆ ಕಾಣುವರೂ, ಕಾಮತೃಪ್ತಿಗಾಗಿ ಅವರ ಸೇವಕರೂ ಆಗುವರು.

ವಿಪ್ರಾ ಲೋಭಗ್ರಹಗ್ರಸ್ತಾ ವೇದವಿಕ್ರಯಜೀವಿನಃ ।
ಧನಾರ್ಜನಾರ್ಥಮಧ್ಯಸ್ತವಿದ್ಯಾ ಮದವಿಮೋಹಿತಾಃ ॥೧೫॥

೧೫ ಬ್ರಾಹ್ಮಣರು ಧನದಾಸೆಯಿಂದ ಕೂಡಿದವರಾಗಿ ವೇದವನ್ನು ಅಪಾತ್ರರಿಗೆ ದಾನಮಾಡುತ್ತಾ ಅದರಿಂದ ಧನ ಸಂಪಾದಿಸುತ್ತಾ ಇರುವರು. ಇವರಿಗೆ ಹಣ ಸಂಪಾದನೆಯೇ ಮುಖ್ಯ ಉದ್ದೇಶವಾಗಿರುವುದು ಹಾಗೂ ಧನ ಸಂಪಾದನೆಗಾಗಿಯೇ ವಿದ್ಯಾಭ್ಯಾಸಮಾಡಿ, ಅಹಂಕಾರದಿಂದ ಕೂಡಿದವರಾಗಿರುವರು.

ತ್ಯಕ್ತಸ್ವಜಾತಿಕರ್ಮಾಣಃ ಪ್ರಾಯಶಃ ಪರಪಂಚಕಾಃ ।
ತ್ರಿಕಾಲಸಂಧ್ಯಯಾ ಹೀನಾ ಬ್ರಹ್ಮಬೋಧವಿವರ್ಜಿತಾಃ ॥೧೬॥

೧೬ ತಮ್ಮ ಜಾತಿಗೆ ಉಕ್ತರಾದ ಸ್ನಾನಸಂಧ್ಯಾವಂದನಾದಿ ಕರ್ಮಗಳನ್ನೆಲ್ಲಾ ತ್ಯಜಿಸಿ ಬೇರೆಯವರನ್ನೂ ವಂಚಿಸುತ್ತಿರುವರು. ತ್ರಿಕಾಲ ಸಂಧ್ಯಾಕರ್ಮವಿಹೀನರಾಗಿ ತಮ್ಮ ಬ್ರಾಹ್ಮಣ ಧರ್ಮಕ್ಕೆ ವಿಹಿತವಾದ ಬ್ರಹ್ಮ ಸಂಬಂಧವಾದ ವೇದಾಂತ ವಿದ್ಯೆಯಲ್ಲಿ ತಿಳುವಳಿಕೆ ಇಲ್ಲದವರಾಗಿರುವರು.

ಅದಯಾಃ ಪಂಡಿತಂಮನ್ಯಾಃ ಸ್ವಾಚಾರವ್ರತಲೋಪಕಾಃ ।
ಕೃಷ್ಯುದ್ಯಮರತಾಃ ಕ್ರೂರಸ್ವಭಾವಾ ಮಲಿನಾಶಯಾಃ ॥೧೭॥

೧೭ ಪ್ರಾಣಿಗಳಲ್ಲಿ ದಯೆಯಿಲ್ಲದವರಾಗಿ, ತಾವೇ ಮಹಾಪಂಡಿತರೆಂಬ ಅಹಂಕಾರದಿಂದ ಮೆರೆಯುತ್ತಾ ತಾವು ಮಾಡಬೇಕಾದ ಆಚಾರ ವ್ರತಗಳನ್ನು ಬಿಟ್ಟವರಾಗಿ, ತಮ್ಮ ಧರ್ಮವಲ್ಲದ ವ್ಯವಸಾಯದಲ್ಲಿ ಆಸಕ್ತರಾಗಿ, ಸ್ವಭಾವತಃ ಕ್ರೂರಿಗಳಾಗಿ, ಕೆಟ್ಟ ಆಸೆ, ಆಲೋಚನೆಗಳುಳ್ಳವರಾಗಿ ಇರುವರು.

ಕ್ಷತ್ರಿಯಾಶ್ಚ ತಥಾ ಸರ್ವೇ ಸ್ವಧರ್ಮತ್ಯಾಗಶೀಲಿನಃ ।
ಅಸತ್ಸಂಗಾಃ ಪಾಪರತಾ ವ್ಯಭಿಚಾರಪರಾಯಣಾಃ ॥೧೮॥

೧೮ ಕ್ಷತ್ರಿಯರೂ ಸಹ ಹಾಗೆಯೇ ಅವರ ಧರ್ಮವನ್ನು ಬಿಟ್ಟು (ಪ್ರಜಾಪಾಲನೆ ಎಂಬ ಕರ್ತವ್ಯವನ್ನು ಬಿಟ್ಟು) ಕೆಟ್ಟ ಸಹವಾಸ ಉಳ್ಳವರಾಗಿ, ಪಾಪಕಾರ್ಯಾಸಕ್ತರಾಗಿ, ಪರಸ್ತ್ರೀ ಗಮನದಲ್ಲಿ ಆಸಕ್ತರಾಗಿರುವರು.

ಅಶೂರಾ ಅರಣಪ್ರೀತಾಃ ಪಲಾಯನಪರಾಯಣಾಃ ।
ಕುಚಾರವೃತ್ತಯಃ ಶೂದ್ರಾಃ ಕಾಮಕಿಂಕರಚೇತಸಃ ॥೧೯॥

೧೯ ಕ್ಷತ್ರಿಯರು ಹೇಡಿಗಳಾಗಿ, ಯುದ್ಧದಲ್ಲಿ ಪರಾಙ್ಮುಖರಾಗಿಯೂ, ಸೋತು ಓಡುವುದರಲ್ಲಿ ನಿಸ್ಸೀಮರಾಗಿಯೂ, ಕೆಟ್ಟ ಆಚಾರ, ವೃತ್ತಿಗಳುಳ್ಳವರಾಗಿಯೂ, ಶೂದ್ರರಂತೆ ಜೀವನ ಮಾಡುವವರೂ, ಕಾಮಾಭಿಲಾಷೆಯಿಂದ ಸ್ತ್ರೀಯರಲ್ಲಿ ಆಸಕ್ತಿಯುಳ್ಳ ಮನಸ್ಸಿನವರೂ ಆಗುವರು.

ಶಸ್ತ್ರಾಸ್ತ್ರವಿದ್ಯಯಾ ಹೀನಾ ಧೇನುವಿಪ್ರಾವನೋಜ್ಝಿತಾಃ ।
ಶರಣ್ಯಾವನಹೀನಾಶ್ಚ ಕಾಮಿನ್ಯೋತಿಮೃಗಾಸ್ಸದಾ ॥೨೦॥

೨೦ ಶಸ್ತ್ರ, ಅಸ್ತ್ರ ವಿದ್ಯೆಯಿಂದ ಹೀನರಾಗಿ ಗೋ ಬ್ರಾಹ್ಮಣರಿಗೆ ರಕ್ಷಣೆ ನೀಡದೇ, ಶರಣಾಗತರನ್ನು ರಕ್ಷಿಸದೇ ಯಾವಾಗಲೂ ಕಾಮಿನಿ, ದ್ಯೂತ, ಬೇಟೆ ಇವುಗಳಲ್ಲಿ ಆಸಕ್ತರಾಗಿರುತ್ತಾರೆ.

ಪ್ರಜಾಪಾಲನಸದ್ಧರ್ಮವಿಹೀನಾ ಭೋಗತತ್ಪರಾಃ ।
ಪ್ರಜಾಸಂಹಾರಕಾ ದುಷ್ಟಾ ಜೀವಹಿಂಸಾಕರಾ ಮುದಾ ॥೨೧॥

೨೧ ಪ್ರಜಾಪಾಲನೆಯಿಂದ ಸದ್ಧರ್ಮವನ್ನು ಬಿಟ್ಟು ಭೋಗದಲ್ಲಿ ಆಸಕ್ತರಾಗಿ, ಪ್ರಜಾ ಸಂಹಾರಕರಾಗಿ, ಸಂತೋಷದಿಂದ ಪ್ರಾಣಿ ಹಿಂಸೆ ಮಾಡುತ್ತಾ ದುಷ್ಟರಾಗಿರುವರು.

ವೈಶ್ಯಾಃ ಸಂಸ್ಕಾರಹೀನಾಸ್ತೇ ಸ್ವಧರ್ಮತ್ಯಾಗಶೀಲಿನಃ ।
ಕುಪಥಾಃ ಸ್ವಾರ್ಜನರತಾಸ್ತುಲಾಕರ್ಮಕುವೃತ್ತಯಃ ॥೨೨॥

೨೨ ವೈಶ್ಯರೂ ಸಹ ಷೋಡಷ ಸಂಸ್ಕಾರ ಹೀನರಾಗಿ, ತಮ್ಮ ಧರ್ಮವಾದ, ಕೃಷಿ ವಾಣಿಜ್ಯವನ್ನು ಬಿಟ್ಟು, ಕೆಟ್ಟ ಮಾರ್ಗಾನುಯಾಯಿಗಳಾಗಿ ದ್ರವ್ಯಾರ್ಜನೆಯಲ್ಲಿ ಆಸಕ್ತರಾಗಿ, ವ್ಯಾಪಾರದಲ್ಲಿದ್ದರೂ ಅನ್ಯಾಯವಂಚನೆ ಮೊದಲಾದ ಕೆಟ್ಟ ಮಾರ್ಗವನ್ನು ಅನುಸರಿಸುವರು.

ಗುರುದೇವದ್ವಿಜಾತೀನಾಂ ಭಕ್ತಿಹೀನಾಃ ಕುಬುದ್ಧಯಃ ॥
ಅಭೋಜಿತದ್ವಿಜಾಃ ಪ್ರಾಯಃ ಕೃಪಣಾ ಬದ್ಧಮುಷ್ಟಯಃ ॥೨೩॥

೨೩ ಗುರುಗಳು ದೇವತೆಗಳುಬ್ರಾಹ್ಮಣರು ಇವರುಗಳಲ್ಲಿ ಭಕ್ತಿ ಇಡದೇ ಕೆಟ್ಟ ಬುದ್ಧಿಯುಳ್ಳವರಾಗಿ, ಅತ್ಯಂತ ಆಸೆ ಉಳ್ಳವರಾಗಿ, ದಾನಾದಿಗಳನ್ನು ಮಾಡದೇ

ಅವಶ್ಯವಾಗಿ ಮಾಡಬೇಕಾದ ಬ್ರಾಹ್ಮಣ ಭೋಜನಾದಿಗಳನ್ನೂ ಮಾಡಿಸುವುದಿಲ್ಲ.

ಕಾಮಿನೀಜಾರಭಾವೇಷು ಸುರತಾ ಮಲಿನಾಶಯಾಃ
ಲೋಭಮೋಹವಿಚೇತಸ್ಕಾಃ ಪೂರ್ತಾದಿಷು ವ್ಯಪೋಜ್ಝಿತಾಃ ||೨೪||

೨೪ ಕೆಟ್ಟ ಬುದ್ಧಿಯುಳ್ಳವರಾಗಿ, ಜಾರ ವೈಶ್ಯಾ ಸ್ತ್ರೀ ಸಹವಾಸವುಳ್ಳವರಾಗಿ, ಅವರಲ್ಲಿಯೇ ಒಳ್ಳೆಯ ಸುಖವನ್ನನುಭವಿಸುತ್ತಾ, ಕೆಟ್ಟ ಆಸೆಯುಳ್ಳವರಾಗಿ, ಅತ್ಯಾಶೆ, ಜಿಪುಣತನ ಉಳ್ಳವರಾಗಿ, ಕೆರೆ, ಕಟ್ಟೆ ಮಾಡಿಸುವಂತಹ ಜನೋಪಕಾರ ಮಾಡದೇ ತಮ್ಮ ಧರ್ಮ ಬಿಟ್ಟವರಾಗಿರುವರು.

ತದ್ವಚ್ಛೂದ್ರಾಶ್ಚ ಯೇ ಕೇಚಿದ್ಬ್ರಾಹ್ಮಣಾಚಾರತತ್ಪರಾಃ
ಉಜ್ಜ್ವಲಾಕೃತಯೋ ಮೂಢಾಃ ಸ್ವಧರ್ಮತ್ಯಾಗಶೀಲಿನಃ ||೨೫||

೨೫ ಅದರಂತೆ ಶೂದ್ರರೂ ಸಹ ತಮ್ಮ ಧರ್ಮವನ್ನು ಬಿಟ್ಟು ಕೆಲವರು ಮೂಢ ಬುದ್ಧಿಯಿಂದ ಬ್ರಾಹ್ಮಣರ ಆಚಾರವಾದ ಸಂಧ್ಯಾದಿ ವಿಚಾರದಲ್ಲಿ ಆಸಕ್ತರಾಗಿ, ಮಹಾ ಆಡಂಬರದಿಂದ ಕೂಡಿ ಮೂರ್ಖರಾಗಿ ತಮ್ಮ ಧರ್ಮ ಬಿಡುವವರಾಗಿರುವರು.

ಕರ್ತಾರಸ್ತಪಸಾಂ ಭೂಯೋ ದ್ವಿಜತೇಜೋಪಹಾರಕಾಃ
ಶಿಶ್ವಲ್ಪಮೃತ್ಯುಕಾರಾಶ್ಚ ಮಂತ್ರೋಚ್ಚಾರಪರಾಯಣಾಃ ||೨೬||

೨೬ ಇಷ್ಟೇ ಅಲ್ಲದೇ ಈ ಶೂದ್ರರು ತಪಸ್ಸನ್ನು ಮಾಡುವರು, ಬ್ರಾಹ್ಮಣರ ತೇಜೋವಧೆ ಅಂದರೆ ಅವಮಾನ ಮಾಡುವರು, ಮಕ್ಕಳಿಗೆ ಕಡಿಮೆ ಆಯಸ್ಸಾಗುವಂತೆ ಮಾಡುವರಲ್ಲಿ ವೇದ ಮಂತ್ರೋಚ್ಚಾರ ಪರರೂ ಆಗುವರು.

ಶಾಲಗ್ರಾಮಶಿಲಾದೀನಾಂ ಪೂಜಕಾ ಹೋಮತತ್ಪರಾಃ
ಪ್ರತಿಕೂಲವಿಚಾರಾಶ್ಚ ಕುಟಿಲಾ ದ್ವಿಜದೂಷಕಾಃ ||೨೭||

೨೭ ಇದೂ ಅಲ್ಲದೇ ಸಾಲಿಗ್ರಾಮವೇ ಮೊದಲಾದ ದೇವತಾ ಪೂಜೆಗಳನ್ನೂ, ಅಗ್ನಿಯಲ್ಲಿ ಹೋಮವನ್ನೂ ಮಾಡುವರು, ಹೀಗೆ ವಿರುದ್ಧವಾದ ಆಚಾರಗಳನ್ನೇ ಮಾಡುತ್ತಾ ಕೆಟ್ಟ ಬುದ್ಧಿಯಿಂದ ಬ್ರಾಹ್ಮಣರನ್ನು ದೂಷಿಸುವರು.

ಧನವಂತಃ ಕುಕುರ್ಮಾಣೋ ವಿದ್ಯಾವಂತೋ ವಿವಾದಿತಃ
ಅಖ್ಯಾಯೋಪಾಸನಾಧರ್ಮವಕ್ತಾರೋ ಧರ್ಮಲೋಪಕಾಃ ||೨೮||

೨೮ ಮತ್ತು ಈ ಕಲಿಯುಗದಲಲ್ಲಿ ಧನವಂತರು ಕೆಟ್ಟ ಕೆಲಸಗಳನ್ನೇ ಮಾಡುವರು. ವಿದ್ಯಾವಂತರು ವಾದವಿವಾದಗಳಿಂದ ಜಗಳ ಮಾಡುವರು. ಧರ್ಮಭ್ರಷ್ಟರಾದ, ಧರ್ಮವನ್ನು ಬಿಟ್ಟು ಜನರು ಪುರಾಣ ಶ್ರವಣ, ಉಪಾಸನೆ, ಧರ್ಮ ಈ ವಿಚಾರವಾಗಿ ದೊಡ್ಡ ದೊಡ್ಡ ಉಪದೇಶ ಮಾಡುವರು.

ಸುಭೂಪಾಕೃತಯೋ ದಂಭಾಃ ಸುದಾತಾರೋ ಮಹಾಮದಾಃ
ವಿಪ್ರಾರ್ಧೀ ಸೇವಕಾನ್ಮತ್ವಾ ಮನ್ಯಮಾನಾ ನಿಜಂ ಪ್ರಭುಂ ||೨೯||

೨೯ ಒಳ್ಳೆಯ ಕ್ಷತ್ರಿಯರಂತೆ ಕಾಣುವ ವೇಷವುಳ್ಳ ಡಾಂಭಿಕರು, ಮದದಿಂದ ಕೊಟ್ಟ ಡಂಭಾಚಾರದಿಂದ ದಾನ ಮಾಡುವವರಾಗಿ, ಬ್ರಾಹ್ಮಣರನ್ನು ತಮ್ಮ ಸೇವಕರಂತೆ ತಿಳಿದು ತಮ್ಮನ್ನು ಅವರೇ ನಿಜವಾದ ಪ್ರಭುಗಳೆಂದು ತಿಳಿಯುವರು.

ಸ್ವಧರ್ಮರಹಿತಾ ಮೂಢಾ ಸಂಕರಾಃ ಕ್ರೂರಬದ್ಧಯಃ
ಮಹಾಭಿಮಾನಿನೋ ನಿತ್ಯಂ ಚತುರ್ವರ್ಣವಿಲೋಪಕಾಃ ||೩೦||

೩೦ ಜನರು ಚಾತುರ್ವರ್ಣ್ಯ ಧರ್ಮವನ್ನು ಬಿಟ್ಟು ಮೂಢರಾಗಿ, ಒಬ್ಬರ ಧರ್ಮವನ್ನು ಮತ್ತೊಬ್ಬರು ಆಚರಿಸುತ್ತಾ ಕ್ರೂರಬುದ್ಧಿಯುಳ್ಳವರಾಗಿ, ಮಹಾಗರ್ವ ಉಳ್ಳವರಾಗಿ ಚಾತುರ್ವರ್ಣ್ಯವನ್ನೂ ನಾಶವಾಗುವಂತೆ ಮಾಡುವರು.

ಸುಕುಲೀನಾನ್ನಿ ಜಾನ್ಮತ್ವಾ ಚತುವರ್ಣ್ಯೈರ್ವಿವರ್ತನಾಃ
ಸರ್ವವರ್ಣಭ್ರಷ್ಟಕರಾ ಮೂಢಾಃ ಸತ್ಕರ್ಮಕಾರಿಣಃ ||೩೧||

೩೧ ತಮ್ಮ ಕುಲವನ್ನೇ ಶ್ರೇಷ್ಠವೆಂದು ಹೇಳುತ್ತಾ, ತಿಳಿದು, ಚತುವರ್ಣವನ್ನೂ ಬಿಟ್ಟು ಅದರ ಧರ್ಮವನ್ನೂ ಬಿಟ್ಟು, ಎಲ್ಲಾ ವರ್ಣಧರ್ಮಗಳನ್ನು ಕೆಡಿಸುತ್ತಾ ಮೂರ್ಖರಾಗಿ ತಾವೇ ಸತ್ಕರ್ಮ ನಿಷ್ಠರೆಂಬ ಭಾವನೆ ಹೊಂದುವರು.

ಸ್ತ್ರಿಯಶ್ಚ ಪ್ರಾಯಶೋ ಭ್ರಷ್ಟಾ ಭರ್ತ್ರವಜ್ಞಾನಕಾರಿಕಾಃ
ಶ್ವಶುರದ್ರೋಹಕಾರಿಣ್ಯೋ ನಿರ್ಭಯಾ ಮಲಿನಾಸನಾಃ ||೩೨||

೩೨ ಈ ಕಲಿಯುಗದಲ್ಲಿ ಸ್ತ್ರೀಯರು ಸಾಧಾರಣವಾಗಿ ಭ್ರಷ್ಟರಾಗಿ ತಮ್ಮ ಪತಿಯನ್ನೇ ಅವಮಾನಿಸುತ್ತಾ, ಅತ್ತೆ, ಮಾವಂದಿರಿಗೆ ದ್ರೋಹವನ್ನೆಸಗುತ್ತಾ, ನಿರ್ಭಯವಾಗಿ ಯಾವಾಗಲೂ ಕೊಳಕಾಗಿರುವರು.

**ಕುಹಾವಭಾವನಿರತಾಃ ಕುಶೀಲಾಃ ಸ್ಮರವಿಹ್ವಲಾಃ**
**ಜಾರಸಂಗರತಾ ನಿತ್ಯಂ ಸ್ವಸ್ವಾಮಿವಿಮುಖಾಸ್ತಥಾ ||೩೩||**

೩೩ ಕೆಟ್ಟದೆನಿಸುವ ಹಾವಭಾವ ವಿಲಾಸಗಳಿಂದ ಕೂಡಿ, ಕೆಟ್ಟ ಶೀಲವುಳ್ಳವರಾಗಿ ಕಾಮವಿಕಾರದಲ್ಲಿರುವರಾಗಿ, ಪರ ಪುರುಷರಲ್ಲಿ ಆಸಕ್ತಿ ಉಳ್ಳವರಾಗಿ, ತಮ್ಮ ಪತಿಯಲ್ಲೇ ಅನಾದರ ತಾಳುವರು.

**ತನಯಾ ಮಾತೃಪಿತ್ರೋಶ್ಚ ಭಕ್ತಿಹೀನಾ ದುರಾಶಯಾಃ**
**ಅವಿದ್ಯಾಪಾತಕಾ ನಿತ್ಯಂ ರೋಗಗ್ರಸಿತದೇಹಕಾಃ ||೩೪||**

೩೪ ಈ ಕಲಿಯುಗದಲ್ಲಿ ಮಕ್ಕಳು ಸಹ ತಂದೆತಾಯಿಯರಲ್ಲಿ ಭಕ್ತಿ ಇಲ್ಲದೇ ದುರಾಸೆಯಿಂದ ಕೂಡಿ, ವಿದ್ಯೆಯಲ್ಲಿ ಮನಸ್ಸಿಡದೇ ಯಾವಾಗಲೂ ರೋಗಗಳಿಂದ ನರಳುತ್ತಿರುವರು.

**ಏತೇಷಾಂ ನಷ್ಟಬುದ್ಧೀನಾಂ ಸ್ವಧರ್ಮತ್ಯಾಗಶೀಲಿನಾಂ**
**ಪರಲೋಕೇಽಪೀಹ ಲೋಕೇ ಕಥಂ ಸೂತ ಗತಿರ್ಭವೇತ್ ||೩೫||**

೩೫ ಎಲೈ ಸೂತ ಮಹಾಮುನಿಯೇ ಈ ರೀತಿಯಾಗಿ ಇವರುಗಳ ಬುದ್ಧಿಗಳ ನಷ್ಟವಾಗಿ ಸ್ವಧರ್ಮಗಳನ್ನು ಎಲ್ಲರೂ ಬಿಟ್ಟವರಾಗಿರುವ ಜನಗಳಿಗೆ ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಸಹ ಉತ್ತಮ ಗತಿಯು ಹೇಗೆ ದೊರಕುವುದು.

**ಇತಿ ಚಿಂತಾಕುಲಂ ಚಿತ್ತಂ ಜಾಯತೇ ಸತತಂ ಹಿ ನಃ**
**ಪರೋಪಕಾರಸದೃಶೋ ನಾಸ್ತಿ ಧರ್ಮೋಽಪರಃ ಖಲು ||೩೬||**

೩೬ ಈ ರೀತಿಯಾಗಿ ನಮಗೆ ಯಾವಾಗಲೂ ಚಿಂತೆ ಉಂಟಾಗಿ ನಮ್ಮ ಮನಸ್ಸು ವ್ಯಾಕುಲಗೊಂಡಿದೆ. ಆದ್ದರಿಂದ ಪರೋಪಕಾರಕ್ಕೆ ಸಮಾನವಾದ ಧರ್ಮವು ಬೇರೊಂದಿಲ್ಲವಷ್ಟೇ.

**ಲಘೂಪಾಯೇನ ಯೇನೈಷಾಂ ಭವೇತ್ಸದ್ಯೋಘನಾಶನಂ**
**ಸರ್ವಸಿದ್ಧಾಂತವಿತ್ತ್ವಂ ಹಿ ಕೃಪಯಾ ತದ್ವದಾಧುನಾ ||೩೭||**

೩೭ ಆದ್ದರಿಂದ ನೀನು ಸರ್ವ ಸಿದ್ಧಾಂತಗಳ ತತ್ವಗಳನ್ನು ಬಲ್ಲವರಾಗಿದ್ದೀಯೆ. ಈಗ ನೀನು ನಮ್ಮ ಮೇಲೆ ಕೃಪೆ ಮಾಡಿ ಈ ಜನಗಳಿಗೆ ಸುಲಭೋಪಾಯದಿಂದ ಪಾಪ ನಾಶವಾಗುವಂತಹ ಯಾವುದಾದರೂ ಉಪಾಯವನ್ನು ಹೇಳು.

**||ವ್ಯಾಸ ಉವಾಚ||**

**ಇತ್ಯಾಕರ್ಣ್ಯ ವಚಸ್ತೇಷಾಂ ಮುನೀನಾಂ ಭಾವಿತಾತ್ಮನಾಂ**
**ಮನಸಾ ಶಂಕರಂ ಸ್ಮೃತ್ವಾ ಸೂತ ಪ್ರೋವಾಚ ತಾನ್ಮುನೀನ್ ||೩೮||**

೩೮ ವ್ಯಾಸ ಮಹರ್ಷಿಯು ಹೇಳುತ್ತಾರೆ-ಇತಿ ಜಿತೇಂದ್ರಿಯರಾದ ಆ ಮುನಿಗಳು ಹೇಳಿದ ಈ ಮಾತುಗಳನ್ನು ಕೇಳಿ ಸೂತ ಪುರಾಣಿಕನು ಮನಸ್ಸಿನಲ್ಲಿ ಪರಮೇಶ್ವರನನ್ನು ಸ್ಮರಿಸಿ ಮುನಿಗಳನ್ನು ಕುರಿತು ಈ ರೀತಿ ಹೇಳಿದನು.

ಇತಿ ಶ್ರೀ ಶಿವಮಹಾಪುರಾಣೇ ಪ್ರಥಮಾಯಾಂ ವಿದ್ಯೇಶ್ವರ ಸಂಹಿತಾಯಾಂ ಮುನಿಪ್ರಶ್ನವರ್ಣನೋ ನಾಮ ಪ್ರಥಮೋಽಧ್ಯಾಯಃ

ಇಲ್ಲಿಗೆ ಶ್ರೀ ಶಿವಪುರಾಣದಲ್ಲಿ ಮೊದಲನೆಯ ವಿದ್ಯೇಶ್ವರ ಸಂಹಿತೆಯಲ್ಲಿ ಮುನಿಗಳ ಪ್ರಶ್ನೆ ವರ್ಣನೆಯೆಂಬ ಮೊದಲನೇ ಅಧ್ಯಾಯ ಮುಗಿದುದು.

||ಶ್ರೀಃ||

||ಓಂ ನಮಃ ಶಿವಾಯ||

||ಅಥ ಶ್ರೀ ಶಿವಮಹಾಪುರಾಣೇ||

ವಿದ್ಯೇಶ್ವರ ಸಂಹಿತಾಯಾಂ

# ದ್ವಿತೀಯೋಽಧ್ಯಾಯಃ

## ಶ್ರೀ ಶಿವಪುರಾಣದಲ್ಲಿ ವಿದ್ಯೇಶ್ವರ ಸಂಹಿತೆಯಲ್ಲಿ ಎರಡನೇ ಅಧ್ಯಾಯವು

**||ಸೂತ ಉವಾಚ||**

**ಸಾಧು ಪೃಷ್ಟಂ ಸಾಧವೋ ವಸ್ತ್ರೈಲೋಕ್ಯಹಿತಕಾರಕಂ ||**

**ಗುರುಂ ಸ್ಮೃತ್ವಾ ಭವತ್ಸ್ನೇಹಾದ್ವಕ್ಷ್ಯೇ ತಚ್ಛೃಣುತಾದರಾತ್ ||೧||**

೧ ಸೂತರು ಹೇಳುತ್ತಾರೆ ಎಲೈ ಸಾಧುಗಳಾದ ಮುನಿಗಳೇ ನೀವು ಕೇಳಿದ ಪ್ರಶ್ನೆಯು ಮೂರು ಲೋಕಕ್ಕೂ ಹಿತವನ್ನುಂಟು ಮಾಡುವುದಾಗಿರುವುದು. ಆದ್ದರಿಂದ ನನ್ನ ಗುರುವಾದ ಶ್ರೀ ವ್ಯಾಸ ಮಹರ್ಷಿಯನ್ನು ಸ್ಮರಿಸಿ ನಿಮ್ಮಗಳ ಮೇಲಿನ ಸ್ನೇಹದಿಂದ ಕೇಳಿದ ಪ್ರಶ್ನೆಗಳಿಗೆ ಉತ್ತರಿಸುತ್ತೇನೆ. ನೀವೂ ಸಹ ಪ್ರೀತಿಯಿಂದ ಕೇಳಿರಿ.

ವಿ.ಸೂ. ಗುರುವಾದ ವ್ಯಾಸರನ್ನು ಎಂದು ಇಲ್ಲಿ ಸೂತರು ಹೇಳುತ್ತಾರೆ. ಇಲ್ಲಿ ಗುರು ಎಂಬ ಶಬ್ದದಲ್ಲಿ ವಿಶೇಷವುಂಟು ಎಲ್ಲಾ ಕಾರ್ಯಗಳಿಗೆ ಗುರುವೇ ಕಾರಣವಲ್ಲವೇ. ಗುರು ಎಂದರೆ ಹೀಗೆ ಉಪನಿಷತ್ತೊಂದರಲ್ಲಿ ವಿವರಿಸುತ್ತಾರೆ. ಆದ್ದರಿಂದಲೇ ಎಲ್ಲಾ ಕಾರ್ಯದಲ್ಲಿಯೂ ಪ್ರತಿಯೊಬ್ಬರೂ ತಮ್ಮ ಗುರುಗಳನ್ನು ಮನಸಾ ಸ್ಮರಿಸಿ ಕಾರ್ಯ ಪ್ರಾರಂಭಿಸುತ್ತಾರೆ.

**ವೇದಾಂತಸಾರಸರ್ವಸ್ವಂ ಪುರಾಣಂ ಶೈವಮುತ್ತಮಂ**

**ಸರ್ವಾಘೌಘೋದ್ಧಾರಕರಂ ಪರತ್ರ ಪರಮಾರ್ಥದಂ ||೨||**

೨ ಸಮಸ್ತ ವೇದಾಂತಗಳ ಸಾರವಾಗಿರುವಂತಹ, ಸಮಸ್ತ ಪಾಪಗಳ ಸಮೂಹದಿಂದ, ನಮ್ಮನ್ನು ಕಾಪಾಡುವಂತಹ ಇಲ್ಲಿಯೂ ಮುಂದೆಯೂ ಅಂದರೆ, ಈ ದೇಹದಿಂದ ಕೂಡಿರುವಾಗ ಈ ಜಗತ್ತಿನಲ್ಲಿಯೂ, ನಂತರ ಈ ದೇಹ ನಾಶಾ ನಂತರ ಮುಂದಿನ ಲೋಕಗಳಲ್ಲಿಯೂ ಉತ್ತಮ ಗತಿಯನ್ನು ನೀಡುವಂತಹ ಉತ್ತಮವಾದ ಶೈವ ಪುರಾಣವಾಗಿರುವುದು.

ಕಲಿಕಲ್ಮಷವಿಧ್ವಂಸಿ ಯಸ್ಮಿಂಚ್ಛಿವಯತಃ ಪರಂ
ವಿಜೃಂಭತೇ ಸದಾ ವಿಪ್ರಶ್ಚತುವರ್ಗಫಲಪ್ರದಂ ।।೩।।

೩ ಕಲಿಯುಗದಲ್ಲಿ ಪಾಪ ಸಮೂಹವನ್ನು ನಾಶಪಡಿಸುವಂತಹದೂ, ಈ ಶೈವ ಪುರಾಣದಲ್ಲಿ ಶಿವನ ಮಹಾತ್ಮೆಯು ವರ್ಣಿಸಲ್ಪಟ್ಟು, ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ನಾಲ್ಕು ಪುರುಷಾರ್ಥವನ್ನು ಕೂಡುವಂತಹದ್ದಾಗಿ ಈ ಶಿವ ಪುರಾಣವು ಅತ್ಯಂತ ಉತ್ಕರ್ಷವಾಗಿರುವುದು.

ತಸ್ಯಾಧ್ಯಯನಮಾತ್ರೇಣ ಪುರಾಣಸ್ಯ ದ್ವಿಜೋತ್ತಮಾಃ
ಸರ್ವೋತ್ತಮಸ್ಯ ಶೈವಸ್ಯ ತೇ ಯಾಸ್ಯಂತಿ ಸುಸದ್ಗತಿಂ ।।೪।।

೪ ಇಂತಹ ಉತ್ತಮೋತ್ತಮವಾದ ಶಿವಪುರಾಣದ ಓದುವಿಕೆ ಮಾತ್ರದಿಂದಲೇ ಎಲೈ ಮುನಿಗಳೇ ಜನರು ಉತ್ತಮವಾದ ಗತಿಯನ್ನು ಲೋಕವನ್ನು ಹೊಂದುವರು.

ತಾವದ್ವಿಜೃಂಭತೇ ಪಾಪಂ ಬ್ರಹ್ಮಹತ್ಯಾಪುರಸ್ಸರಂ ।
ಯಾವಚ್ಛಿವಪುರಾಣಂ ಹಿ ನೋದೇಷ್ಯತಿ ಜಗತ್ಯಹೋ ।।೫।।

೫ ಇಲ್ಲಿಯವರೆವಿಗೆ ಲೋಕದಲ್ಲಿ ಶಿವಪುರಾಣವು ಪ್ರಚಾರದಲ್ಲಿರುವುದಿಲ್ಲವೋ ಅಲ್ಲಿಯವರೆವಿಗೆ ಬ್ರಹ್ಮ ಹತ್ಯಾದಿ ಪಾಪಗಳು ವಿಜೃಂಭಿಸುತ್ತವೆ. ಅಂದರೆ ಈ ಶಿವಪುರಾಣದ ಪ್ರಚಾರವು ಇರುವವರೆವಿಗೆ ಬ್ರಹ್ಮ ಹತ್ಯಾದಿ ಪಾಪಗಳು ನಿರ್ವೀರ್ಯವಾಗುತ್ತವೆ ಎಂದು ತಾತ್ಪರ್ಯ.

ತಾವತ್ಕಲಿಮಹೋತ್ಪಾತಾಃ ಸಂಚರಿಷ್ಯಂತಿ ನಿರ್ಭಯಾಃ ।
ಯಾವಚ್ಛಿವಪುರಾಣಂ ಹಿ ನೋದೇಷ್ಯತಿ ಜಗತ್ಯಹೋ ।।೬।।

೬ ಈ ಜಗತ್ತಿನಲ್ಲಿ ಈ ಶಿವಪುರಾಣವು ಎಲ್ಲಿಯವರೆವಿಗೆ ಉದಯವಾಗಿರುವುದಿಲ್ಲವೋ ಅಲ್ಲಿಯವರೆವಿಗೆ ಕಲಿಯುಗದಲ್ಲಿ ಮಹೋತ್ಪಾತಗಳು ಭಯವಿಲ್ಲದೇ ಸಂಚರಿಸುತ್ತವೆ.

ತಾವತ್ಸರ್ವಾಣಿ ಶಾಸ್ತ್ರಾಣಿ ವಿವದಂತೆ ಪರಸ್ಪರಂ ।
ಯಾವಚ್ಛಿವಪುರಾಣಂ ಹಿ ನೋದೇಷ್ಯತಿ ಜಗತ್ಯಹೋ ।।೭।।

೭ ಈ ಪ್ರಪಂಚದಲ್ಲಿ ಎಲ್ಲಿಯವರೆವಿಗೆ ಶಿವಪುರಾಣವು ಉದಯವಾಗುವುದಿಲ್ಲವೋ ಅಲ್ಲಿಯವರೆವಿಗೆ ಎಲ್ಲಾ ಶಾಸ್ತ್ರಗಳೂ ಪರಸ್ಪರ ಪೈಪೋಟಿಯಿಂದ ಮೆರೆಯುತ್ತಾ ಬ್ರಹ್ಮ ವಿಚಾರದಲ್ಲಿ ಸರಿಯಾದ ತಿಳುವಳಿಕೆ ನೀಡಲಾರವು.

ತಾವತ್ಸ್ವರೂಪಂ ದುರ್ಬೋಧಂ ಶಿವಸ್ಯ ಮಹತಾಮಪಿ ।
ಯಾವಚ್ಛಿವಪುರಾಣಂ ಹಿ ನೋದೇಷ್ಯತಿ ಜಗತ್ಯಹೋ ॥೮॥

೮ ಈ ಲೋಕದಲ್ಲಿ ಎಲ್ಲಿಯವರೆವಿಗೆ ಈ ಶಿವಪುರಾಣವು ಪ್ರಚಾರದಲ್ಲಿ ಇರುವುದಿಲ್ಲವೋ ಅಲ್ಲಿಯವರೆವಿಗೆ ಜ್ಞಾನಿಗಳಿಗೂ ಪರಬ್ರಹ್ಮನಾದ ಶಿವನ ಸ್ವರೂಪವು ತಿಳಿಯಲಾಗುವುದಿಲ್ಲ.

ತಾವದ್ಯಮಭಟಾಃ ಕ್ರೂರಾಃ ಸಂಚರಿಷ್ಯಂತಿ ನಿರ್ಭಯಾಃ ।
ಯಾವಚ್ಛಿವಪುರಾಣಂ ಹಿ ನೋದೇಷ್ಯತಿ ಜಗತ್ಯಹೋ ॥೯॥

೯ ಎಲ್ಲಿಯವರೆವಿಗೆ ಈ ಲೋಕದಲ್ಲಿ ಶಿವಪುರಾಣವು ಪ್ರಚಾರದಲ್ಲಿ ಇರುವುದಿಲ್ಲವೋ, ಅಲ್ಲಿಯವರೆವಿಗೆ ಕ್ರೂರ ರೂಪಿಗಳಾದ ಯಮಭಟರು ನಿರ್ಭಯದಿಂದ ಸಂಚರಿಸುತ್ತಾರೆ. ಅಂದರೆ ಶಿವಪುರಾಣ ಶ್ರವಣ ಮಾಡದೇ ಜನರು ಯಮಭಟರ ವಶವಾಗುವರೆಂದು ತಾತ್ಪರ್ಯ.

ತಾವತ್ಸರ್ವಪುರಾಣಾನಿ ಪ್ರಗರ್ಜಂತಿ ಮಹೀತಲೆ ।
ಯಾವಚ್ಛಿವಪುರಾಣಂ ಹಿ ನೋದೇಷ್ಯತಿ ಜಗತ್ಯಹೋ ॥೧೦॥

೧೦ ಎಲ್ಲಿಯವರೆವಿಗೆ ಶಿವಪುರಾಣವು ಈ ಜಗತ್ತಿನಲ್ಲಿ ಉದಯವಾಗಿರುವುದಿಲ್ಲವೋ ಅಲ್ಲಿಯವರೆವಿಗೆ ಉಳಿದ ಪುರಾಣಗಳೆಲ್ಲವೂ ವಿಜೃಂಭಿಸುತ್ತವೆ. ಅಂದರೆ ಶಿವಪುರಾಣವೇ ಉಳಿದ ಪುರಾಣಗಳಿಗಿಂತ ಶ್ರೇಷ್ಠವೆಂದು ತಾತ್ಪರ್ಯ.

ತಾವತ್ಸರ್ವಾಣಿ ತೀರ್ಥಾನಿ ವಿವದಂತೇ ಮಹೀತಲೇ ।
ಯಾವಚ್ಛಿವಪುರಾಣಂ ಹಿ ನೋದೇಷ್ಯತಿ ಜಗತ್ಯಹೋ ॥೧೧॥

೧೧ ಎಲ್ಲಿಯವರೆವಿಗೆ ಶಿವಪುರಾಣವು ಈ ಜಗತ್ತಿನಲ್ಲಿ ಉದಯಿಸುವುದಿಲ್ಲವೋ ಅಲ್ಲಿಯವರೆವಿಗೆ ಎಲ್ಲಾ ಮಂತ್ರಗಳೂ ತಾವೇ ಶ್ರೇಷ್ಟವೆಂದು ತಿಳಿದಿರುತ್ತವೆ.

ತಾವತ್ಸರ್ವೇ ಮುದಾ ಮಂತ್ರಾ ವಿವದಂತೇ ಮಹೀತಲೇ ।
ಯಾವಚ್ಛಿವಪುರಾಣಂ ಹಿ ನೋದೇಷ್ಯತಿ ಮಹೀತಲೇ ॥೧೨॥

೧೨ ಈ ಪ್ರಪಂಚದಲ್ಲಿ ಎಲ್ಲಿಯವರೆವಿಗೆ ಈ ಶಿವಪುರಾಣವು ಉದಯಿಸುವುದಿಲ್ಲವೋ ಅಲ್ಲಿಯವರೆವಿಗೆ ಎಲ್ಲಾ ಮಂತ್ರಗಳೂ ತಾವೇ ಶ್ರೇಷ್ಟವೆಂದು ತಿಳಿದಿರುತ್ತವೆ.

ತಾವತ್ಸರ್ವಾಣಿ ಕ್ಷೇತ್ರಾಣಿ ವಿವದಂತೇ ಮಹೀತಲೇ ।
ಯಾವಚ್ಛಿವಪುರಾಣಂ ಹಿ ನೋದೇಷ್ಯತಿ ಮಹೀತಲೇ ॥೧೩॥

೧೩ ಈ ಜಗತ್ತಿನಲ್ಲಿ ಎಲ್ಲಿಯವರೆವಿಗೆ ಶಿವಪುರಾಣವು ಉದಯಿಸುವುದಿಲ್ಲವೋ ಅಲ್ಲಿಯವರೆವಿಗೆ ಈ ಭೂಮಿಯಲ್ಲಿ ಎಲ್ಲಾ ಕ್ಷೇತ್ರಗಳಳೂ ತಾವೇ ಶ್ರೇಷ್ಟವೆಂದು ಮೆರೆಯುತ್ತಲಿರುವುವು.

ತಾವತ್ಸರ್ವಾಣಿ ಪೀತಾನಿ ವಿವದಂತೇ ಮಹೀತಲೇ ।
ಯಾವಚ್ಛಿವಪುರಾಣಂ ಹಿ ನೋದೇಷ್ಯತಿ ಮಹೀತಲೇ ॥೧೪॥

೧೪ ಈ ಲೋಕದಲ್ಲಿ ಎಲ್ಲಿಯವರೆವಿಗೆ ಶಿವಪುರಾಣವು ವಿಜೃಂಭಿಸುವುದಿಲ್ಲವೋ ಅಲ್ಲಿಯವರೆವಿಗೆ ಎಲ್ಲಾ ಪೀಠಗಳೂ ತಾವೇ ಸರ್ವ ಶ್ರೇಷ್ಟವೆಂದೂ ವಾದಿಸುತ್ತಿರುತ್ತವೆ.

ತಾವತ್ಸರ್ವಾಣಿ ದಾನಾನಿ ವಿವದಂತೇ ಮಹೀತಲೇ ।
ಯಾವಚ್ಛಿವಪುರಾಣಂ ಹಿ ನೋದೇಷ್ಯತಿ ಮಹೀತಲೇ ॥೧೫॥

೧೫ ಎಲ್ಲಿಯವರೆವಿಗೆ ಈ ಲೋಕದಲ್ಲಿ ಶಿವಪುರಾಣವು ಪ್ರಚಾರದಲ್ಲಿರುವುದಿಲ್ಲವೋ ಅಲ್ಲಿಯವರೆವಿಗೆ ಎಲ್ಲಾ ದಾನಗಳೂ ತಾವೇ ಸರ್ವ ಶ್ರೇಷ್ಟವೆಂದು ತಿಳಿಯುತ್ತವೆ.

ತಾವತ್ಸರ್ವೇ ಚ ತೇ ದೇವಾ ವಿವದಂತೇ ಮಹೀತಲೇ ।
ಯಾವಚ್ಛಿವಪುರಾಣಂ ಹಿ ನೋದೇಷ್ಯತಿ ಮಹೀತಲೇ ॥೧೬॥

೧೬ ಎಲ್ಲಿಯವರೆವಿಗೆ ಈ ಲೋಕದಲ್ಲಿ ಶಿವಪುರಾಣವು ಉದಯಿಸುವುದಿಲ್ಲವೋ ಅಲ್ಲಿಯವರೆವಿಗೆ ಎಲ್ಲಾ ದೇವತೆಗಳೂ ತಾವೇ ಶ್ರೇಷ್ಟವೆಂದೂ ತಿಳಿದಿರುತ್ತವೆ.

ತಾವತ್ಸರ್ವೇಚ ಸಿದ್ಧಾಂತಾ ವಿವದಂತೇ ಮಹೀತಲೇ ।
ಯಾವಚ್ಛಿವಪುರಾಣಂ ಹಿ ನೋದೇಷ್ಯತಿ ಮಹೀತಲೇ ॥೧೭॥

೧೭ ಈ ಲೋಕದಲ್ಲಿ ಎಲ್ಲಿಯವರೆವಿಗೆ ಈ ಶಿವಪುರಾಣವು ಉದಯಿಸುವುದಿಲ್ಲವೋ ಅಲ್ಲಿಯವರೆವಿಗೆ ಎಲ್ಲಾ ಸಿದ್ಧಾಂತಗಳೂ ತಾವೇ ಹೆಚ್ಚಿನವೆಂದು ವಾದಿಸುತ್ತಿರುತ್ತವೆ.

ಅಸ್ಯ ಶೈವಪುರಾಣಸ್ಯ ಕೀರ್ತನಶ್ರವಣಾದ್ವಿಜಾಃ ।
ಫಲಂ ವಕ್ತುಂ ನ ಶಕ್ನೋಮಿ ಕಾರ್ತ್ಸ್ನ್ಯೇನ ಮುನಿಸತ್ತಮಾಃ ॥೧೮॥

೧೮ ಎಲೈ ಮುನಿಶ್ರೇಷ್ಠರೇ, ಈ ಶಿವಪುರಾಣದ ಹೇಳುವಿಕೆ, ಕೇಳುವಿಕೆಯಿಂದ ಏನು ಫಲವುಂಟೆಂದು ಪೂರ್ತಿಯಾಗಿ ಹೇಳಲು ನಾನು ಶಕ್ತನಲ್ಲ. ಅಂದರೆ ಫಲವು ಬಹಳವಾಗಿರುವುದೆಂದು ತಾತ್ಪರ್ಯ.

ತಥಾಪಿ ತಸ್ಯ ಮಾಹಾತ್ಮ್ಯಂ ವಕ್ಷ್ಯೇ ಕಿಂಚಿತ್ತು ವೋऽನಘಾಃ ।
ಚಿತ್ತಮಾಧಾಯ ಶೃಣುತ ವ್ಯಾಸೇನೋಕ್ತಂ ಪುರಾ ಮಮ ॥೧೯॥

೧೯ ಹಾಗಿದ್ದರೂ ಸಹ ಎಲೈ ಪುಣ್ಯಶೀಲರೇ, ನಾನು ಶ್ರೀ ವ್ಯಾಸರಿಂದ ಕೇಳಲ್ಪಟ್ಟ ವಿಚಾರವನ್ನು ಸ್ವಲ್ಪಮಟ್ಟಿಗೆ ಹೇಳುತ್ತೇನೆ, ಮನಸ್ಸಿಟ್ಟು ಕೇಳಿ.

ಏತಚ್ಛಿವಪುರಾಣಂ ಹಿ ಶ್ಲೋಕಂ ಶ್ಲೋಕಾರ್ಧಮೇವ ವಾ ।
ಯಃ ಪಠೇದ್ಭಕ್ತಿಸಂಯುಕ್ತಃ ಸ ಪಾಪಾನ್ಮುಚ್ಯತೇ ಕ್ಷಣಾತ್ ॥೨೦॥

೨೦ ಈ ಶಿವಪುರಾಣದ ಶ್ಲೋಕವನ್ನು ಆಗಲಿ, ಅಥವಾ ಒಂದು ಶ್ಲೋಕ, ಶ್ಲೋಕದ ಅರ್ಧ ಭಾಗವನ್ನಾಗಲೀ ಯಾವನು ಭಕ್ತಿಯಿಂದ ಓದುವನೋ ಅವನು ಆ ಕ್ಷಣದಲ್ಲಿಯೇ ಪಾಪಗಳಿಂದ ಬಿಡಲ್ಪಡುವವನಾಗುವನು.

ಏತಚ್ಛಿವಪುರಾಣಂ ಹಿ ಯಃ ಪ್ರತ್ಯಹಮತಂದ್ರಿತಃ ।
ಯಥಾಶಕ್ತಿ ಪಠೇದ್ಭಕ್ತ್ಯಾ ಸ ಜೀವನ್ಮುಕ್ತ ಉಚ್ಯತೇ ॥೨೧॥

೨೧ ಈ ಶಿವಪುರಾಣವನ್ನು ಯಾರು ನಿಯಮ ಪುರಸ್ಸರವಾಗಿ ಯಥಾಶಕ್ತಿ ಭಕ್ತಿಯಿಂದ ಪಠಿಸುವರೋ ಅವರು ಜೀವನ್ಮುಕ್ತ ಎನಿಸುವನು.

ಏತಚ್ಛಿವಪುರಾಣಂ ಹಿ ಯೋ ಭಕ್ತ್ಯಾರ್ಚಯತೇ ಸದಾ ।
ದಿನೇ ದಿನೇಽಶ್ವಮೇಧಸ್ಯ ಫಲಂ ಪ್ರಾಪ್ನೋತ್ಯ ಸಂಶಯಂ ॥೨೨॥

೨೨ ಯಾರು ಈ ಶಿವಪುರಾಣವನ್ನು ಯಾವಾಗಲೂ ಭಕ್ತಿಯಿಂದ ಪೂಜಿಸುವರೋ ಅಂತಹವರು ಪ್ರತಿದಿನದಲ್ಲೂ ಅಶ್ವಮೇಧ ಯಾಗದ ಫಲವನ್ನು ಹೊಂದುವರು ಇದರಲ್ಲಿ ಸಂಶಯವಿಲ್ಲ.

ಏತಚ್ಛಿವಪುರಾಣಂ ಯಸ್ಸಾಧಾರಣಪದೇಚ್ಛಯಾ ।
ಅನ್ಯತಃ ಶೃಣುಯಾತ್ಸೋಽಪಿ ಮತ್ರ್ಯೋ ಮುಚ್ಯೇತ ಪಾತಕಾತ್ ॥೨೩॥

೨೩ ಸಾಧಾರಣವಾದ ಇಷ್ಟಾರ್ಥ ಪ್ರಾಪ್ತಿಗಾಗಿ ಈ ಪುರಾಣವನ್ನು ನನ್ನಿಂದಲಾಗಲೀ, ಬೇರೆಯವರಿಂದಲಾಗಲೀ, ಯಾರು ಕೇಳುತ್ತಾರೋ ಅಂತಹವರೂ ಸಹ ಸಕಲ ಪಾಪಗಳಿಂದ ಬಿಡಲ್ಪಡುವವರಾಗುತ್ತಾರೆ.

ಏತಚ್ಛಿವಪುರಾಣಂ ಯೋ ನಮಸ್ಕುರ್ಯಾದದೂರತಃ ।
ಸರ್ವದೇವಾರ್ಚನಫಲಂ ಸ ಪ್ರಾಪ್ನೋತಿ ನ ಸಂಶಯಃ ॥೨೪॥

೨೪ ಈ ಶ್ರೀ ಶಿವಪುರಾಣವನ್ನು ಯಾರು ದೂರದಿಂದ ನಮಸ್ಕರಿಸುತ್ತಾರೋ ಅಂತಹವರು ಎಲ್ಲಾ ದೇವತೆಗಳಲ್ಲಿ ಪೂಜಿಸಿದರೆ ಬರುವ ಪುಣ್ಯವನ್ನು ಹೊಂದುವರು ಇದರಲ್ಲಿ ಸಂಶಯವಿಲ್ಲ.

ಏತಚ್ಛಿವಪುರಾಣಂ ವೈ ಲಿಖಿತ್ವಾ ಪುಸ್ತಕಂ ಸ್ವಯಂ ।
ಯೋ ದದ್ಯಾಚ್ಛಿವಭಕ್ತೇಭ್ಯಸ್ತಸ್ಯ ಪುಣ್ಯಫಲಂ ಶೃಣು ॥೨೫॥

೨೫ ಯಾರು ಈ ಶಿವಪುರಾಣವನ್ನು ಪುಸ್ತಕ ರೂಪದಲ್ಲಿ ಬರೆದು ಶಿವಭಕ್ತರಿಗೆ ಕೊಡುವರೋ ಅಂತಹ ಪುರುಷನ ಪುಣ್ಯಫಲವನ್ನು ಹೇಳುವೆನು ಕೇಳು.

ಅಧೀತೇಷು ಚ ಶಾಸ್ತ್ರೇಷು ವೇದೇಷು ವ್ಯಾಕೃತೇಷು ಚ ।
ಯತ್ಫಲಂ ದುರ್ಲಭಂ ಲೋಕೇ ತತ್ಫಲಂ ತಸ್ಯ ಸಂಭವೇತ್ ॥೨೬॥

೨೬ ಸಮಸ್ತ ಶಾಸ್ತ್ರವನ್ನು ವ್ಯಾಸಂಗ ಮಾಡಿ, ವೇದಗಳಿಗೆ ವ್ಯಾಖ್ಯಾನ ಮಾಡಿದರೆ ಯಾವ ಫಲವು ಲಭಿಸುವುದೋ ಅಂತಹ ದುರ್ಲಭವಾದ ಫಲವು ಶಿವಪುರಾಣ ಬರೆದ ಮನುಷ್ಯನಿಗೆ ಲಭಿಸುವುದು.

ಏತಚ್ಛಿವಪುರಾಣಂ ಹಿ ಚತುರ್ದಶ್ಯಾಮುಪೋಷಿತಃ ||
ಶಿವಭಕ್ತಸಭಾಯಾಂ ಯೋ ವ್ಯಾಕರೋತಿ ಸ ಉತ್ತಮಃ ||೨೭||

೨೭ ಯಾರು ಈ ಶಿವಪುರಾಣವನ್ನು ಚತುರ್ದಶಿಯಲ್ಲಿ ಉಪವಾಸವಿದ್ದು ಶಿವಭಕ್ತರಿಂದ ಕೂಡಿದ ಸಭೆಯಲ್ಲಿ ವ್ಯಾಖ್ಯಾನ ಮಾಡುವನೋ ಅವನೇ ಉತ್ತಮನು.

ಪ್ರತ್ಯಕ್ಷರಂ ತು ಗಾಯತ್ರೀಪುರಶ್ಚರ್ಯಾಫಲಂ ಲಭೇತ್ |
ಇಹ ಭುಕ್ತ್ವಾಖಿಲಾನ್ಕಾಮಾನಂತೇ ನಿರ್ವಾಣತಾಂ ವ್ರಜೇತ್ ||೨೮||

೨೮ ಈ ರೀತಿ ವ್ಯಾಖ್ಯಾನ ಮಾಡುವಂತಹವನು ಅಥವಾ ಬರೆದವನು ಪ್ರತಿ ಅಕ್ಷರಕ್ಕೂ ಸಹ ಗಾಯತ್ರೀ ಮಂತ್ರದ ಪುರಶ್ಚರಣ ಫಲವನ್ನು ಹೊಂದುವನು,ಇಷ್ಟೇ ಅಲ್ಲದೇ ಈ ಲೋಕದಲ್ಲಿ ಎಲ್ಲಾ ಸುಖವನ್ನು ಹೊಂದಿ ಕೊನೆಗೆ ಮೋಕ್ಷವನ್ನು ಹೊಂದುವನು.

ಉಪೋಷಿತಶ್ಚತುರ್ದಶ್ಯಾಂ ರಾತ್ರೌ ಜಾಗರಣಾನ್ವಿತಃ ||
ಯಃ ಪಠೇಚ್ಛೃಣುಯಾದ್ವಾಪಿ ತಸ್ಯ ಪುಣ್ಯಂ ವದಾಮ್ಯಹಂ ||೨೯||

೨೯ ಇದೇ ಶ್ರೀ ಶಿವಪುರಾಣವನ್ನು ಚತುರ್ದಶಿಯ ದಿನ ಉಪವಾಸವಿದ್ದು ರಾತ್ರಿಯಲ್ಲಿ ಜಾಗರಣೆಯಿಂದಲೂ ಇದ್ದು ಯಾವನು ಓದುವನೋ ಕೇಳುವನೋ ಅಂತಹವನ ಪುಣ್ಯವಿಶೇಷವನ್ನು ಹೇಳುವೆನು ಕೇಳು.

ಕುರುಕ್ಷೇತ್ರಾದಿನಿಖಿಲಪುಣ್ಯತೀರ್ಥೇಷ್ವನೇಕಶಃ |
ಆತ್ಮತುಲ್ಯಧನಂ ಸೂರ್ಯಗ್ರಹಣೇ ಸರ್ವತೋಮುಖೇ ||೩೦||

೩೦ ಕುರುಕ್ಷೇತ್ರವೇ ಮೊದಲಾದ ಸಮಸ್ತವಾದ ಅನೇಕ ಪುಣ್ಯಕ್ಷೇತ್ರಗಳಲ್ಲಿ, ಅನೇಕ ತೀರ್ಥಕ್ಷೇತ್ರಗಳಲ್ಲಿ, ಸೂರ್ಯಗ್ರಹಣ ಕಾಲದಲ್ಲಿ ತನ್ನ ಶರೀರ ತೂಕದಷ್ಟು ಧನವನ್ನು,

ವಿಪ್ರೇಭ್ಯೋ ವ್ಯಾಸಮುಖ್ಯೇಭ್ಯೋ ದತ್ವಾ ಯತ್ಫಲಮಶ್ನುತೇ |
ತತ್ಫಲಂ ಸಂಭವೇತ್ತಸ್ಯ ಸತ್ಯಂ ಸತ್ಯಂ ನ ಸಂಶಯಃ ||೩೧||

೩೧ ವ್ಯಾಸ ಮಹರ್ಷಿಗಳೇ ಮೊದಲಾದ ಬ್ರಹ್ಮ ಜ್ಞಾನಿಗಳಿಗೆ ಬ್ರಾಹ್ಮಣರಿಗೆ ದಾನ ಮಾಡಿದರೆ ಯಾವ ಪುಣ್ಯವು ಲಭಿಸುವುದೋ ಅಂತಹಪುಣ್ಯವು ಅವನಿಗೆ ಸತ್ಯವಾಗಿಯೂ

ಲಬಿಸುತ್ತದೆ. ಸತ್ಯವಾಗಿಯೂ ಇದರಲ್ಲಿ ಸಂಶಯವಿಲ್ಲ.

ಏತಚ್ಛಿವಪುರಾಣಂ ಹಿ ಗಾಯತೇ ಯೋऽಪ್ಯಹರ್ನಿಶಂ ।
ಅಜ್ಞಾಂ ತಸ್ಯ ಪ್ರತೀಕ್ಷೇಶನ್ದೇವಾ ಇಂದ್ರಪುರೋಗಮಾಃ ॥೩೨॥

೩೨ ಯಾರು ಈ ಪವಿತ್ರ ಶಿವಪುರಾಣವನ್ನು ಹಗಲೂರಾತ್ರಿಗಳಲ್ಲಿಯ ಹಾಡುತ್ತಿರುವಿರೋ ಅಂತಹವರ ಆಜ್ಞೆಯನ್ನು ಪಾಲಿಸಲು ಇಂದ್ರನೇ ಮೊದಲಾ ದೇವತೆಗಳೆಲ್ಲರೂ ಸದಾ ಕಾಯುತ್ತಿರುವರು.

ಏತಚ್ಛಿವಪುರಾಣಂ ಯಃ ಪಠಂಚ್ಛೃಣ್ವನ್ಹಿ ನಿತ್ಯಶಃ ।
ಯದ್ಯತ್ಕರೋತಿ ಸತ್ಕರ್ಮ ತತ್ಕೋಟಿಗುಣಿತಂ ಭವೇತ್ ॥೩೩॥

೩೩ ಯಾರು ಈ ಶಿವಪುರಾಣವನ್ನು ನಿತ್ಯದಲ್ಲಿಯೂ ಹೇಳುವುದು ಮತ ಕೇಳುವುದನ್ನು ಮಾಡುವರೋ ಅಂತಹವರು ಯಾವಕಾರ್ಯ ಮಾಡಿದರೂ ಒಳ್ಳೆ ಕಾರ್ಯ ಅದಕ್ಕೆ ಕೋಟಿ ಗುಣಿತ ಫಲ ಪ್ರಾಪ್ತವಾಗುವುದು.

ಸಮಾಹಿತಃ ಪಠೇದ್ಯಸ್ತು ತತ್ರ ಶ್ರೀರುದ್ರಸಂಹಿತಾಂ ॥
ಸ ಬ್ರಹ್ಮಘ್ನೋऽಪಿ ಪೂತಾತ್ಮಾ ತ್ರಿಭಿರೇವ ದಿನೈರ್ಭವೇತ್ ॥೩೪॥

೩೪ ಈ ಶಿವ ಪುರಾಣದ ಭಾಗವಾದ ಶ್ರೀ ರುದ್ರ ಸಂಹಿತೆಯನ್ನು ಯಾವನು ಶು ಮನಸ್ಸಿನಿಂದ ಓದುವನೋ ಅಂತಹವನು ಬ್ರಹ್ಮ ಹತ್ಯಾಪಾಪವನ್ನು ಹೊಂದಿದ್ದರೂ ಮೂರು ದಿನಗಳಲ್ಲೇ ಪಾಪವಿಮುಕ್ತನಾಗಿ ಶುದ್ಧನಾಗುವನು.

ತಾಂ ರುದ್ರಸಂಹಿತಾಂ ಯಸ್ತು ಭೈರವಪ್ರತಿಮಾಂತಿಕೇ ॥
ತ್ರಿಃ ಪಠೇತ್ಪ್ರತ್ಯಹಂ ಮೌನೀ ಸ ಕಾಮಾನಖಿಲಾಂಲ್ಲಭೇತ್ ॥೩೫॥

೩೫ ಇದೇ ರುದ್ರ ಸಂಹಿತೆಯನ್ನು ಯಾರು ಭೈರವನ ಸನ್ನಿಧಿಯಲ್ಲಿ ಪ್ರತಿದಿನದಲ್ಲೂ ಮೂರು ಬಾರಿ ಪಠಿಸುವವನು ಸಮಸ್ತ ಇಷ್ಟಾರ್ಥವನ್ನೂ ಹೊಂದುವನು.

ತಾಂ ರುದ್ರಸಂಹಿತಾಂ ಯಸ್ತು ಸಂಪಠೇದ್ವಟಬಿಲ್ವಯೋಃ ॥
ಪ್ರದಕ್ಷಿಣಾಂ ಪ್ರಕುರ್ವಾಣೋ ಬ್ರಹ್ಮಹತ್ಯಾ ನಿವರ್ತತೇ ॥೩೬॥

೩೬ ಈ ರುದ್ರ ಸಂಹಿತೆಯನ್ನು ಆಲದ ಮರ, ಬಿಲ್ವ ವೃಕ್ಷಗಳ ಬಳಿಯಲ್ಲಿ ಪ್ರದಕ್ಷಿಣೆ ಮಾಡುತ್ತಾ ಚೆನ್ನಾಗಿ ಪಠಿಸಿದರೆ ಬ್ರಹ್ಮ ಹತ್ಯಾಪಾಪದಿಂದ ಬಿಡಲ್ಪಡುತ್ತಾನೆ.

**ಕೈಲಾಸಸಂಹಿತಾ ತತ್ರ ತತೋಽಪಿ ಪರಮಾ ಸ್ಮೃತಾ ||**
**ಬ್ರಹ್ಮಸ್ವರೂಪಿಣೀ ಸಾಕ್ಷಾತ್ಪ್ರಣವಾರ್ಥಪ್ರಕಾಶಿತಾ ||೩೭||**

೩೭ ಅದರಲ್ಲಿಯೂ ಈ ಶಿವ ಪುರಾಣದ ಕೈಲಾಸ ಸಂಹಿತೆ ಎಂಬುದು ಈ ರುದ್ರ ಸಂಹಿತೆಗಿಂತಲೂ ಅತ್ಯಂತ ಶ್ರೇಷ್ಠವಾಗಿರುವುದು. ಅದು ಬ್ರಹ್ಮಸ್ವರೂಪವಾಗಿದ್ದು, ಓಂಕಾರದರ್ಥವನ್ನು ವಿಶೇಷವಾಗಿ ಪ್ರಕಾಸ ಪಡಿಸುತ್ತದೆ.

**ಕೈಲಾಸಸಂಹಿತಾಯಾಸ್ತು ಮಾಹಾತ್ಮ್ಯಂವೇತ್ತಿ ಶಂಕರಃ ||**
**ಕೃತ್ಸ್ನಂ ತದರ್ಧಂ ವ್ಯಾಸಶ್ಚ ತದರ್ಧಂ ವೇದ್ಮ್ಯಹಂ ದ್ವಿಜಾಃ ||೩೮||**

೩೮ ಈ ಕೈಲಾಸ ಸಂಹಿತೆಯ ಮಹಾತ್ಮೆಯನ್ನು ಸಂಪೂರ್ಣವಾಗಿ ಈಶ್ವರನೊಬ್ಬನೇ ಬಲ್ಲನು. ಇದರ ಮಹಾತ್ಮೆಯನ್ನು ನನ್ನ ಗುರುವಾದ ವ್ಯಾಸ ಮಹರ್ಷಿಗಳು ಅರ್ಥವನ್ನು ತಿಳಿದಿದ್ದಾರೆ. ನಾನಾದರೋ ಅವರು ತಿಳಿದಿದ್ದರಲ್ಲಿ ಬರಿಯ ಅರ್ಧಭಾಗವನ್ನು ಮಾತ್ರ ಅರಿತಿದ್ದೇನೆ.

**ತತ್ರ ಕಿಂಚಿತ್ಪ್ರವಕ್ಷ್ಯಾಮಿ ಕೃತ್ಸ್ನಂ ವಕ್ತುಂ ನ ಶಕ್ಯತೇ ||**
**ಯಜ್ಞಾತ್ವಾ ತತ್ಕ್ಷಣಾಲ್ಲೋಕಶ್ಚಿತ್ತಶುದ್ಧಿಮವಾಪ್ನುಯಾತ್ ||೩೯||**

೩೯ ಇದರಲ್ಲಿ ಸ್ವಲ್ಪ ವಿಚಾರವನ್ನು ಹೇಳುತ್ತೇನೆ. ಪೂರ್ತಿಯಾಗಿರುವ ವಿಚಾರವನ್ನು ಹೇಳಲು ನನಗೆ ಅಸಾಧ್ಯ ಸಾಧ್ಯವಿಲ್ಲ. ಯಾವ ಈ ಕೈಲಾಸ ಸಂಹಿತೆಯ ವಿಚಾರವನ್ನು ತಿಳಿಯುವ ಮಾತ್ರದಿಂದಲೇ ಮನಶುದ್ಧಿಯನ್ನು ಪಡೆಯುವುದು.

**ನ ನಾಶಯತಿ ಯತ್ಪಾಪಂ ಸಾ ರೌದ್ರೀ ಸಂಹಿತಾ ದ್ವಿಜಾಃ ||**
**ತನ್ನ ಪಶ್ಯಾಮ್ಯಹಂ ಲೋಕೇ ಮಾರ್ಗಮಾಣೋಽಪಿ ಸರ್ವದಾ ||೪೦||**

೪೦ ರುದ್ರ ಸಂಹಿತಾ ಪಠನದಿಂದ ಯಾವ ಪಾಪವು ನಾಶವಾಗಲಾರದೋ, ಅಂತಹ ಪಾಪವು ನಾಶವಾಗುವ ಉಪಾಯವು ಬೇರೆ ಈ ಲೋಕದಲ್ಲಿ ಚಿಂತಿಸದಾಗ್ಯೂ ನನಗೆ ಕಾಣುತ್ತಿಲ್ಲ.

ಶಿವೇನೋಪನಿಷತ್ಸಿಂಧುಮನ್ಥನೋತ್ಪಾದಿತಾಂ ಮುದಾ ||
ಕುಮಾರಾಯಾರ್ಪಿತಾಂ ತಾಂ ವೈ ಸುಧಾಂ ಪೀತ್ವಾಽಮರೋ ಭವೇತ್ ||೪೧||

೪೧ ಪರಮೇಶ್ವರನಿಂದ ಸಮಸ್ತ ಉಪನಿಷತ್ತುಗಳೂ ಕಡೆಯಲ್ಪಟ್ಟು, ಅವುಗಳ ಸಾರವನ್ನು ಉತ್ಪಾದಿಸಿ ಕುಮಾರನಿಗೆ ಕೊಟ್ಟನು. ಅವನು ಅಂತಹ ಸರ್ವೋಪನಿಷತ್ಸಾರವನ್ನು ಕುಡಿದು, ಅಮರ ಮರಣವಿಲ್ಲದವನಾದನು. ಅಂದರೆ ಎಲ್ಲಾ ಉಪನಿಷತ್ತುಗಳಲ್ಲಿರುವ ವಿಚಾರಗಳ ಸಾರವನ್ನು ಒಂದೆಡೆ ಸಂಗ್ರಹಿಸಿ ಪರಮೇಶ್ವರನು ಅನುಗ್ರಹಿಸಿದ್ದಾನೆ ಎಂದು ತಾತ್ಪರ್ಯ.

ಬ್ರಹ್ಮಹತ್ಯಾದಿಪಾಪಾನಾಂ ನಿಷ್ಕೃತಿಂ ಕರ್ತುಮುದ್ಯತಃ ||
ಮಾಸಮಾತ್ರಂ ಸಂಹಿತಾಂ ತಾಂ ಪಠಿತ್ವಾ ಮುಚ್ಯತೇ ತತಃ ||೪೨||

೪೨ ಬ್ರಹ್ಮ ಹತ್ಯಾ ಪಾಪವನ್ನು ಹೋಗಲಾಡಿಸಿಕೊಳ್ಳಲು ಪ್ರಯತ್ನಿಸಿ ಈ ಕೈಲಾಸ ಸಂಹಿತೆಯನ್ನು ಒಂದು ತಿಂಗಳು ನಿಯಮದಿಂದ ಪಠಿಸಿದರೆ ಅಂತಹವನು ಈ ಪಾಪದಿಂದ ಮುಕ್ತನಾಗುತ್ತಾನೆ.

ದುಷ್ಪ್ರತಿಗ್ರಹದುರ್ಭೋಜ್ಯದುರಾಲಾಪಾದಿಸಂಭವಂ ।
ಪಾಪಂ ಸಕೃತ್ಕೀರ್ತನೇನ ಸಂಹಿತಾ ಸಾ ವಿನಾಶಯೇತ್ ||೪೩||

೪೩ ಈ ಕೈಲಾಸ ಸಂಹಿತೆಯ ಪಾರಾಯಣದಿಂದ, ಕೆಟ್ಟದಾನ ಸ್ವೀಕಾರದಿಂದ ಬರುವ ಪಾಪ, ದುಷ್ಟಾನ್ನ ಭೋಜನ, ದುಷ್ಟವಾದ, ದೇವತಾ ಗುರುಗಳ ನಿಂದನೆ ಮೊದಲಾದ ಪಾಪಗಳು ನಾಶವಾಗುವುದು.

ಶಿವಾಲಯೇ ಬಿಲ್ವವನೇ ಸಂಹಿತಾಂ ತಾಂ ಪಠೇತ್ತು ಯಃ ।
ಸ ಯತ್ಫಲಮವಾಪ್ನೋತಿ ತದ್ವಾಚೋಽಪಿ ನ ಗೋಚರೇ ||೪೪||

೪೪ ಈಶ್ವರನ ದೇವಾಲಯಗಳಲ್ಲಿಯಾಗಲೀ, ಬಿಲ್ವವನದಲ್ಲಿಯಾಗಲೀ ಈ ಸಂಹಿತೆಯನ್ನು ಪಠನ ಮಾಡುವಿಕೆಯಿಂದ ಪಡೆಯುವ ಪುಣ್ಯ ವಿಶೇಷವನ್ನು ನನಗೆ ಬಾಯಿ ಮಾತಿನಲ್ಲಿ ಹೇಳಲು ಸಾಧ್ಯವಿಲ್ಲವು.

ಸಂಹಿತಾಂ ತಾಂ ಪಠನ್ಭಕ್ತ್ಯಾ ಯಃ ಶ್ರಾದ್ಧೇ ಭೋಜಯೇದ್ದ್ವಿಜಾನ್ ।
ತಸ್ಯ ಯೇ ಪಿತರಃ ಸರ್ವೇ ಯಾಂತಿ ಶಂಭೋಃ ಪರಂ ಪದಂ ||೪೫||

೪೫ ಯಾರು ತನ್ನ ಪಿತೃಗಳ ಶ್ರಾದ್ಧಕಾಲದಲ್ಲಿ ಈ ಸಂಹಿತೆಯನ್ನು ಪಠಿಸುತ್ತಾ ಬ್ರಾಹ್ಮಣ ಭೋಜನವನ್ನು ಮಾಡಿಸುವರೋ, ಅಂತಹವರ ಪಿತೃಗಳು ಈಶ್ವರನ ವಾಸಸ್ಥಾನವಾದ ಕೈಲಾಸವನ್ನು ಸೇರುವರು.

**ಚತುರ್ದಶ್ಯಾಂ ನಿರಾಹಾರೋ ಯಃ ಪಠೇತ್ಸಂಹಿತಾಂ ಚ ತಾಂ ।**
**ಬಿಲ್ವ ಮೂಲೇ ಶಿವಃ ಸಾಕ್ಷಾತ್ಸ ದೇವೈಶ್ಚ ಪ್ರಪೂಜ್ಯತೇ ॥೪೬॥**

೪೬ ಯಾವ ಮನುಷ್ಯನು ಚತುರ್ದಶಿ ತಿಥಿಯಲ್ಲಿ ನಿರಾಹಾರನಾಗಿ ಬಿಲ್ವಮೂಲದಲ್ಲಿ ಈ ಕೈಲಾಸ ಸಂಹಿತೆಯನ್ನು ಪಠಿಸುವನೋ, ಅಂತಹವನು ಸಾಕ್ಷಾತ್ ಶಿವನೇ ಆಗಿ ದೇವತೆಗಳಿಂದ ಪೂಜಿಸಲ್ಪಡುವವನು.

**ಅಪ್ಯನ್ಯಾಃ ಸಂಹಿತಾಸ್ತತ್ರ ಸರ್ವಕಾಮಫಲಪ್ರದಾಃ ।**
**ಉಭೇ ವಿಶಿಷ್ಟೇ ವಿಜ್ಞೇಯೇ ಲೀಲಾವಿಜ್ಞಾನಪೂರಿತೇ ॥೪೭॥**

೪೭ ಈ ಪುರಾಣದಲ್ಲಿ ಸರ್ವಕಾಮನೆಗಳನ್ನು ನೀಡುವಂತಹ ಬೇರೆ ಸಂಹಿತೆಗಳೂ ಇರುವುವು. ಆದರೆ ರುದ್ರ ಸಂಹಿತೆ ಮತ್ತು ಕೈಲಾಸ ಸಂಹಿತೆಯಲ್ಲಿ ವಿಶೇಷವಾಗಿ ಶಿವನ ಲೀಲೆಗಳೂ ಮತ್ತು ಬ್ರಹ್ಮ ಜ್ಞಾನವನ್ನೂ ಉಪದೇಶಿಸಲ್ಪಡುವುದರಿಂದ ಅತ್ಯಂತ ಉತ್ಕೃಷ್ಟಗಳಾಗಿವೆ.

**ತದಿದಂ ಶೈವಮಾಖ್ಯಾತಂ ಪುರಾಣಂ ವೇದಸಂಮಿತಂ ।**
**ನಿರ್ಮಿತಂ ತಚ್ಛಿವೇನೈವ ಪ್ರಥಮಂ ಬ್ರಹ್ಮಸಂಮಿತಂ ॥೪೮॥**

೪೮ ಆದ್ದರಿಂದ ಈ ಶಿವಪುರಾಣವು ವೇದಕ್ಕೆ ಸಮಾನವಾದುದು ಮತ್ತು ಬ್ರಹ್ಮಜ್ಞಾನವನ್ನೂ ತಿಳಿಸುವಂತಹದ್ದಾಗಿ ಶಿವನಿಂದಲೇ ನಿರ್ಮಿತವಾಗಿರುವುದು.

**ವಿದ್ಯೇಶಂ ಚ ತಥಾ ರೌದ್ರಂ ವೈನಾಯಕಮಥೌಮಿಕಂ ।**
**ಮಾತ್ರಂ ರುದ್ರೈಕಾದಶಕಂ ಕೈಲಾಸಂ ಶತರುದ್ರಕಂ ॥೪೯॥**

೪೯ ಈ ಶಿವಪುರಾಣದಲ್ಲಿ ವಿದ್ಯೇಶ್ವರ ಸಂಹಿತಾ, ರೌದ್ರ, ವಿನಾಯಕ, ಉಮಾ, ಮಾತೃ, ಏಕಾದಶ, ರುದ್ರ, ಕೈಲಾಸ, ಶತರುದ್ರಗಳೆಂಬ,

**ಕೋಟಿರುದ್ರಸಹಸ್ರಾದ್ಯಂ ಕೋಟಿರುದ್ರಂ ತಥೈವ ಚ ।**
**ವಾಯವೀಯಂ ಧರ್ಮಸಂಜ್ಞಂ ಪುರಾಣಮಿತಿ ಭೇದತಃ ॥೫೦॥**

೫೦ ಕೋಟಿ ರುದ್ರ, ಸಹಸ್ರ ಕೋಟಿರುದ್ರ, ವಾಯವೀಯ, ಧರ್ಮ ಎಂಬ ಭೇದದಿ ಸಂಹಿತೆಗಳಿರುವುವು.

**ಸಂಹಿತಾ ದ್ವಾದಶಮಿತಾ ಮಹಾಪುಣ್ಯತರಾ ಮತಾಃ ।**
**ತಾಸಾಂ ಸಂಖ್ಯಾಂ ಬ್ರುವೇ ವಿಪ್ರಾಃ ಶೃಣುತಾದರತೋಽಖಿಲಂ ॥೫೧॥**

೫೧ ಎಲೈ ದ್ವಿಜರೇ, ಹೀಗೆ ಈ ಹನ್ನೆರಡು ಸಂಹಿತೆಗಳಿದ್ದು ಮಹಾಪು ಪ್ರದಗಳಾಗಿವೆ. ಇವೆಲ್ಲದರ ಶ್ಲೋಕ ಸಂಖ್ಯೆಯನ್ನು ಹೇಳುವೆನು, ಆದರದಿಂದ ಕೇಳಿ

**ವಿದ್ಯೇಶಂ ದಶಸಾಹಸ್ರಂ ರುದ್ರಂ ವೈನಾಯಕಂ ತಥಾ ।**
**ಔಮಂ ಮಾತೃಪುರಾಣಾಖ್ಯಂ ಪ್ರತ್ಯೇಕಾಷ್ಟಸಹಸ್ರಕಂ ॥೫೨॥**

೫೨ ವಿದ್ಯೇಶ್ವರ ಸಂಹಿತೆಯಲ್ಲಿ ಹತ್ತು ಸಾವಿರ ಗ್ರಂಥಗಳೂ ಶ್ಲೋಕ ರುದ್ರಸಂಹಿ ವಿನಾಯಕ ಸಂಹಿತೆ, ಉಮಾ ಸಂಹಿತೆ, ಮಾತೃ ಸಂಹಿತೆಯಲ್ಲೂ ಸಹ ಪ್ರತ್ಯೇಕ, ಪ್ರತ್ಯೇಕವಾ ಎಂಟು ಸಹಸ್ರ ಶ್ಲೋಕಗಳಿರುವುವು.

**ತ್ರಯೋದಶಸಹಸ್ರಂ ಹಿ ರುದ್ರೈಕಾದಶಕಂ ದ್ವಿಜಾಃ ।**
**ಷಟ್ಸಹಸ್ರಂ ಚ ಕೈಲಾಸಂ ಶತರುದ್ರಂ ತದರ್ಧಕಂ ॥೫೩॥**

೫೩ ರುದ್ರೈಕಾದಶ ಏಕಾದಶರುದ್ರದಲ್ಲಿ ಹದಿಮೂರು ಸಹಸ್ರವೂ, ಆರು ಸಾವಿ ಶ್ಲೋಕದಿಂದ ಕೈಲಾಸ ಸಂಹಿತೆಯೂ, ಮೂರು ಸಹಸ್ರ ಶ್ಲೋಕಗಳಿಂದ ಶತರುದ್ರ ಸಂಹಿತೆಯೂ ಕೂಡಿರುವುದು.

**ಕೋಟಿರುದ್ರಂ ತ್ರಿಗುಣಿತಮೇಕಾದಶಸಹಸ್ರಕಂ ।**
**ಸಹಸ್ರಕೋಟಿರುದ್ರಾಖ್ಯಮುದಿತಂ ಗ್ರಂಥಸಂಖ್ಯಯಾ ॥೫೪॥**

೫೪ ಕೋಟಿ ರುದ್ರ ಸಂಹಿತೆಯಲ್ಲಿ ಇರಷ್ಟು ಎಂದರೆ ಒಂಭತ್ತು ಸಾವಿರವೂ, ಸಹಸ್ರ ಕೋಟಿ ರುದ್ರ ಸಂಹಿತೆಯಲ್ಲಿ ಹನ್ನೊಂದು ಸಹಸ್ರ ಗ್ರಂಥ ಸಂಖ್ಯೆಗಳಾಗಿರುವುವು.

**ವಾಯವೀಯಂ ಖಾಬ್ಧಿಶತಂ ಧರ್ಮಂ ರವಿಸಹಸ್ರಕಂ ।**
**ತದೇವಂ ಲಕ್ಷಸಂಖ್ಯಾಕಂ ಶೈವಸಂಖ್ಯಾವಿಭೇದತಃ ॥೫೫॥**

೫೫ ವಾಯವೀಯ ಸಂಹಿತೆಯಲ್ಲಿ ನಾಲ್ಕು ಸಹಸ್ರವೂ ಖಾಬ್ಧಿ ೪೦ ಸಧರ್ಮ ಸಂಹಿತೆಯಲ್ಲಿ ೧೨ ಸಹಸ್ರವೂ ಈ ರೀತಿಯಾಗಿ ಒಂದು ಲಕ್ಷ ಗ್ರಂಥಗಳು ಶೈವಪ್ರೋಕ್ತವಾದ ಗ್ರಂಥಗಳು ಒಟ್ಟಾಗಿವೆ.

ವಿ.ಸೂ. ೫೫ ನೇ ಶ್ಲೋಕದಲ್ಲಿ ಖಾಬ್ಧಿಶತಂ ಎಂದಾಗ ಖ ಎಂದರೆ ಸೊನ್ನೆ ಎಂತಲು ಅಬ್ಧಿ ಎಂದರೆ ನಾಲ್ಕು ಎಂತಲೂ ಅರ್ಥವಾಗುತ್ತದೆ ಎಂದರೆ ಮುಂದೆ ಸೊನ್ನೆ ಇರಿಸಿ ಎಡಭಾಗದಲ್ಲಿ ನಾಲ್ಕನ್ನು ಇರಿಸಿದರೆ ನಲವತ್ತೆಂಟಾಗುತ್ತದೆ. ಅಂಕಾನಾಂ ನಾಮತೋಗತಿಃ ಎಂಬ ಸೂತ್ರಾನುಸಾರಗಣನೆ ಮಾಡಿದರೆ ಮೊದಲನೆ ಸಂಖ್ಯೆ ಸೊನ್ನೆ ನಂತರದ ಸಂಖ್ಯೆ ನಾಲ್ಕು ಇದನ್ನು ೦೪ ಈ ರೀತಿ ಬರೆದರೆ ಸರಿ ಹೊಂದುತ್ತದೆ. ಹಾಗಿಲ್ಲದೆ ಪಕ್ಷದಲ್ಲಿ ನಲವತ್ತೆಂಟಾದರೆ ಒಟ್ಟು ಸಂಖ್ಯೆ ೧ ಲಕ್ಷ ಎಂದು ಹೇಳಿರುವುದರಿಂದ ನಲವತ್ತೆಂಬುದು ಒಟ್ಟು ಸಂಖ್ಯೆಗೆ ಸರಿಹೊಂದುವುದಿಲ್ಲ. ಆದ್ದರಿಂದ ಒಟ್ಟು ಸಂಖ್ಯಾ ದೃಷ್ಟಿಯಿಂದ ನಾಲ್ಕು ಎಂಬುದೇ ಸರಿ.

**ವ್ಯಾಸೇನ ತತ್ತು ಸಂಕ್ಷಿಪ್ತಂ ಚತುರ್ವಿಂಶತ್ಸಹಸ್ರಕಂ ।**
**ಶೈವಂ ತತ್ರ ಚತುರ್ಥಂ ವೈ ಪುರಾಣಂ ಸಪ್ತಸಂಹಿತಂ ॥೫೬॥**

೫೬ ಈ ರೀತಿ ಸಂಖ್ಯೆಯು ವ್ಯಾಸರಾದ ಸಂಕ್ಷೇಪಿಸಲ್ಪಟ್ಟು ಇಪ್ಪತ್ನಾಲ್ಕು ಸಹಸ್ರವಾಗುತ್ತದೆ. ಈ ಇಪ್ಪತ್ನಾಲ್ಕು ಸಹಸ್ರ ಗ್ರಂಥಗಳಿಂದ ಶ್ಲೋಕ ಈ ಶಿವಪುರಾಣವು ಸಪ್ತ ಸಂಹಿತೆಗಳಿಂದ ಕೂಡಿ ನಾಲ್ಕನೆಯ ಪುರಾಣವೆಂದು ಹೇಳಲ್ಪಟ್ಟಿರುವುದು.

**ಶಿವೇ ಸಂಕಲ್ಪಿತಂ ಪೂರ್ವಂ ಪುರಾಣಂ ಗ್ರಂಥಸಂಖ್ಯಯಾ ।**
**ಶತಕೋಟಿಪ್ರಮಾಣಂ ಹಿ ಪುರಾ ಸೃಷ್ಟೌ ಸುವಿಸ್ತೃತಂ ॥೫೭॥**

೫೭ ಶಿವನಿಂದ ಮೊದಲಿಗೆ ಸಂಕಲ್ಪಿಸಲ್ಪಟ್ಟು ಈ ಪುರಾಣವು ಸೃಷ್ಟಿಯ ಆದಿಯಲ್ಲಿ ನೂರು ಕೋಟಿ ಪ್ರಮಾಣವುಳ್ಳದ್ದಾಗಿ ಉತ್ಪತ್ತಿಯಾಯಿತು.

**ವ್ಯಸ್ತೇಽಷ್ಟಾದಶಧಾ ಚೈವ ಪುರಾಣೇ ದ್ವಾಪರಾದಿಷು ।**
**ಚತುರ್ಲಕ್ಷೇಣ ಸಂಕ್ಷಿಪ್ತೇ ಕೃತೇ ದ್ವೈಪಾಯನಾದಿಭಿಃ ॥೫೮॥**

೫೮ ದ್ವಾಪರ ಮೊದಲಾದ ಯುಗಗಳಲ್ಲಿ ಕೃಷ್ಣದ್ವೈಪಾಯನರಿಂದ ವ್ಯಾಸರಿಂದ ಹದಿನೆಂಟು ಪುರಾಣಗಳಾಗಿ ನಾಲ್ಕು ಲಕ್ಷ ಗ್ರಂಥಗಳಲ್ಲಿ ಅಡಕವಾಗಿ ಹೇಳಲ್ಪಟ್ಟಿತು.

ಪ್ರೋಕ್ತಂ ಶಿವಪುರಾಣಂ ಹಿ ಚತುರ್ವಿಂಶತ್ಸಹಸ್ರಕಂ ।
ಶ್ಲೋಕಾನಾಂ ಸಂಖ್ಯಯಾ ಸಪ್ತ ಸಂಹಿತಂ ಬ್ರಹ್ಮಸಂಮಿತಂ ॥೫೯॥

೫೯ ಆ ಯುಗದಲ್ಲಿ ವೇದಕ್ಕೆ ಸಮಾನವಾದ ಈ ಶಿವಪುರಾಣವು ಇಪ್ಪತ್ತನಾಲ್ಕು ಸಾವಿರ ಶ್ಲೋಕಗಳಿಂದ ಏಳು ಸಂಹಿತೆಗಳಿಂದಲೂ ಕೂಡಿ ರಚಿಸಲ್ಪಟ್ಟಿತು.

ವಿದ್ಯೇಶ್ವರಾಖ್ಯಾ ತತ್ರಾದ್ಯಾ ರೌದ್ರೀಜ್ಞೇಯಾ ದ್ವಿತೀಯಿಕಾ ।
ತೃತೀಯಾ ಶತರುದ್ರಾಖ್ಯಾ ಕೋಟಿರುದ್ರಾ ಚತುರ್ಥಿಕಾ ॥೬೦॥

೬೦ ಇದರಲ್ಲಿ ಮೊದಲನೆಯದು ವಿದ್ಯೇಶ್ವರ ಸಂಹಿತೆ ಎಂದೂ, ರುದ್ರ ಸಂಹಿತೆಯ ಎರಡನೆಯದು, ಮೂರನೆಯದು ಶತರುದ್ರ ಸಂಹಿತೆ ಎಂದೂ, ಕೋಟಿ ರುದ್ರ ಸಂಹಿತೆ ಎಂಬುದು ನಾಲ್ಕನೆಯದು.

ಪಂಚಮಿ ಚೈವಮೌಮ್ಯಾಖ್ಯಾ ಷಷ್ಠೀ ಕೈಲಾಸಸಂಜ್ಞಿಕಾ ।
ಸಪ್ತಮಿ ವಾಯವೀಯಾಖ್ಯಾ ಸಪ್ತೈವಂ ಸಂಹಿತಾ ಮತಾಃ ॥೬೧॥

೬೧ ಐದನೆಯದು ಉಮಾ ಸಂಹಿತೆ ಎಂದೂ, ಆರನೆಯದು ಕೈಲಾಸ ಸಂಹಿತೆ ಎಂದೂ, ಏಳನೆಯದು ವಾಯವೀಯ ಸಂಹಿತೆ ಎಂದೂ, ಏಳು ಸಂಹಿತೆಗಳು ಇರುವುವು.

ಸಸಪ್ತಸಂಹಿತಂ ದಿವ್ಯಂ ಪುರಾಣಂ ಶಿವಸಂಜ್ಞಕಂ ।
ವರೀವರ್ತಿ ಬ್ರಹ್ಮತುಲ್ಯಂ ಸರ್ವೋಪರಿ ಗತಿಪ್ರದಂ ॥೬೨॥

೬೨ ಈ ರೀತಿಯಾಗಿರತಕ್ಕ ಏಳು ಸಂಹಿತೆಯಿಂದೊಡಗೂಡಿದ ಶಿವಪುರಾಣವು ದಿವ್ಯವಾಗಿರುವುದು. ಮತ್ತು ಪರಬ್ರಹ್ಮಸ್ವರೂಪ ಉಳ್ಳದ್ದಾಗಿ ಸರ್ವೋತ್ತಮವಾಗಿ, ಉತ್ತಮ ಗತಿ ಪ್ರದವಾಗಿರುವುದು.

ಏತಚ್ಛಿವಪುರಾಣಂ ಹಿ ಸಪ್ತಸಂಹಿತಮಾದರಾತ್ ।
ಪುರಪೂರ್ಣಂ ಪಠೇದ್ಯಸ್ತು ಸ ಜೀವನ್ಮುಕ್ತ ಉಚ್ಯತೇ ॥೬೩॥

೬೩ ಈ ಸಪ್ತ ಸಂಹಿತೆಗಳಿಂದ ಕೂಡಿರುವ ಶಿವಪುರಾಣವನ್ನು ಪೂರ್ತಿಯಾಗಿ ಯಾವನು ಪಠಿಸುತ್ತಾನೋ ಅಂತಹವನು ಜೀವನ್ಮುಕ್ತನೆಂದು ಹೇಳಲ್ಪಟ್ಟಿದೆ.

ಶ್ರುತಿಸ್ಮೃತಿಪುರಾಣೇತಿಹಾಸಾಗಮಶತಾನಿ ಚ ।
ಏತಚ್ಛಿವಪುರಾಣಸ್ಯ ನಾರ್ಹಂತ್ಯಲ್ಪಾಂ ಕಲಾಮಪಿ ॥೬೪॥

೬೪ ವೇದಗಳು, ಸ್ಮೃತಿಗಳು, ಪುರಾಣಗಳು, ಇತಿಹಾಸಗಳು, ಆಗಮಗಳು ಹೀಗೆ ನೂರಾರು ಗ್ರಂಥಗಳೂ ಸಹ ಈ ಶಿವಪುರಾಣದ ಸ್ವಲ್ಪ ಅಂಶವನ್ನಾದರೂ ಹೋಲಲಾರವು.

ಶೈವಂ ಪುರಾಣಮಮಲಂ ಶಿವಕೀರ್ತಿತಂ ತ
ದ್ವ್ಯಾಸೇನ ಶೈವಪ್ರವಣೇನ ಚ ಸಂಗೃಹೀತಂ ।
ಸಂಕ್ಷೇಪತಸ್ಸಕಲಜೀವಗುಣೋಪಕಾರಂ
ತಾಪತ್ರಯಘ್ನಮತುಲಂ ಶಿವದಂ ಸತಾಂ ಹಿ ॥೬೫॥

೬೫ ಈ ಶಿವಪುರಾಣವು ಶಿವನಿಂದ ಹೇಳಲ್ಪಟ್ಟಿರುವ ಹಾಗೂ ಉತ್ತಮವಾದ ಈ ಶಿವಪುರಾಣವು ಶಿವಭಕ್ತನಾದ ವ್ಯಾಸನಿಂದ ಸಂಗ್ರಹಿಸಲ್ಪಟ್ಟು, ಸಕಲ ಜೀವಿಗಳಿಗೆ ಉಪಕರಿಸುವಂತಹದ್ದಾಗಿ ಸಂಕ್ಷೇಪಮಾಡಲ್ಪಟ್ಟು, ಸಜ್ಜನರಿಗೆ ಆದಿಭೌತಿಕ, ಆದಿ ದೈವಿಕ, ಆಧ್ಯಾತ್ಮಿಕವೆಂಬ ತಾಪತ್ರಯಗಳನ್ನು ಹೋಗಲಾಡಿಸುವುದಾಗಿ, ಲೋಕದಲ್ಲಿ ಶ್ರೇಷ್ಠವಾದದ್ದಾಗಿ ಶುಭವನ್ನುಂಟು ಮಾಡುವುದಾಗಿದೆ.

ಏಕೈತವೋ ಧರ್ಮ ಇಹ ಪ್ರಗೀತೋ
ವೇದಾಂತವಿಜ್ಞಾನಮಯಃ ಪ್ರಧಾನಃ ।
ಅಮತ್ಸರಾಂತರ್ಬುಧವೇದ್ಯವಸ್ತು
ಸತ್ಕ್ಲುಪ್ತಮಂತ್ರೌಘತ್ರಿವರ್ಗಯುಕ್ತಂ ॥೬೬॥

೬೬ ಈ ಶಿವಪುರಾಣವನ್ನು ಈಶ್ವರ ಪ್ರೀತ್ಯರ್ಥವಾಗಿ ಯಾವ ಕಾಮನೆ ಇಲ್ಲದೇ ಭಕ್ತಿಯುಕ್ತನಾಗಿ ಪಠಿಸುವನೋ ಅಂತಹವನು ವೇದಾಂತದ ತತ್ವವನ್ನು ತಿಳಿಯಲ್ಪಡುವವನಾಗುವನು. ಯೋಗಿಗಳಿಗೆ ಮಾತ್ರ ಸಾಧ್ಯವಾದ ಪರಮಾತ್ಮ ತತ್ವವನ್ನು ತಿಳಿಯುವೆನು. ಸಮಸ್ತ ಮಂತ್ರಾರ್ಥವೂ ತಿಳಿಯುವುದು. ಹಾಗೂ ಧರ್ಮಾರ್ಥಕಾಮವೆಂಬ ತ್ರಿವರ್ಗವನ್ನೂ ಹೊಂದಿ ಸಂತೃಪ್ತನಾಗುವೆನು.

ಶೈವಂ ಪುರಾಣತಿಲಕಂ ಖಲು ಸತ್ಪುರಾಣಂ
ವೇದಾಂತವೇದವಿಲಸತ್ಪರವಸ್ತುಗೀತಂ।
ಯೋ ವೈ ಪಠೇಚ್ಚ ಶೃಣುಯಾತ್ಪರಮಾದರೇಣ
ಶಂಭುಪ್ರಿಯಸ್ಸ ಹಿ ಲಭೇತ್ಪರಮಾಂ ಗತಿಂ ವೈ ॥೬೭॥

೬೭ ಈ ಶೈವ ಪುರಾಣವು ಪುರಾಣಗಳಲ್ಲಿ ತಿಲಕಪ್ರಾಯವಾಗಿದ್ದು, ಅತ್ಯಂತ ಶ್ರೇಷ್ಠವಾಗಿದ್ದು, ವೇದಾಂತಗಳಿಂದ ತಿಳಿಯಲ್ಪಡುವ, ವೇದಾಂತಗಲಿಂದ ಶೋಭಿಸುವ ಪರಾತ್ಪರ ವಸ್ತುವನ್ನು ಕೀರ್ತಿಸುವುದಾಗಿರುತ್ತದೆ. ಇಂತಹ ಶಿವಪುರಾಣವನ್ನು ಪ್ರೀತಿಯಿಂದ ಯಾರು ಓದುವರೋ, ಕೇಳುವರೋ, ಅಂತಹವರು ಶಿವನಿಗೆ ಅತ್ಯಂತ ಪ್ರಿಯರಾಗಿ, ಉತ್ಕೃಷ್ಟವಾದ ಗತಿಯನ್ನು ಹೊಂದುವರು.

ಇತಿ ಶ್ರೀ ಶಿವಮಹಾಪುರಾಣೇ ಪ್ರಥಮಾಯಾಂ ವಿದ್ಯೇಶ್ವರ ಸಂಹಿತಾಯಂ ದ್ವಿತೀಯೋಧ್ಯಾಯಃ

ಇಲ್ಲಿಗೆ ಶ್ರೀ ಶಿವಪುರಾಣದ ಮೊದಲನೆಯ ಶ್ರೀ ವಿದ್ಯೇಶ್ವರ ಸಂಹಿತೆಯಲ್ಲಿ ಎರಡನೇ ಅಧ್ಯಾಯವು ಮುಗಿದುದು.

||ಶ್ರೀಃ||

||ಓಂ ನಮಃ ಶಿವಾಯ||

ಅಥ ಶ್ರೀ ಶಿವಮಹಾಪುರಾಣೇ

ವಿದ್ಯೇಶ್ವರ ಸಂಹಿತಾಯಾಂ

# ತೃತೀಯೋಽಧ್ಯಾಯಃ

||ವ್ಯಾಸ ಉವಾಚ||

ಇತ್ಯಾಕರ್ಣ್ಯ ವಚಸ್ಸೌತಂ ಪ್ರೋಚುಸ್ತೇ ಪರಮರ್ಷಯಃ |
ವೇದಾಂತಸಾರಸರ್ವಸ್ವಂ ಪುರಾಣಂ ಶ್ರಾವಯಾದ್ಭುತಂ ||೧||

೧ ವ್ಯಾಸರು ಹೇಳುತ್ತಾರೆ, ಈ ರೀತಿಯಾಗಿರುವಂತಹ ಸೂತ ಪುರಾಣಿಕರಿಂದ ಹೇಳಲ್ಪಟ್ಟ ಶಿವಪುರಾಣ ಸಂಬಂಧವಾದ ಮಾತುಗಳನ್ನು ಕೇಳಿ, ವೇದಾಂತ ಸಾರ ಸರ್ವಸ್ವಗಳಿಂದ ಕೂಡಿರುವ ಈ ಶಿವಪುರಾಣವನ್ನು ನಮಗೆ ತಿಳಿಸಬೇಕೆಂದು ಸೂತರನ್ನು ಕೇಳಿದರು.

ಇತಿ ಶ್ರುತ್ವಾ ಮುನೀನಾಂ ಸ ವಚನಂ ಸುಪ್ರಹರ್ಷಿತಃ |
ಸಂಸ್ಮರಂಚ್ಛಂಕರಂ ಸೂತಃ ಪ್ರೋವಾಚ ಮುನಿಸತ್ತಮಾನ್ ||೨||

೨ ಹೀಗೆ ಋಷಿಗಳಿಂದ ಕೇಳಲ್ಪಟ್ಟ ಮಾತುಗಳನ್ನು ಕೇಳಿ ಅತ್ಯಂತ ಸಂತೋಷ ಉಳ್ಳವನಾಗಿ ಸೂತ ಮಹಾಮುನಿಯು ಶಂಕರನನ್ನು ಸ್ಮರಿಸಿ ಈ ರೀತಿ ಹೇಳತೊಡಗಿದರು.

||ಸೂತ ಉವಾಚ||

ಶೃಣ್ವಂತು ಋಷಯಃ ಸರ್ವೇ ಸ್ಮೃತ್ವಾ ಶಿವಮನಾಮಯಂ |
ಪುರಾಣಪ್ರವಣಂ ಶೈವಂ ಪುರಾಣಂ ವೇದಸಾರಜಂ ||೩||

೩ ಸೂತರು ಹೇಳುತ್ತಾರೆ, ಎಲ್ಲೈ ಋಷಿಗಳೇ ಸಕಲ ವಿಕಾರಗಳಿಂದ ಬಿಡಲ್ಪಟ್ಟ ಈಶಿವನನ್ನು ಸ್ಮರಿಸಿ ವೇದ ಸಾರವಾದ, ಪುರಾಣಗಳಲ್ಲಿ ಶ್ರೇಷ್ಟವಾದ ಶ್ರೀ ಶಿವಪುರಾಣವನ್ನು ಹೇಳುವೆನು ಕೇಳಿ.

ಯತ್ರ ಗೀತಂ ತ್ರಿಕಂ ಪ್ರೀತ್ಯಾ ಭಕ್ತಿಜ್ಞಾನವಿರಾಗಕಂ ।

೪ ಈ ಪುರಾಣದಲ್ಲಿ ಭಕ್ತಿ, ಜ್ಞಾನ, ವೈರಾಗ್ಯಗಳೆಂಬ ಮೂರು ವಿಧವಾದ ಮುಕ್ತಿ ಸಾಧನಗಳು ವರ್ಣಿಸಲ್ಪಟ್ಟಿವೆ. ಹಾಗೆಯೇ ಉಪನಿಷತ್ತುಗಳಿಂದ ತಿಳಿಯಲ್ಪಡುವಂತಹ ಸತ್ ಎಂಬ ವಸ್ತುವು ವಿಶೇಷವಾಗಿ ವಿವರಿಸಲ್ಪಟ್ಟಿದೆ.

ವೇದಾಂತವೇದ್ಯಂ ಸತ್ವಸ್ತು ವಿಶೇಷೇಣ ಪ್ರವರ್ಣಿತಂ ॥೫॥

೫ ಎಲೈ ಋಷಿಗಳಿರಾ ಕೇಳಿ, ಈ ಪುರಾಣವು ವೇದಗಳ ಸಾರವನ್ನು ತಿಳಿಸುವಂತದ್ದಾಗಿದೆ. ಬಹಳ ಹಿಂದೆ ಅನೇಕ ಕಲ್ಪಗಳು ಮತ್ತೆ ಮತ್ತೆ ಕಳೆಯುತ್ತಿದ್ದವು (ದೊಡ್ಡ ಕಾಲವಾದ ಕಲ್ಪವು.)

ವಿ.ಸೂ. ಕಲ್ಪವೆಂದರೆ ಬಹಳ ಸಮಯಗಳಿಂದ ಕೂಡಿದ ಕಾಲ. ಬ್ರಹ್ಮನ ಒಂದು ಹಗಲು ಎಂದರೆ ೩ ಕಲ್ಪಗಳು ಬ್ರಹ್ಮನ ೧ ದಿನ. ಇದರ ವಿವರಣೆ ಹೀಗಿದೆ, ೧. ೪೩,೨೦೦೦ ವರ್ಷಗಳಿಗೆ ೧ ಮಹಾಯುಗ. ೨. ೭೧ ಮಹಾಯುಗ ೧ ಮನ್ವಂತರ. ೩. ಅಂತಹ ೧೪ ಮನ್ವಂತರಗಳು ೧ ಕಲ್ಪ. ಅಂತಹ ೩ ಕಲ್ಪಗಳು ಬ್ರಹ್ಮನ ಒಂದು ಅಹೋರಾತ್ರಿ. ಆದ್ದರಿಂದಲೇ ಚತುರ್ಯುಗ ಸಹಸ್ರಾಣಿ ಬ್ರಹಣೋ ದಿಮನುಚ್ಯತೇಲ ಎಂದು ಹೇಳಿದೆ. ಅಂದರೆ ೪೦೦೦ ಯುಗಗಳು ಬ್ರಹ್ಮನ ೧ ದಿನವೆಂದು ಅರ್ಥ. ಮಹಾಯುಗ ಪ್ರಮಾಣವನ್ನು ಸೂರ್ಯಸಿದ್ಧಾಂತದಲ್ಲಿ ಬಚತುಷ್ಕ ರದಾರ್ಣವಾ ಎಂದು ಹೇಳಿದ್ದಾರೆ. ಇಲ್ಲಿ ಬಚತುಷ್ಕ ಎಂದರೆ ನಾಲ್ಕು ಸೊನ್ನೆ. ರದಾ ಎಂದರೆ ಹಲ್ಲುಗಳು. ಅರ್ಥಾತ್ ಮೂವತ್ತೆರಡು ಅರ್ಣವಕಿ ಎಂದರೆ ನಾಲ್ಕು ಎಂದರ್ಥ. ಅಂಕಾನಾಂ ನಾಮತೋ ಗತಿಃ ಎಂಬ ಸೂತ್ರದಂತೆ ವಿಚಾರ ಮಾಡಿದಾಗ ೪೩೨೦,೦೦೦ ಆಗುತ್ತದೆ.

ಶೃಣ್ವಂತು ಋಷಯಃ ಸರ್ವೇ ಪುರಾಣಂ ವೇದಸಾರಜಂ ।<br>
ಪುರಾ ಕಾಲೇನ ಮಹತಾ ಕಲ್ಪೇಽತೀತೇ ಪುನಃ ಪುನಃ ॥೬॥<br>
ಅಸ್ಮಿನ್ನುಪಸ್ಥಿತೇ ಕಲ್ಪೇ ಪ್ರವೃತ್ತೇ ಸೃಷ್ಟಿಕರ್ಮಣಿ ।<br>
ಮುನೀನಾಂ ಷಟ್ಕುಲೀನಾನಾಂ ಬ್ರುವತಾಮಿತರೇತರಂ ॥೭॥

೬ ಮತ್ತು ೭ ಹೀಗಿರುವಾಗ ಪ್ರಕೃತ ಕಲ್ಪವಾದ ಶ್ವೇತವರಾಹ ಕಲ್ಪವು ಪ್ರಾಪ್ತವಾಗಲಾಗಿ, ಸೃಷ್ಟಿಕಾರ್ಯವೂ ಸಹ ಆರಂಭವಾಗಿತ್ತು. ಆಗ ತ್ರಿವೇಣಿ ಸಂಗಮವದ ಎರಡೂ ಕಡೆ ವಾಸಿಸುವ ಋಷಿಗಳಲ್ಲಿ ಈ ವಸ್ತುವೇ ಶ್ರೇಷ್ಟವೆಂದೂ.

ಇದಂ ಪರಮಿದಂ ನೇತಿ ವಿವಾದಃ ಸುಮಹಾನಭೂತ್ ।
ತೇಽಭಿಜಗ್ಮುರ್ವಿಧಾತಾರಂ ಬ್ರಹ್ಮಾಣಂ ಪ್ರಷ್ಟುಮವ್ಯಯಂ ॥೮॥

೮ ಹಾಗಲ್ಲ, ಈ ವಸ್ತು ಶ್ರೇಷ್ಟವೆಂದೂ ಇದಲ್ಲ ಮತ್ತೊಂದೆಂದೂ ಪರಸ್ಪರ ವಿವಾದವು ಬಹಳವಾಗಿ ಆಯಿತು. ಆಗ ಈ ರೀತಿ ಅನುಮಾನ ಬಂದ ಆ ಋಷಿಗಳೆಲ್ಲರೂ ಬ್ರಹ್ಮನನ್ನು ಈ ಬಗ್ಗೆ ಕೇಳಲು ಅವನ ಬಳಿಗೆ ಹೋದರು.

ವಾಗ್ಭಿರ್ವಿನಯುಗರ್ಭಾಭಿಃ ಸರ್ವೇ ಪ್ರಾಂಜಲಯೋಽಬ್ರುವನ್ ।
ತ್ವಂ ಹಿ ಸರ್ವಜಗದ್ಧಾತಾ ಸರ್ವಕಾರಣಕಾರಣಂ ॥೯॥

೯ ಈ ರೀತಿಯಾಗಿ ಬ್ರಹ್ಮನನ್ನು ಸೇರಿ ಅವರೆಲ್ಲರೂ ವಿನಯ ಪೂರ್ವಕವಾದ ಮಾತುಗಳಿಂದ ಅವನನ್ನು ಅಂಜಲಿಬದ್ಧ ಹಸ್ತವುಳ್ಳವರಾಗಿ ಈ ರೀತಿ ಪ್ರಾರ್ಥಿಸಿದರು. ನೀನು ಎಲ್ಲಾ ಜಗತ್ತಿಗೂ ಒಡೆಯನು, ಎಲ್ಲಾ ಕಾರಣಗಳಿಗೂ ಕಾರಣವಾಗಿದ್ದೀಯೆ.

ಕೇ ಪುಮಾನ್ ಸರ್ವತತ್ತ್ವೇಭ್ಯಃ ಪುರಾಣಃ ಪರತಃ ಪರಃ ।
॥ಬ್ರಹ್ಮೋವಾಚ॥
ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ ॥೧೦॥

೧೦ ಯಾರು ಈ ಸಮಸ್ತ ತತ್ವಗಳಿಗೂ ಪ್ರಕೃತಿಯಿಂದುಂಟಾದ ಮದುರಾದಿ ತತ್ವಗಳು ಪೂರ್ವದಲ್ಲಿದ್ದವನು ಸಮಸ್ತ ವಸ್ತುಗಳಿಗಿಂತಲೂ ಶ್ರೇಷ್ಟನಾದ ಪುರುಷನಾರು. ಆಗ ಬ್ರಹ್ಮನು ಹೇಳುತ್ತಾನೆ. ಯಾವ ಪರಬ್ರಹ್ಮ ವಸ್ತುವು ಮಾತುಗಳಿಂದ ವರ್ಣಿಸಲಸಾಧ್ಯವೋ ಮನಸ್ಸಿನಿಂದಲೂ ಸಹ ಹೊಂದಲಶಕ್ಯವೋ.

ಯಸ್ಮಾತ್ಸರ್ವಮಿದಂ ಬ್ರಹ್ಮವಿಷ್ಣುರುದ್ರೇಂದ್ರಪೂರ್ವಕಂ ।
ಸಹ ಭೂತೇಂದ್ರಿಯೈಃ ಸರ್ವೈಃ ಪ್ರಥಮಂ ಸಂಪ್ರಸೂಯತೇ ॥೧೧॥

೧೧ ಯಾವನಿಂದ ಈ ಎಲ್ಲಾ ಬ್ರಹ್ಮ, ವಿಷ್ಣು, ರುದ್ರ, ಇಂದ್ರನೇ ಮೊದಲಾದ ದೇವತೆಗಳೂ, ಪಂಚ ಮಹಾಭೂತಗಳೂ, ಇಂದ್ರಿಯಗಳೂ ಪ್ರಾರಂಭದಲ್ಲೇ ಎಸೃಷ್ಟಿಕಾಲದಲ್ಲೇ ಉತ್ಪನ್ನವಾಯಿತೋ.

ಏಷ ದೇವೋ ಮಹಾದೇವಃ ಸರ್ವಜ್ಞೋ ಜಗದೀಶ್ವರಃ ।
ಅಯಂ ತು ಪರಯಾ ಭಕ್ತ್ಯಾ ದೃಶ್ಯತೇ ನಾನ್ಯಥಾ ಕ್ವಚಿತ್ ॥೧೨॥

೧೨ ಅಂತಹ ಸರ್ವಜ್ಞನೂ, ಜಗತ್ತುಗಳಿಗೊಡೆಯನೂ ಆದ ದೇವನಾದ ಮಹಾದೇವನನ್ನು ಅತ್ಯಂತ ದೃಢವಾದ ಭಕ್ತಿಯಿಂದ ಮಾತ್ರ ಕಾಣಲು ಸಾಧ್ಯ ಹಾಗಿಲ್ಲದೇ ಬೇರೆ ಮಾರ್ಗಗಳಿಂದ ಸ್ವಲ್ಪವೂ ಸಾಧ್ಯವಿಲ್ಲ.

**ರುದ್ರೋ ಹರಿರ್ಹರಶ್ಚೈವ ತಥಾನ್ಯೇ ಚ ಸುರೇಶ್ವರಾಃ ।**
**ಭಕ್ತ್ಯಾ ಪರಮಯಾ ನಿತ್ಯಂ ತಸ್ಯ ದರ್ಶನಕಾಂಕ್ಷಿಣಃ ॥೧೩॥**

೧೩ ರುದ್ರನೂ, ಹರಿಯೂ, ಹರನೂ ಉಳಿದ ಎಲ್ಲಾ ದೇವತೆಗಳೂ ಅಸಾಧಾರಣವಾದ ಭಕ್ತಿಯಿಂದ ನಿತ್ಯವೂ ಸೇವಿಸುತ್ತಿದ್ದು ಅಪರಮೇಶ್ವರ ದರ್ಶನವನ್ನೇ ಅಪೇಕ್ಷಿಸುತ್ತಿರುವರು. ಹೆಚ್ಚು ಹೇಳಿ ಪ್ರಯೋಜನವೇನು. ಶಿವನ ಮೇಲಿನ ಭಕ್ತಿಯಿಂದಲೇ ಮುಕ್ತಿ ದೊರಕುತ್ತದೆ.

**ಬಹುನಾತ್ರ ಕಿಮುಕ್ತೇನ ಶಿವೇ ಭಕ್ತ್ಯಾ ವಿಮುಚ್ಯತೆ ।**
**ಪ್ರಸಾದಾದ್ದೇವತಾಭಕ್ತಿಃ ಪ್ರಸಾದೋ ಭಕ್ತಿಸಂಭವಃ ।**
**ಯಥೇಹಾಂಕುರುತೋ ಬೀಜಂ ಬೀಜತೋ ವಾ ಯಥಾಂಕುರಃ ॥೧೪**

೧೪ ಈಶ್ವರನಲ್ಲಿರುವ ಭಕ್ತಿಯಿಂದ ಅವನ ಅನುಗ್ರಹದಿಂದ ಮುಕ್ತಿಯು ದೊರಕುವುದು. ಭಕ್ತಿ, ಮುಕ್ತಿಯು ಪರಸ್ಪರ ಆಶ್ರಯವಾಗಿರುವುದು. ಹೇಗೆಂದರೆ ಬೀಜದಿಂದ ಮೊಳಕೆ. ಮುಂದೆ ಆ ಮೊಳಕೆಯಿಂದಲೇ ಬೀಜವು ಹೇಗೋ ಹಾಗೆ, ದೇವಾನುಗ್ರಹದಿಂದ ಭಕ್ತಿಯು ಉಂಟಾಗುವುದು.

**ತಸ್ಮಾದೀಶಪ್ರಸಾದಾರ್ಥಂ ಯೂಯಂ ಗತ್ವಾ ಭುವಂ ದ್ವಿಜಾಃ ।**
**ದೀರ್ಘಸತ್ರಂ ಸಮಾಕೃಧ್ವಂ ಯೂಯಂ ವರ್ಷಸಹಸ್ರಕಂ ॥೧೫॥**

೧೫ ಆದ್ದರಿಂದ ಈಶ್ವರನ ಅನುಗ್ರಹಕ್ಕಾಗಿ ನೀವುಗಳು ಭೂಲೋಕಕ್ಕೆ ಹೋಗಿ ಸಾವಿರಾರು ವರ್ಷಗಳು ನಡೆಯುವಂತಹ ದೊಡ್ಡ ಯಜ್ಞವನ್ನು ಮಾಡಿ ಎಂದು ಹೇಳಿದನು.

**ಅಮುಷ್ಯೈವಾಧ್ವರೇಶಸ್ಯ ಶಿವಸ್ಯೈವ ಪ್ರಸಾದತಃ ।**
**ವೇದೋಕ್ತವಿದ್ಯಾಸಾರಂ ತು ಜಾಯತೇ ಸಾಧ್ಯ ಸಾಧನಂ ॥೧೬॥**

೧೬ ಈ ರೀತಿಯಿಂದ ಯಜ್ಞದಿಂದ ಶಂಕರನ ಅನುಗ್ರಹದಿಂದ ವೇದೋಕ್ತವಾದ ವಿದ್ಯೆಯ ಸಾರವೂ ವೇದೋಕ್ತ ಸಾಧ್ಯ ಸಾಧನೆಗಳೂ ಲಭಿಸುವುವು.

**||ಮುನಯ ಊಚುಃ||**

**ಅಥ ಕಿಂ ಪರಮಂ ಸಾಧ್ಯಂ ಕಿಂ ವಾ ತತ್ಸಾಧನಂ ಪರಂ |**

**ಸಾಧಕೇ ಕೀದೃಶಸ್ತತ್ರ ತದಿದಂ ಬ್ರೂಹಿ ತತ್ತ್ವತಃ ||೧೭೩ತಿಳಿ೨**

ಮುನಿಗಳು ಹೇಳುತ್ತಾರೆ

೧೭ ಎಲೈ ಪೂಜ್ಯನೇ ವೇದದಲ್ಲಿ ಹೇಳಿರುವ ಪವಿತ್ರವಾದ ಸಾಧ್ಯ ಎಂದರೆ ಸಾಧಿಸಬೇಕಾದ್ದು ಯಾವುದು ? ಉತ್ಕೃಷ್ಟವಾದ ಸಾಧನವು ಸಾಧಕನೆದರೆ ಹೇಗಿರುವನು ಇದನ್ನು ವಿವರವಾಗಿ ನಮಗೆ ಹೇಳು.

**||ಬ್ರಹ್ಮೋವಾಚ||**

**ಸಾಧ್ಯಂ ಶಿವಪದಪ್ರಾಪ್ತಿಃ ಸಾಧನಂ ತಸ್ಯ ಸೇವನಂ |**

**ಸಾಧಕಸ್ತತ್ಪ್ರಸಾದಾದ್ಯೋಽನಿತ್ಯಾದಿಫಲನಿಸ್ಪೃಹಃ ||೧೮||**

ಬ್ರಹ್ಮನು ಹೇಳುತ್ತಾನೆ

೧೮ ಸಾಧ್ಯವೆಂದರೆ ಶಿವಲೋಕ ಪ್ರಾಪ್ತಿಯು, ಸಾಧನವೆಂದರೆ ಶಿವನ ಸೇವೆಯು, ಸಾಧಕನೆಂದರೆ ಈಶ್ವರನ ಅನುಗ್ರಹದಿಂದ ಅನಿತ್ಯವಾದ ವಸ್ತುಗಳಲ್ಲಿ ವೈರಾಗ್ಯವುಳ್ಳವನೇ ಆಗಿರುವನು.

**ಕರ್ಮ ಕೃತ್ವಾ ತು ವೇಗೋಕ್ತಂ ತದರ್ಪಿತಮಹಾಫಲಂ |**

**ಪರಮೇಶಪದಪ್ರಾಪ್ತಿಃ ಸಾಲೋಕ್ಯಾದಿಕ್ರಮಾತ್ತತಃ ||೧೯||**

೧೯ ವೇದೋಕ್ತವಾದ ಕರ್ಮಗಳನ್ನು ಮಾಡಬೇಕು. ನಂತರ ಅದರ ಫಲಗಳನ್ನು ಈಶ್ವರನಿಗೆ ಸಮರ್ಪಿಸಬೇಕು. ಈ ರೀತಿಯಾದ ಕ್ರಿಯೆಯಿಂದ ಕೈಲಾಸ ಪ್ರಾಪ್ತಿ. ನಂತರ ಈಶ್ವರನ ಸಾಲೋಕ್ಯವು ಲಬಿಸುವುದು.

**ತತ್ತದ್ಭಕ್ತ್ಯನುಸಾರೇಣ ಸರ್ವೇಷಾಂ ಪರಮಂ ಪದಂ |**

**ತತ್ಸಾಧನಂ ಬಹುವಿಧಂ ಸಾಕ್ಷಾದೀಶೇನ ಬೋಧಿಂ |ತಿಳಿ೨ ೨೦||**

೨೦ ಅವರವರ ಭಕ್ತಿಗನುಗುಣವಾಗಿ ಎಲ್ಲರಿಗೂ ಶಿವಲೋಕ ಪ್ರಾಪ್ತಿಯಾಗುವುದು. ಅದಕ್ಕೆ ಅನೇಕ ಸಾಧನಗಳಿವೆ. ಅದನ್ನು ಈಶ್ವರನೇ ಸಾಕ್ಷಾತ್ತಾಗಿ ಬೋಧಿಸಿರುವನು.

**ಸಂಕ್ಷಿಪ್ಯ ತತ್ರ ವಃ ಸಾರಂ ಸಾಧನಂ ಪ್ರಬ್ರವೀಮ್ಯಹಂ I**
**ಶ್ರೋತ್ರೇಣ ಶ್ರವಣಂ ತಸ್ಯ ವಚಸಾ ಕೀರ್ತನಂ ತಥಾ II೨೧೧ತಿ೪೨**

೨೧ ಈಶ್ವರನು ಹೇಳಿರುವ ಸಾರವನ್ನು ಸಂಗ್ರಹಿಸಿ ಸಾಧನೆಯನ್ನು ವಿಶೇಷವಾಗಿ ಹೇಳುವೆನು. ಶಿವನ ನಾಮ, ವಿಚಾರಗಳನ್ನು ಕಿವಿಯಿಂದ ಕೇಳಬೇಕು. ಮಾತುಗಳಿಂದ ಶಿವ ಸಂಬಂಧವಾದ ವಿಚಾರಗಳನ್ನು ಸ್ತುತಿಸಬೇಕು.

**ಮನಸಾ ಮನನಂ ತಸ್ಯ ಮಹಾಸಾಧನಮುಚ್ಯತೇ I**
**ಶ್ರೋತವ್ಯಃ ಕೀರ್ತಿತವ್ಯಶ್ಚ ಮಂತವ್ಯಶ್ಚ ಮಹೇಶ್ವರಃ II೨೨II**

೨೨ ಹಾಗೆ ಸ್ತುತಿಸಿದಂತಹ ವಿಚಾರಗಳನ್ನು ಮನಸ್ಸಿನಲ್ಲಿಯೇ ಚಿಂತಿಸಬೇಕು. ಇವೇ ಮಹಾಸಾಧನವಾಗುತ್ತದೆ. ಶಿವ ಸಂಬಂಧವಾದ ಕೇಳುವಿಕೆ, ಸ್ತುತಿ, ಮನನಗಳು ಅವಶ್ಯ.

**ಇತಿ ಶ್ರುತಿಃ ಪ್ರಮಾಣಂ ನ ಸಾಧನೇನಾಽಮುನಾ ಪರಂ I**
**ಸಾಧ್ಯಂ ವ್ರಜತ ಸರ್ವಾರ್ಥಸಾಧನೈಕಪರಾಯಣಾಃ II೨೩II**

೨೩ ಈ ರೀತಿಯಾಗಿರತಕ್ಕಂತಹ ಶ್ವಣ, ಮನನ, ಕೀರ್ತನೆಗಳಿಗೆ ವೇದವೇ ಪ್ರಮಾಣವು. ವೇದಾಂತ ವಾಕ್ಯಗಳಿಂದ ಚೆನ್ನಾಗಿ ವಿಮರ್ಶಿಸಿ ಶಿವನನ್ನು ತಿಳಿಯಬೇಕು. ಅದನ್ನೇ ಕೇಳಬೇಕು. ಕೇಳಿದ್ದನ್ನು ಸ್ತುತಿಸಬೇಕು. ಈ ರೀತಿಯಾದ ಶ್ರೇಷ್ಟವಾದ ಸಾಧನದಿಂದ ಸಾಧ್ಯವನ್ನು ಹೊಂದಿರಿ. ಎಲೈ ಬ್ರಾಹ್ಮಣೋತ್ತಮರೇ, ನಾನು ಹೇಳಿದ ಈ ಸಾದನಗಳಿಂದ ಸಾಧ್ಯವಾದ ಶಿವಪದವನ್ನು ಪಡೆಯಿರಿ.

**ಪ್ರತ್ಯಕ್ಷಂ ಚಕ್ಷುಷಾ ದೃಷ್ಟ್ವಾ ತತ್ರ ಲೋಕಃ ಪ್ರವರ್ತತೇ I**
**ಅಪ್ರತ್ಯಕ್ಷಂ ಹಿ ಸರ್ವತ್ರ ಜ್ಞಾತ್ವಾ ಶ್ರೋತ್ರೇಣ ಚೇಷ್ಟತೇ II೨೪II**

೨೪ ಪ್ರಪಂಚದಲ್ಲಿ ಕಣ್ಣಿಗೆ ಕಾಣುವುದನ್ನು ಜನಗಳು ನೋಡುತ್ತಾರೆ. ಆದರೆ ಕಣ್ಣಿಗೆ ಕಾಣದುದನ್ನು ಕಿವಿಯಿಂದ ಕೇಳಿ ತಿಳಿಯುತ್ತಾರೆ. ಹಾಗೆ ಆ ವಿಚಾರದಲ್ಲಿ ಪ್ರವರ್ತಿಸುತ್ತಾರೆ.

**ತಸ್ಮಾಚ್ಛ್ರವಣಮೇವಾದೌ ಶ್ರುತ್ವಾ ಗುರುಮುಖಾದ್ಬುಧಃ I**
**ತತಃ ಸಂಸಾಧಯೇದನ್ಯತ್ಕೀರ್ತನಂ ಮನನಂ ಸುಧೀಃ II೨೫II**

೨೫ ಆದ್ದರಿಂದ ಈ ರೀತಿಯಾದ ವಿವೇಕಿಯು ಗುರುಮುಖದಿಂದ ಈಶ್ವರ

ವಿಚಾರಗಳನ್ನು ಕೇಳಿ ನಂತರದಲ್ಲಿ ಮನನ, ಕೀರ್ತನೆಗಳನ್ನು ಬುದ್ಧಿಶಾಲಿಯು ಮಾಡಬೇಕು.

**ಕ್ರಮಾನ್ಮನನಪರ್ಯಂತೇ ಸಾಧನೇಽಸ್ಮಿನ್ ಸುಸಾಧಿತೇ ।**
**ಶಿವಯೋಗೋ ಭವೇತ್ತೇನ ಸಾಲೋಕ್ಯಾದಿಕ್ರಮಾಚ್ಛನೈಃ ॥೨೬॥**

೨೬ ಹೀಗೆ ಕ್ರಮವಾಗಿ ಮನನ ಪರ್ಯಂತವಾಗಿ ಈ ಸಾಧನೆಯನ್ನು ಸಾಧಿಸಿದರೆ ಅದರಿಂದ ಶಿವನ ಸಂಬಂಧ ಉಂಟಾಗಿ ಕ್ರಮವಾಗಿ ಮೆಲ್ಲ ಮೆಲ್ಲನೆ ಶಿವನ ಸಾಲೋಕ್ಯ, ಸಾಮೀಪ್ಯ, ಸಾಯುಜ್ಯವನ್ನು ಹೊಂದುವನು.

ವಿ.ವಿ. ೧. ಸಾಲೋಕ್ಯ ಎಂದರೆ ಅವನನ್ನೇ ಕಾಣುವುದು ಅಥವಾ ನೋಡುವುದು.
೨. ಸಾಮೀಪ್ಯ ಎಂದರೆ ಅವನ ಸಮೀಪ ಸೇರುವುದು.
೩. ಸಾಯುಜ್ಯ ಎಂದರೆ ಆತನಲ್ಲೇ ಸೇರಿ ಒಂದಾಗುವುದು.

**ಸರ್ವಾಂಗವ್ಯಾಧಯಃ ಪಶ್ಚಾತ್ಸರ್ವಾನಂದಶ್ಚ ಲೀಯತೇ ।**
**ಅಭ್ಯಾಸಾತ್ಕ್ಲೇಶಮೇತದ್ವೈ ಪಶ್ಚಾದಾದ್ಯಂತಮಂಗಲಂ ॥೨೭॥**

೨೭ ಈ ರೀತಿಯಾದ ಕ್ರಮದಿಂದ ಈಶ್ವರೋಪಾಸನೆಯನ್ನು ಮಾಡಿದರೆ ಸರ್ವರೋಗಗಳೂ, ಸಂಸಾರ ಕ್ಲೇಶಗಳೂ ಪರಿಹಾರವಾಗಿ ಸಕಲ ಸನ್ಮಂಗಳ ಉಂಟಾಗಿ ಕೊನೆಗೆ ಆನಂದಮಯವೂ ಆದ ಶಾಶ್ವತವೂ ಆದ ಶಿವಸಾಯುಜ್ಯವು ಲಭಿಸುವುದು.

ಇತಿ ಶ್ರೀ ಶಿವಮಹಾಪುರಾಣೇ ಪ್ರಥಮಾಯಾಂ ವಿದ್ಯೇಶ್ವರ ಸಂಹಿತಾಯಾಂ ಸಾಧ್ಯಸಾಧನಖಂಡೇ ತೃತೀಯೋಧ್ಯಾಯಃ

ಇಲ್ಲಿಗೆ ಶ್ರೀ ಶಿವಪುರಾಣದ ಮೊದಲನೆಯ ವಿದ್ಯೇಶ್ವರ ಸಂಹಿತೆಯಲ್ಲಿ ಸಾಧ್ಯ ಸಾಧನ ಖಂಡದಲ್ಲಿ ಮೂರನೇ ಅಧ್ಯಾಯವು ಮುಗಿದುದು.

||ಶ್ರೀಃ||

||ಓಂ ನಮಃ ಶಿವಾಯ||

ಅಥ ಶ್ರೀ ಶಿವಮಹಾಪುರಾಣೇ

ವಿದ್ಯೇಶ್ವರ ಸಂಹಿತಾಯಾಂ

# ಚತುರ್ಥೋಽಧ್ಯಾಯಃ

**||ಮುನಯ ಊಚುಃ||**

**ಮನನಂ ಕೀದೃಶಂ ಬ್ರಹ್ಮನ್ ಶ್ರವಣಂ ಚಾಪಿ ಕೀದೃಶಂ ।**

**ಕೀರ್ತನಂ ವಾ ಕಥಂ ತಸ್ಯ ಕೀರ್ತಯೈತದ್ಯಥಾಯಥಂ ||೧||**

ಮುನಿಗಳು ಈ ರೀತಿಯಾಗಿ ಪ್ರಶ್ನಿಸುತ್ತಾರೆ

೧ ಮನನವೆಂಬುದು ಯಾವ ರೀತಿಯಾದದ್ದು ಶ್ರವಣವೆಂಬದರ ಸ್ವರೂಪವೇನು? ಪರಮೇಶ್ವರನ ಕೀರ್ತನೆ ಎಂದರೆ ಹೇಗೆ ? ಈ ವಿಚಾರಗಳನ್ನು ಸ್ಪಷ್ಟವಾಗಿ ನಮಗೆ ತಿಳಿಸು.

**||ಬ್ರಹ್ಮೋವಾಚ||**

**ಪೂಜಾಜಪೇಶಗುಣರೂಪವಿಲಾಸನಾಮ್ನಾಂ**

**ಯುಕ್ತಿಪ್ರಿಯೇಣ ಮನಸಾ ಪರಿಶೋಧನಂ ಯತ್ ।**

**ತತ್ಸಂತತಂ ಮನನಮೀಶ್ವರದೃಷ್ಟಿಲಭ್ಯಂ**

**ಸರ್ವೇಷು ಸಾಧನವರೇಷ್ವಪಿ ಮುಖ್ಯ ಮುಖ್ಯಂ ||೨||**

ಬ್ರಹ್ಮನು ಹೇಳುತ್ತಾನೆ

೨ ಈಶ್ವರನ ಪೂಜಾ, ಜಪ, ಅವನ ಗುಣಗಳು ಪರಮೇಶ್ವರನ ಸ್ವರೂಪ, ಈಶ್ವರನ ಲೀಲೆ, ಶಿವನ ಪವಿತ್ರವಾದ ನಾಮಗಳನ್ನು ಅನೇಕ ಶಾಸ್ತ್ರೋಪಾಯಗಳಿಂದ ಮನಸ್ಸಿನಲ್ಲಿಯೇ ಚೆನ್ನಾಗಿ ಯೋಚಿಸುವುದು ಯಾವುದಿದೆಯೋ ಅದನ್ನು ಯಾವಾಗಲೂ ಮಾಡುವಿಕೆಯೇ ಮನನವೆನಿಸಿಕೊಳ್ಳುತ್ತದೆ. ಈ ಮನನವೆಂಬುದು ಎಲ್ಲಾ ಸಾಧನಗಳಿಗಿಂತ ಶ್ರೇಷ್ಟವೂ ಮುಖ್ಯವೂ ಆಗಿರುತ್ತದೆ. ಈ ರೀತಿಯಾದ ಮನನವು ಈಶ್ವರನ ಕೃಪಾದೃಷ್ಟಿಗೆ ಮುಖ್ಯ ಸಾಧನವಾಗಿದೆ.

**ಗೀತಾತ್ಮನಾ ಶ್ರುತಿಪದೇನ ಚ ಭಾಷಯಾ ವಾ**
**ಶಂಭುಪ್ರತಾಪಗುಣರೂಪವಿಲಾಸನಾಮ್ನಾಂ ।**
**ವಾಚಾ ಸ್ಫುಟಂ ತು ರಸವತ್ ಸ್ತವನಂ ಯವಸ್ಯ**
**ತತ್ಕೀರ್ತನಂ ಭವತಿ ಸಾಧನಮತ್ರ ಮಧ್ಯಂ ॥೩॥**

೩ ಗೀತಾತ್ಮಕವಾಗಿ ಆಗಲೀ, ವೇದದಲ್ಲಿರುವ ಪದಗಳಿಂದಾಗಲೀ ಅಥವಾ ಬೇರೆ ಭಾಷೆಗಳಲ್ಲಿ ಹೇಳಿರುವ ರೀತಿಯಲ್ಲಾಗಲೀ ಈಶ್ವರನ ಪ್ರತಾಪ, ಗುಣ, ರೂಪ, ಲೀಲೆ, ನಾಮಗಳು ಇವುಗಳನ್ನು ಸ್ಪಷ್ಟವಾದ ಮಾತುಗಳಿಂದಾಗಲೀ, ಮಧುರವಾದ ಸ್ತೋತ್ರಗಳಿಂದಾಗಲೀ ಸ್ತುತಿ ಮಾಡುವಂತದೇ ಕೀರ್ತನೆ ಆಗುತ್ತದೆ. ಇದು ಸಾಧನಗಳಲ್ಲಿ ಮಧ್ಯಮವಾದ ಸಾಧನವಾಗಿದೆ.

**ಯೇನಾಪಿ ಕೇನ ಕರಣೇನ ಚ ಶಬ್ದಪುಂಜಂ**
**ಯತ್ರ ಕ್ವಚಿಚ್ಛಿವಪರಂ ಶ್ರವಣೇಂದ್ರಿಯೇಣ ।**
**ಸ್ತ್ರೀಕೇಲಿವದ್ದೃಢತರಂ ಪ್ರಣಿಧೀಯತೇ ಯತ್**
**ತದ್ವೈ ಬುಧಾಃ ಶ್ರವಣಮತ್ರ ಜಗತ್ಪ್ರಸಿದ್ಧಂ ॥೪ತಿಳಿ೨**

೪ ಯಾವುದಾದರೂ ಸಾಧನದಿಂದ ಕೇಳಿದಂತಹ ಶಬ್ದಗಳ ಸಮೂಹಗಳನ್ನು ಎಲ್ಲಿ ಕೇಳಿದರೂ ಆ ಶಬ್ದ ಸಮೂಹಗಳನ್ನು ಶಿವಪರವಾಗಿ ಅರ್ಥೈಸಿಕೊಳ್ಳಬೇಕು. ಹೇಗೆಂದರೆ ಸ್ತ್ರೀಯ ಚಿಂತನ ಮಾಡುವ ಯುವಕನು ಲೋಕದಲ್ಲಿ ಯಾವ ವಿಚಾರಗಳನ್ನು ಕೇಳಿದರೂ ಅವ ತನ್ನ ಪ್ರೇಯಸಿಯ ವಿಚಾರವಾಗಿರತ್ಕಂತಹ ವಿಚಾರವೆಂದು ಹೇಗೆ ತಿಳಿಯುವನೋ ಹಾಗೇ ಯಾವ ಶಬ್ದ ಕೇಳಿದರೂ ಅದನ್ನು ಶಿವಸಂಬಂಧವಾದದ್ದೆಂದೇ ತಿಳಿಯಬೇಕು.

ವಿ.ವಿ.:- ಅಂದರೆ ಲೋಕದಲ್ಲಿ ಯುವತಿಯಲ್ಲಿ ಅನುರಕ್ತನಾದ ಯುವಕನು ಹೇಗೆ ಯಾವಾಗಲೂ ಅವಳನ್ನೇ ಸ್ಮರಿಸುತ್ತಾ ಯಾವ ಶಬ್ದ ಕೇಳಿ ಬಂದರೂ ಅವಳದೇ ಶಬ್ದವೆಂದೂ, ಅವಳದೇ ಮಧುರವಾದ ಧ್ವನಿಯೆಂದು ಭಾವಿಸುವನು. ಹಾಗೇ ಶಿವನಲ್ಲೇ ನೆಟ್ಟ ಮನಸ್ಸುಳ್ಳ ಭಕ್ತನು ಎಲ್ಲಾ ಶಬ್ದಗಳನ್ನೂ ಶಿವಮಯವಾದ ಅರ್ಥವುಳ್ಳದೆಂದೇ ಭಾವಿಸುವಂತಾಗಬೇಕು. ಇವೆರಡಕ್ಕೂ ಒಂದು ವ್ಯತ್ಯಾಸವೆಂದರೆ, ಯುವಕನು ಯುವತಿಯಲ್ಲಾಸಕ್ತಿ ಹೊಂದಿ ಶಬ್ದವನ್ನು ಅವಳದ್ದೆಂದು ತಿಳಿಯುವುದು ಕೇವಲ ಭ್ರಮೆಯಾಗುವುದು. ಆದರೆ ಶಿವನ ವಿಚಾರವನ್ನು ಅದು ಭ್ರಮೆಯಾಗದೇ ಸತ್ಯ

ವಿಚಾರವಾಗಿ ಸತ್ಫಲ ಪ್ರಾಪ್ತಿಯಾಗುವುದು. ಇದನ್ನೇ ಸತ್ಪುರುಷರು ಶ್ರವಣವೆಂದು ಹೇಳಿರುವುದು ಜಗತ್ತಿನಲ್ಲಿ ಪ್ರಸಿದ್ಧವಾಗಿರುವುದು.

ಸತ್ಸಂಗಮೇನ ಭವತಿ ಶ್ರವಣಂ ಪುರಸ್ತಾತ್
ಸಂಕೀರ್ತನಂ ಪಶುಪತೇರಥ ತದ್ದೃಢಂ ಸ್ಯಾತ್ ।
ಸರ್ವೋತ್ತಮಂ ಭವತಿ ತನ್ಮನನಂ ತದಂತೇ
ಸರ್ವಂ ಹಿ ಸಂಭವತಿ ಶಂಕರದೃಷ್ಟಿಪಾತೇ ॥೫॥

೫ ಈ ರೀತಿಯಾದ ಶ್ರವಣವು ಮೊದಲಿಗೆ ಸಜ್ಜನರ ಸಂಗದಿಂದ ಉಂಟಾಗುತ್ತದೆ. ಪರಮೇಶ್ವರನನ್ನು ಚೆನ್ನಾಗಿ ಕೀರ್ತನೆ ಮಾಡುವಿಕೆಯಿಂದ ಈ ಶ್ರವಣವು ಭಕ್ತನಲ್ಲಿ ದೃಢವಾಗುತ್ತದೆ. ಕೊನೆಯಲ್ಲಿ ಅದೇ ಉತ್ತಮವಾದ ಮನನವಾಗಿ ಆಗುತ್ತದೆ. ಇನ್ನು ಅನಂತರದಲ್ಲಿ ಶಂಕರನ ಕೃಪಾದೃಷ್ಟಿಯಿಂದ ಸರ್ವವೂ ಚೆನ್ನಾಗಿ ಉಂಟಾಗಿ ಶಿವನ ಅನುಗ್ರಹದಿಂದ ಎಲ್ಲವೂ ಸಿದ್ಧಿಸುವುದು.

॥ಸೂತ ಉವಾಚ॥

ಅಸ್ಮಿನ್ ಸಾಧನಮಾಹಾತ್ಮ್ಯೇ ಪುರಾವೃತ್ತಂ ಮುನೀಶ್ವರಾಃ ।
ಯುಷ್ಮದರ್ಥಂ ಪ್ರವಕ್ಷ್ಯಾಮಿ ಶೃಣುಧ್ವಮನಧಾನತಃ ।ತಿ೪೨ ೬॥

೬ ಸೂತರು ಹೇಳುತ್ತಾರೆ, ಎಲೈ ಮುನಿಗಳಿರೇ ಈ ಸಾಧನ ವಿಚಾರವಾಗಿ ಈ ಹಿಂದೆ ನಡೆದ ವಿಚಾರವನ್ನು ನಿಮಗೋಸ್ಕರವಾಗಿ ಹೇಳುತ್ತೇನೆ, ಕೇಳಿ. ಸಾವಧಾನವಾಗಿ ಕೇಳಿರಿ ಎಂದು ಹೇಳಲು ಪ್ರಾರಂಭಿಸಿದನು.

ಪುರಾ ಮಮ ಗುರುರ್ವ್ಯಾಸು ಪರಾಶರಮುನೇಃ ಸುತಃ ।
ತಪಶ್ಚಚಾರ ಸಂಭ್ರಾಂತಃ ಸರಸ್ವತ್ಯಾಃ ಶುಭೇ ತಟೆ ॥೭॥

೭ ಬಹಳ ಹಿಂದೆ ನನ್ನ ಗುರುಗಳೂ, ಪರಾಶರ ಮುನಿಗಳ ಮಗನೂ ಆದ ಶ್ರೀವ್ಯಾಸರು ಸಂಸಾರ ಕ್ಲೇಶದಿಂದ ಭ್ರಾಂತರಾಗಿ ಅದರ ನಿವಾರಣೆಗೋಸ್ಕರ ಸರಸ್ವತೀ ನದೀ ತೀರದಲ್ಲಿ ತಪಸ್ಸನ್ನು ಆಚರಿಸಿದರು.

ಗಚ್ಛನ್ ಯದೃಚ್ಛಯಾ ತತ್ರ ವಿಮಾನೇನಾರ್ಕರೋಚಿಷಾ ।
ಸನತ್ಕುಮಾರೋ ಭಗವಾನ್ ದದರ್ಶ ಮಮ ದೇಶಿಕಂ ॥೮॥

೮ ಆ ಸಮಯದಲ್ಲಿ ವಿಮಾನದಲ್ಲಿ ಸಂಚರಿಸುತ್ತಾ ಸೂರ್ಯನಂತೆ ತೇಜಸ್ಸುಳ್ಳ ಪೂಜ್ಯರಾದ ಸನತ್ಕುಮಾರರು ನನ್ನ ಗುರವವಾದ ವ್ಯಾಸರನ್ನು ನೋಡಿದರು.

ಧ್ಯಾನಾರೂಢಃ ಪ್ರಬುದ್ಧೋಽಸೌ ದದರ್ಶ ತಮಜಾತ್ಮಜಂ ।
ಪ್ರಣಿಪತ್ಯಾಹ ಸಂಭ್ರಾಂತಃ ಪರಂ ಕೌತೂಹಲಂ ಮುನಿಃ ॥೯॥

೯ ಆಗ ಧ್ಯಾನ ಮಗ್ನನಾಗಿದ್ದ ವ್ಯಾಸ ಮಹರ್ಷಿಯು ಎಚ್ಚರಗೊಂಡವನಾಗಿ ಬ್ರಹ್ಮಮಾನಸ ಪುತ್ರರಾದ ಸನತ್ಕುಮಾರರನ್ನು ನೋಡಿದನು. ಅವರನ್ನು ನೋಡಿ ಆಶ್ಚರ್ಯಗೊಂಡವನಾಗಿ ಬಹು ಸಂಭ್ರಮದಿಂದ ನಮಸ್ಕರಿಸಿದನು.

ದತ್ವಾರ್ಘ್ಯಮಸ್ಮೈ ಪ್ರದದೌ ದೇವಯೋಗ್ಯಂ ವಿಷ್ಟರಂ ।
ಪ್ರಸನ್ನಃ ಪ್ರಾಹ ತಂ ಪ್ರಹ್ವಂ ಪ್ರಭುರ್ಗಂಭೀರಯಾ ಗಿರಾ ॥೧೦॥

೧೦ ಆನಂತರದಲ್ಲಿ ಸನತ್ಕುಮಾರ ಮುನಿಗೆ ವ್ಯಾಸರು ಅರ್ಘ್ಯವನ್ನು ನೀಡಿ ದೇವತೆಗಳಿಗೆ ಯೋಗ್ಯವಾದ ಆಸನವನ್ನು ಕುಳಿತುಕೊಳ್ಳಲು ಕೊಟ್ಟು ಗೌರವಿಸಿದನು. ಈ ರೀತಿ ಗೌರವಿಸಿ ನಿಂತಿರುವ ವ್ಯಾಸರನ್ನು ಕುರಿತು, ಪ್ರಸನ್ನನಾಗಿರುವ ಸನತ್ಕುಮಾರರು ತಮ್ಮ ಗಂಭೀರವಾದ ಮಾತುಗಳನ್ನು ಈ ರೀತಿ ಆಡಿದರರು.

॥ಸನತ್ಕುಮಾರ ಉವಾಚ॥

ಸತ್ಯಂ ವಸ್ತು ಮುನೇ ದಧ್ಯಾಃ ಸಾಕ್ಷಾತ್ಕರಣಗೋಚರಃ ।
ಸ ಶಿವೋಽಥಾಸಹಾಯೋಽತ್ರ ತಪಶ್ಚರಸಿ ಕಿಂಕೃತೇ ॥೧೧॥

ಸನತ್ಕುಮಾರರು ಹೇಳುತ್ತಾರೆ

೧೧ ಎಲೈ ವ್ಯಾಸ ಮುನಿಯೇ ಸತ್ಯ ವಸ್ತುವನ್ನು ಕುರಿತು ತಪಸ್ಸನ್ನು ಆಚರಿಸು. ಅಗತ್ಯವಾದ ವಸ್ತುವು ಶಿವನೇ ಆಗಿರುವನು. ಹಾಗಿಲ್ಲದೇ ಇಲ್ಲಿ ಯಾವುದಕ್ಕಾಗಿ ತಪಸ್ಸನ್ನಾಚರಿಸುತ್ತಿರುವೆ.

ಏವಮುಕ್ತಃ ಕುಮಾರೇಣ ಪ್ರೋವಾಚ ಸ್ವಾಶಯಂ ಮುನಿಃ ।
ಧರ್ಮಾರ್ಥಕಾಮಮೋಕ್ಷಾಶ್ಚ ವೇದಮಾರ್ಗೇ ಕೃತಾದರಾಃ ॥೧೨॥

೧೨ ಹೀಗೆ ಕೇಳಲ್ಪಟ್ಟ ಸನತ್ಕುಮಾರರಿಗೆ ಶ್ರೀ ವ್ಯಾಸರು ಹೀಗೆ ಹೇಳಿದರು. ಓ

ಮುನಿಯೇ , ಧರ್ಮಾರ್ಥ ಕಾಮಮೋಕ್ಷಗಳು ಜನರಿಗೆ ಲಭಿಸುವಂತೆ ಸ್ಥಾಪಿಸಿರುವನು ಮತ್ತು ಜನಗಳು ವೇದಮಾರ್ಗದಲ್ಲಿ ನಡೆಯುವಂತೆಯೂ ಮಾಡಿರುವೆನು.

**ಬಹುಧಾ ಸ್ಥಾಪಿತಾ ಲೋಕೇ ಮಯಾ ತ್ವತ್ಕೃಪಯಾ ತತಾ ।**
**ಏವಂ ಭೂತಸ್ಯ ಮೇಽಪ್ಯೇವಂ ಗುರುಭೂತಸ್ಯ ಸರ್ವತಃ ॥೧೩॥**

೧೩ ಈ ರೀತಿಯಾಗಿ ಅನೇಕ ವಿಧವಾದ ಉಪಾಯಗಳನ್ನು ನಾನು ಲೋಕದಲ್ಲಿ ಸ್ಥಾಪಿಸಿ ಎಲ್ಲರಿಗೂ ಗುರುವಾಗಿದ್ದರೂ ಈ ರೀತಿಯಾಗಿರುವ ನನಗೆ ನಿನ್ನ ಕೃಪೆಯೇ ಮೂಲವಾಗಿದೆ. ಹೀಗೆ ಎಲ್ಲರಿಗೆ ಗುರುವಾಗಿರುವೆ ನನಗೆ.

**ಮುಕ್ತಿಸಾಧನಕಂ ಜ್ಞಾನಂ ನೋದೇತಿ ಪರಮಾದ್ಭುತಂ ।**
**ತಪಶ್ಚರಾಮಿ ಮುಕ್ತ್ಯರ್ಥಂ ನ ಜಾನೇ ತತ್ರ ಕಾರಣಂ ॥೧೪॥**

೧೪ ಆಶ್ಚರ್ಯವೆಂದರೆ ಮುಕ್ತಿಗೆ ಸಾಧನವಾದ ಉಪಾಯವು ಇನ್ನು ನನಗೆ ತಿಳಿದಿಲ್ಲ. ಕಾರಣವೇನೋ ನನಗೆ ತಿಳಿದಿಲ್ಲ. ಆದ್ದರಿಂದ ಮುಕ್ತಿಗಾಗಿ ನಾನು ತಪಸ್ಸನ್ನು ಆಚರಿಸುತ್ತಿರುವೆನು.

**ಇತ್ಥಂ ಕುಮಾರೋ ಭಗವಾನ್ ವ್ಯಾಸೇನ ಮುನಿನಾರ್ಥಿತಃ ।**
**ಸಮರ್ಥಃ ಪ್ರಾಹ ವಿಪ್ರೇಂದ್ರಾ ನಿಶ್ಚಯಂ ಮುಕ್ತಿಕಾರಣಂ ॥೧೫॥**

೧೫ ಈ ರೀತಿಯಾಗಿ ತನ್ನ ಅಭಿಪ್ರಾಯವನ್ನು ವ್ಯಾಸರು ಹೇಳಲಾಗಿ ಸನತ್ಕುಮಾರರು ಹೀಗೆ ಮುಕ್ತಿ ಕಾರಣವನ್ನು ಹೇಳಲಾರಂಭಿಸಿದರು.

**ಶ್ರವಣಂ ಕೀರ್ತನಂ ಶಂಭೋರ್ಮನನಂ ಚ ಮಹತ್ತರಂ ।**
**ತ್ರಯಂ ಸಾಧನಮುಕ್ತಂ ಚ ವಿದ್ಯತೇ ವೇದಸಮ್ಮತಂ ॥೧೬॥**

೧೬ ಎಲೈ ವ್ಯಾಸನೇ ಅ ಈಶ್ವರನ ಸಂಬಂಧವಾದ ಶ್ರವಣ, ಕೀರ್ತನ, ಮನನವೆಂಬ ಮೂರು ಸಾಧನಗಳೇ ಮುಕ್ತಿಗೆ ಸಾಧನಗಳಾಗಿರುವುವು.

ವಿ.ವಿ. :- ಇದೇ ವಿಚಾರವಾಗಿ ಶ್ರುತಿಯಲ್ಲಿ ಸಹ ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿದ್ರವ್ಯ ಎಂದು ಹೇಳಿದೆ. ಶೈವ ದರ್ಶನದಲ್ಲಿಯೂ ಸಹ ಈ ರೀತಿ ಹೇಳಿದೆ.

**ಶ್ರೋತವ್ಯಃ ಶ್ರುತಿ ವಾಕ್ಯೇಭ್ಯೋ ಮಂತವ್ಯ ಶ್ಚೋಪ ಪತ್ತಿಭಿಃ**
**ಧ್ಯೇಯಂಚ ಯೋಗ ಮಾರ್ಗೇಣ ಶಕ್ತಿ ಪಾತೋದಿತಾತ್ಮಭಿಃ॥ಎಂದು**

ಇವೇ ಅಂದರೆ, ಶ್ರವಣ, ಮನನ, ಧ್ಯಾನಗಳೇ ಶಿವನ ದರ್ಶನಕ್ಕೆ ಕಾರಣಗಳಾಗಿವೆ ಎಂದು.

**ಪುರಾಹಮಥ ಸಂಭ್ರಾಂತೋ ಹ್ಯನ್ಯಸಾಧನಸಂಭ್ರಮಃ ।**
**ಅಚಲೇ ಮಂದರೇ ಶೈಲೆ ತಪಶ್ಚರಣಮಾಚರಂ ॥೧೭॥**

೧೭ ಈ ಹಿಂದೆ ನಾನು ಭ್ರಾಂತನಾಗಿ ಮುಕ್ತಿಗಾಗಿ ಹಂಬಲಿಸಿ ಬೇರೆ ಸಾಧನಗಳಿಂದ ಕೂಡಿ ಅಚಲವಾದ ಮಂದರ ಪರ್ವತದಲ್ಲಿ ತಪಶ್ಚರಣೆಯನ್ನು ಮಾಡಿದನು.

**ಶಿವಾಜ್ಞಾಯಾ ತತಃ ಪ್ರಾಪ್ತೋ ಭಗವಾರ್ನ ನಂದಿಕೇಶ್ವರಃ ।**
**ಸ ಮೇ ದಯಾಲುರ್ಭಗವಾರ್ನ ಸರ್ವಸಾಕ್ಷೀ ಗಣೇಶ್ವರಃ ॥೧೮॥**

೧೮ ಆಗ ಶಿವನ ಆಜ್ಞೆಯಂತೆ ಪೂಜ್ಯನಾದ ನಂದಿಕೇಶ್ವರನು ನನ್ನ ಸನಿಹಕ್ಕೆ ಬಂದನು. ಆ ಪೂಜ್ಯನು ದಯೆ ಉಳ್ಳವನೂ ಸರ್ವಜ್ಞನೂ, ಪ್ರಮಥ ಗಣಗಳಿಗೆ ನಾಯಕನೂ, ಆಗಿದ್ದನು. ಅಂತಹ ಮಹಿಮನು ನನಗೆ ಹೀಗೆ ಹೇಳಿದನು.

**ಉವಾಚ ಮಹ್ಯಂ ಸನ್ನೇಹಂ ಮುಕ್ತಿಸಾಧನಮುತ್ತಮಂ ।**
**ಶ್ರವಣಂ ಕೀರ್ತನಂ ಶಂಭೋರ್ಮನನಂ ವೇದಸಮ್ಮತಂ ॥೧೯॥**

೧೯ ನನ್ನ ಮೇಲಿನ ಸ್ನೇಹದಿಂದ ಆತನು ಶಿವನ ಸ್ರವಣ, ಮನನ, ಕೀರ್ತನಗಳು ಮುಕ್ತಿಗೆ ಸಾಧನಗಳೆಂದು ವೇದದಲ್ಲಿ ಹೇಳಿದೆ ಎಂದು ಹೇಳಿದನು.

**ತ್ರಿಕಂ ಚ ಸಾಧನಂ ಮುಕ್ತೌ ಶಿವೇನ ಮಮ ಭಾಷಿಕಂ ।**
**ಶ್ರವಣಾದಿತ್ರಿಕಂ ಬ್ರಹ್ಮರ್ನ ಕುರುಷ್ವೇತಿ ಮುಹುರ್ಮುಹುಃ ॥೨೦॥**

೨೦ ಈ ರೀತಿಯಾದ ಶ್ರವಣಾದಿ ಮೂರು ಸಾಧನಗಳೇ ಮುಕ್ತಿಗೆ ಸಾಧನಗಳಾಗಿವೆ ಎಂದು ಶಿವನಿಂದಲೇ ಹೇಳಲ್ಪಟ್ಟಿವೆ. ಆದ್ದರಿಂದ ಎಲೈ ಮುನಿಯೇ ನೀನು ಸಹ ಅದನ್ನೇ ಮತ್ತೆ ಮತ್ತೆ ಆಚರಿಸು ಎಂದು ಹೇಳಿದನು.

**ಏವಮುಕ್ತ್ವಾ ತತೋವ್ಯಾಸಂ ಸಾನುಗೋ ವಿಧಿನಂತದನಃ ।**
**ಜಗಾಮ ಸ್ವವಿಮಾನೇನ ಪದಂ ಪರಮಶೋಭನಂ ॥೨೧॥**

೨೧ ಹೀಗೆ ಈ ರೀತಿಯಾದ ಮುಕ್ತಿಯ ಪರಮ ಸಾಧನೆಗಳನ್ನು ವಿಧಿ ಪುತ್ರನಾ ಸನತ್ಕುಮಾರನು ಶ್ರೀ ವ್ಯಾಸ ಮುನಿಗೆ ತಿಳಿಸಿ ತನ್ನ ಪರಿವಾರದೊಂದಿಗೆ ತನ್ನ ವಿಮಾನದಲ್ಲಿ ಪವಿತ್ರವಾದ ಮಂಗಳಕರವಾದ ಬ್ರಹ್ಮಲೋಕಕ್ಕೆ ತೆರಳಿದನು.

ಏವ ಮುಕ್ತಂ ಸಮಾಸೇನ ಪೂರ್ವವೃತ್ತಾಂತ ಮುತ್ತಮಂ ।
॥ಋಷಯ ಊಚುಃ ॥
ಶ್ರವಣಾದಿತ್ರಯಂ ಸೂತ ಮುಕ್ತ್ಯುಪಾಯಸ್ತ್ವಯೇರಿತಃ ॥೨೨॥
ಸೂತನು ಹೇಳಿದನು

೨೨ ಎಲೈ ಮುನಿಗಳೇ ಈ ರೀತಿಯಾಗಿ ನಾನು ನಿಮಗೆ ಸಂಕ್ಷೇಪವಾಗಿ ಪೂರ್ವ ವೃತ್ತಾಂತವನ್ನುಹೇಳಿರುವೆನು ಎಂದಾಗ ಋಷಿಗಳು ಹೇಳುತ್ತಾರೆ. ಎಲೈ ಸೂತ ಮಹಾಮುನಿಯೇ ಶ್ರವಣವೇ ಮೊದಲಾದ ಮೂರು ಉಪಾಯಗಳೇ ಮುಕ್ತ್ಯುಪಾಯಗಳೆಂದು ನೀನು ಹೇಳಿರುವೆಯಷ್ಟೇ.

ಶ್ರವಣಾದಿತ್ರಿಕೇಽಶಕ್ತಃ ಕಿಂ ಕೃತ್ವಾ ಮುಚ್ಯತೇ ಜನಃ ।
ಆಯತ್ನೇನೈವ ಮುಕ್ತಿಃ ಸ್ಯಾತ್ಕರ್ಮಣಾ ಕೇನ ಹೇತುನಾ ॥೨೩॥

೨೩ ಶ್ರವಣಾದಿಗಳಲ್ಲಿ ಅಶಕ್ತರಾದ ಜನರು ಹೇಗೆ ಮುಕ್ತಿಯನ್ನು ಹೊಂದುವರು ಲ ಹೆಚ್ಚಿನ ಪರಿಶ್ರಮವಿಲ್ಲದೇ ಯಾವ ಕರ್ಮದಿಂದ ಮುಕ್ತಿಯು ಲಭ್ಯವಾಗುವುದು ಲ ಅದನ್ನು ನಮಗೆ ತಿಳಿಸು ಎಂದು ಹೇಳಿದರು.

ಇತಿ ಶಿವಮಹಾಪುರಾಣೇ ವಿದ್ಯೇಶ್ವರ ಸಂಹಿತಾಯಾಂ ಸಾಧ್ಯಸಾಧನಕಂಡೇ ಚತುರ್ಥೋಽಧ್ಯಾಯಃ ಇಲ್ಲಿಗೆ ಶ್ರೀ ಶಿವಪುರಾಣದಲ್ಲಿ ವಿದ್ಯೇಶ್ವರ ಸಂಹಿತೆಯಲ್ಲಿ ಸಾಧ್ಯ ಸಾಧನೆ ಖಂಡದಲ್ಲಿ ನಾಲ್ಕನೇ ಅಧ್ಯಾಯವು ಮುಗಿದುದು.

||ಶ್ರೀ||

||ಓಂ ನಮಃ ಶಿವಾಯ||

ಅಥ ಶ್ರೀ ಶಿವಮಹಾಪುರಾಣೇ

ವಿದ್ಯೇಶ್ವರಸಂಹಿತಾಯಾಂ

# ಪಂಚಮೋಽಧ್ಯಾಯಃ

ಐದನೇ ಅಧ್ಯಾಯವು

||ಸೂತ ಉವಾಚ||

ಶ್ರವಣಾದಿತ್ರಿಕೇಽಶಕ್ತೋ ಲಿಂಗಂ ಬೇರಂ ಚ ಶಾಂಕರಂ|
ಸಂಸ್ಥಾಪ್ಯ ನಿತ್ಯಮಭ್ಯರ್ಚ್ಯ ತರೇತ್ಸಂಸಾರಸಾಗರಂ||೧||

ಸೂತರು ಹೇಳುತ್ತಾರೆ

೧ ಎಲೈ ಋಷಿಗಳೇ ಕೇಳಿರಿ, ಶ್ರವಣ, ಮನನ, ಕೀರ್ತನಗಳಿಗೆ ಅಶಕ್ತನಾದವನು ಈಶ್ವರನ ಲಿಂಗವನ್ನಾಗಲೀ, ವಿಗ್ರಹವನ್ನಾಗಲೀ ಸ್ಥಾಪಿಸಿ ನಿತ್ಯದಲ್ಲಿ ಅನನ್ಯ ಭಕ್ತಿಯಿಂದ ಪೂಜಿಸಿ ಸಂಸಾರ ಸಾಗರವನ್ನು ದಾಟಬಹುದು.

ಅಪಿ ದ್ರವ್ಯಂ ವಹೇದೇವ ಯಥಾಬಲಮವಂಚಯನ್ |
ಅರ್ಪಯೇಲ್ಲಿಂಗಬೇರಾರ್ಥಮರ್ಚಯೇದಪಿ ಸಂತತಂ||೨||

೨ ಹಾಗೇ ತನ್ನ ಶಕ್ತಿಗೆ ತಕ್ಕಷ್ಟೆ ಪೂಜಾದ್ರವ್ಯಗಳನ್ನು ಸಂಗ್ರಹಿಸಿ ನಿರ್ವಂಚನೆಯಿಂದ ಲಿಂಗಕ್ಕಾಗಲೀ, ವಿಗ್ರಹಕ್ಕಾಗಲೀ ಸತತವೂ ಅರ್ಪಿಸಬೇಕು.

ಮಂಡಪಂ ಗೋಪುರಂ ತೀರ್ಥಂ ಮಠಂ ಕ್ಷೇತ್ರಂ ತಥೋತ್ಸವಂ |
ವಸ್ತ್ರಂ ಗಂಧಂ ಚ ಮಾಲ್ಯಂ ಚ ಧೂಪಂ ದೀಪಂ ಚ ಭಕ್ತಿತಃ ||೩||

೩ ಅಂದರೆ ದೇವರ ಪೂಜೆಗಾಗಿ ಮಂಟಪ, ಗೋಪುರ, ತೀರ್ಥ, ಮಠ, ಕ್ಷೇತ್ರ ಇವುಗಳನ್ನು ಶಿವಪೂಜೆಯಲ್ಲಿ ವಿನಿಯೋಗಿಸಬೇಕು. ಹಾಗೇ ಉತ್ಸವವನ್ನೂ ಮಾಡಬೇಕು. ಹಾಗೆಯೇ ವಸ್ತ್ರ, ಗಂಧ, ಪುಷ್ಪಮಾಲಿಕೆ, ಧೂಪ, ದೀಪಗಳನ್ನು ಭಕ್ತಿಯಿಂದ ಸಮರ್ಪಿಸಬೇಕು.

ವಿವಿಧಾನ್ನಂ ಚ ನೈವೇದ್ಯಮಪೂಪವ್ಯಂಚನ್ಯೈರ್ಯುತಂ ।
ಛತ್ರಂ ಧ್ವಜಂ ಚ ವ್ಯಜನಂ ಚಾಮರಂ ಚಾಪಿ ಸಾಂಗಕಂ ॥೪॥

೪ ಅನೇಕ ವಿಧವಾದ ಅನ್ನ, ಸಿಹಿ ತಿಂಡಿಗಳು, ಇವೆರಡನ್ನೂ ಊಟದಲ್ಲಿ ನೆಂಚಿಕೊಳ್ಳುವ ವ್ಯಂಜನಗಳನ್ನು ಈಶ್ವರನಿಗೆ ಅರ್ಪಿಸಬೇಕು. ಅನಂತರದಲ್ಲಿ ಛತ್ರಿ, ಧ್ವಜ, ಬೀಸಣಿಗೆ, ಚಾಮರ ಮೊದಲಾದ ರಾಜೋಪಚಾರಗಳನ್ನೂ ಸಹ ಸಾಂಗವಾಗಿ ಅರ್ಪಿಸಬೇಕು.

ರಾಜೋಪಚಾರವತಂ ಧಾರಯೇಲ್ಲಿಂಗಬೇರಯೋಃ ।
ಪ್ರದಕ್ಷಿಣಾಂ ನಮಸ್ಕಾರಂ ಯಥಾಶಕ್ತಿ ಜಪಂ ತಥಾ ॥೫॥

೫ ರಾಜನಿಗೆ ಉಪಚರಿಸಿದಂತೆ ಸಕಲ ಉಪಚಾರಗಳಿಂದ ಶಿವನನ್ನು ತೃಪ್ತಿಗೊಳಿಸಬೇಕು. ಈ ಎಲ್ಲಾ ಉಪಚಾರಗಳನ್ನು ಲಿಂಗದಲ್ಲಿಯಾಗಲೀ, ವಿಗ್ರಹದಲ್ಲಿಯಾಗಲೀ ಮಾಡಬಹುದು. ನಂತರ ಪ್ರದಕ್ಷಿಣೆ, ನಮಸ್ಕಾರ, ಪೂಜಾಂಗವಾದ ಕಡೆಯಲ್ಲಿ ಮಾಡುವ ಜಪವನ್ನು ಮಾಡಬೇಕು.

ಆವಾಹನಾದಿಸರ್ಗಾಂತಂ ನಿತ್ಯಂ ಕುರ್ಯಾತ್ಸುಭಕ್ತಿತಃ ।
ಇತ್ಥಮಭ್ಯರ್ಚಯೇ ದೇವಂ ಲಿಂಗೇ ಬೇರೇ ಚ ಶಾಂಕರ ॥೬॥

೬ ಪ್ರತಿನಿತ್ಯದಲ್ಲೂ ಆವಾಹನೆಯಿಂದ ವಿಸರ್ಜನೆಯವರೆವಿಗೆ ಪ್ರತಿನಿತ್ಯ ಪೂಜೆಯನ್ನು ಈಶ್ವರನಿಗೆ ಲಿಂಗದಲ್ಲಿ ಅಥವಾ ಮೂರ್ತಿಯಲಲ್ಲಿ ಸಲ್ಲಿಸಬಹುದು.

ಸಿದ್ಧಿಮೇತಿ ಶಿವಪ್ರೀತ್ಯಾ ಹಿತ್ವಾಪಿ ಶ್ರವಣಾದಿಕಂ ।
ಲಿಂಗವೇರಾರ್ಚನಾಮಾತ್ರಾನ್ಮುಕ್ತಾಃ ಪೂರ್ವೇ ಮಹಾಜನಾಃ ॥೭॥

೭ ಆದ್ದರಿಂದ ಶ್ರವಣ, ಮನನ, ಕೀರ್ತನಗಳನ್ನು ಬಿಟ್ಟಿದ್ದರೂ ಈ ರೀತಿಯಾಗಿ ಲಿಂಗ, ಬೇರಗಳನ್ನರ್ಚಿಸಿದ ಮಾತ್ರದಿಂದಲೇ ಹಿಂದೆ ಬಹಳ ಜನರು ಮುಕ್ತಿಯನ್ನು ಹೊಂದಿರುವರು.

॥ಮುನಯ ಊಚುಃ॥

ಬೇರಮಾತ್ರೇ ತು ಸರ್ವತ್ರ ಪೂಜ್ಯಂತೇ ದೇವತಾಗಣಾಃ ।
ಲಿಂಗೇ ಬೇರೇ ಚ ಸರ್ವತ್ರ ಕಥಂ ಸಂಪೂಜ್ಯತೇ ಶಿವಃ ॥೮॥

ಮುನಿಗಳು ಹೀಗೆ ಹೇಳುತ್ತಾರೆ

೮ ಎಲೈ ಸೂತ ಮಹಾಮುನಿಯೇ ದೇವತೆಗಳ ಸಮೂಹಗಳೆಲ್ಲವೂ ಸಹ ವಿಗ್ರಹದಲ್ಲಿ ಮಾತ್ರ ಪೂಜಿಸಲ್ಪಡುತ್ತಾರೆ. ಆದರೆ ಶಿವನು ಮಾತ್ರ ಲಿಂಗ ಮತ್ತು ವಿಗ್ರಹಗಳೆರಡರಲ್ಲೂ ಹೇಗೆ ಪೂಜಿಸಲ್ಪಡುವನು.

ವಿ.ವಿ.:- ಮೂರನೇ ಶ್ಲೋಕದಿಂದ ಆರನೇ ಶ್ಲೋಕದವರೆವಿಗೆ

ಇಲ್ಲಿ 'ಮಂಟಪ'ಇತ್ಯಾದಿಗಳನ್ನು ಶಿವನಿಗೆ ಸಮರ್ಪಿಸಬೇಕೆಂದು ಉಲ್ಲೇಖಿಸಿರುವರು. ಅಂದರೆ ದೇವಪ್ರೀತ್ಯರ್ಥವಾಗಿ ಆಸನಾರ್ಥವಾಗಿ ಸುಂದರ ಮಂಟಪದಲ್ಲಿ ಸ್ಥಾಪಿಸುವುದು. 'ಗೋಪುರ'ವೆಂದರೆ ಶಿಖರ ಭಾಗವೆಂದು ಇಲ್ಲಿ ನಾವು ತಿಳಿಯಬೇಕು. 'ತೀರ್ಥ'ವೆಂದರೆ ಉತ್ತಮವಾದ ನದಿ, ಕೊಳ, ಕೆರೆ, ಪುಷ್ಕರಿಣಿ ಅಥವಾ ಬಾವಿಯ ನೀರೆಂದು ಅರ್ಥ. 'ಮಠಂ' ಎಂಬುದೊಂದು ವಿಶೇಷ. ಅಂದರೆ 'ಶಿವಾಲಯವೆಂದೇ?' ಅಥವಾ 'ಇಂದಿನ ಅನೇಕ ಮಠಾಧಿಪತಿಗಳ ಆವಾಸ ಸ್ಥಾನವೆಂದೇ?' 'ಹಾಗೆರಡೂ ಅಲ್ಲ' ಅಮರ ಕೋಶಕಾರವಾದ ಅಮರ ಸಿಂಹನು ತನ್ನ ಕೋಶದಲ್ಲಿ 'ಮಠಶ್ಚಾತ್ರಾದಿನಿಲಯೋ' ಎಂದು ಹೇಳಿರುವುದರಿಂದ 'ಎಲ್ಲಿ ವಿದ್ಯಾಭ್ಯಾಸ ನಡೆಯುವುದೋ ಅಂತಹ ಗುರುಕುಲಾಶ್ರಮ ಎಂದು ವಿವರಿಸಬಹುದು' ಅಂದರೆ ವೇದ, ಶಾಸ್ತ್ರಾದಿಪಾಠ ನಡೆಯುವ ತಾಣವೆಂದು.' ಮುಂದೆ 'ರಾಜೋಪಚಾರವತ್' ಎಂದು ಹೇಳಿದ್ದಾರೆ.

ಅಂದರೆ ರಾಜಯೋಗ್ಯವಾದ ವಸ್ತ್ರಾದಿಗಳನ್ನು ಸಮರ್ಪಿಸಬೇಕೆಂದರ್ಥ. ಇದಕ್ಕೆಲ್ಲಿ ನಿರ್ಗತಿಕನಾದರೆ ಏನು ಮಾಡಬೇಕು ? ಅಂದರೆ ಅಂತರಾರ್ಥದಲ್ಲಿ 'ರಾಜನಿಗೆ ಹೇಗೆ ನಾವು ಭಯ, ಭಕ್ತಿ, ಗೌರವಗಳಿಂದ ಉಪಚರಿಸುತ್ತೇವೆಯೋ ಹಾಗೆ' ಎಂದರ್ಥ. ಒಟ್ಟಿನಲ್ಲಿ ಪೂಜೆ' ಎಂದರೆ ತನ್ನ ಸಾಮರ್ಥ್ಯಕ್ಕೆ ತಕ್ಕಷ್ಟು ಸಾಮಗ್ರಿಗಳನ್ನು, ಸಾಧ್ಯವಾದಷ್ಟು ಮಟ್ಟಿಗೆ ಶಾಸ್ತ್ರ ದಲ್ಲಿ ಹೇಳಿರುವ ನಿಯಮಾದಿಗಳಿಂದ ಸಂಗ್ರಹಿಸಿ ದೇವಪ್ರೀತ್ಯರ್ಥವಾಗಿ ಅರ್ಪಿಸುವುದೇ ಆಗಿದೆ '. 'ಪ್ರಯಾಣಾದಿ ಬೇರೆ ಸ್ಥಳದಲ್ಲಿರುವ ಕಾಲದಲ್ಲಿ, ಸಹ ಈಶ್ವರಾರಾಧನೆಯನ್ನು ಮಾನಸಿಕವಾಗಿಯಾದರೂ ಮಾಡಬಹುದು. ಅದಕ್ಕಾಗಿಯೇ ಶ್ರೀ ಶಂಕರ ಭಗವತ್ಪಾದರೂ ಸಹ ಶಿವಮಾನಸಪೂಜಾ ಸ್ತೋತ್ರ ರಚಿಸಿ ಕಡೆಯಲ್ಲಿ 'ತಾಂಬೂಲಂ ಮನಸಾಮಯಾವಿರಚಿತಂ ಭಕ್ತ್ಯಾ ಪ್ರಭೋ ಸ್ವೀಕುರು' ಎಂದು ಹೇಳಿದ್ದಾರೆ. ಅಂದರೆ ಮನುಷ್ಯನ 'ಉತ್ತಮಗತಿಗೆ, ಮುಕ್ತಿಗೆ ಮನಸ್ಸೇ ಕಾರಣವಲ್ಲವೇ ?' ಆದ್ದರಿಂದಲೇ ನಮ್ಮ ಹಿರಿಯರು 'ಮನ ಏವ ಮನುಷ್ಯಾಣಾಂ ಕಾರಣಂ ಬಂಧ ದೋಷಯೋ' ಎಂದಿರುವುದು.

ಅಂದರೆ 'ಮನುಷ್ಯರಿಗೆ ಮನಸ್ಸೇ ಸಂಸಾರ ಬಂಧನಕ್ಕೂ, ಶ್ರೇಷ್ಠ ವಾದ ಮೋಕ್ಷ'ಕ್ಕೂ ಕಾರಣವೆಂದಿದ್ದಾರೆ.

||ಸೂತ ಉವಾಚ||

ಅಹೋ ಮುನೀಶ್ವರಾಃ ಪುಣ್ಯಂ ಪ್ರಶ್ನಮೇತನ್ಮಹಾದ್ಭುತಂ ।
ಅತ್ರ ವಕ್ತಾ ಮಹಾದೇವೋ ನಾನ್ಯೋಽಸ್ತಿ ಪುರುಷಃ ಕ್ವಚಿತ್ ||9||

ಸೂತರು ಹೇಳುತ್ತಾರೆ

೯ ಎಲೈ ಮುನೀಶ್ವರರೇ ಈಗ ನೀವು ಕೇಳಿದ ಪ್ರಶ್ನೆಯು ಅತ್ಯಂತ ಆಶ್ಚರ್ಯಕರವೂ, ಅತ್ಯಂತ ಪುಣ್ಯಕರವಾದದ್ದೂ ಆಗಿದೆ. ಈ ನಿಮ್ಮ ಪ್ರಶ್ನೆಗೆ ಉತ್ತರವನ್ನು ನೀಡಲು ಪರಮೇಶ್ವರನೊಬ್ಬನೇ ಸಮರ್ಥನು. ಹಾಗಿಲ್ಲದೇ ಬೇರೆ ಮನುಷ್ಯರು ಈ ವಿಚಾರಗಳನ್ನು ವರ್ಣಿಸಲು ಎಷ್ಟು ಮಾತ್ರಕ್ಕೂ ಯೋಗ್ಯರಲ್ಲ.

ಶಿವೇನೋಕ್ತಂ ಪ್ರವಕ್ಷ್ಯಾಮಿ ಕ್ರಮಾದ್ಗುರುಮುಖಾಚ್ಛ್ರುತಂ ।
ಶಿವೈಕೋ ಬ್ರಹ್ಮರೂಪತ್ವಾನ್ನಿಷ್ಕಲಃ ಪರೀಕೀರ್ತಿತಃ ||೧೦||

೧೦ ಆದರೂ ಶಿವನಿಂದಲೇ ಹೇಳಲ್ಪಟ್ಟು ಗುರುಮುಖಗಳಿಂದ ಕ್ರಮವಾಗಿ ಕೇಳಿ ಬಂದಿರುವ ವಿಚಾರವನ್ನು ಹೇಳುವೆನು ಕೇಳಿ. ಶಿವನೊಬ್ಬನೇ ಬ್ರಹ್ಮ ಸ್ವರೂಪನು. ಅವನು ನಿಷ್ಕಲ ಸ್ವರೂಪನು ಅಂದರೆ ಆಕಾರಾದಿ ರಹಿತನು. ಆಕಾಶದಂತೆ ಎಲ್ಲೆಲ್ಲಿಯೂ ಇರುವನು. ಅಂದರೆ ನಿರಾಕಾರನು ಎಂದರ್ಥ.

ರೂಪಿತ್ವಾತ್ಸಕಲಸ್ತದ್ವತ್ತಸ್ಮಾತ್ಸಕಲನಿಷ್ಕಲಃ ।
ಸಕಲತ್ವಾತ್ತಥಾ ಬೇರಂ ಸಾಕಾರಂ ತಸ್ಯ ಸಂಗತಂ ||೧೧||

೧೧ ಅನೇಕ ರೂಪಗಳನ್ನು (ಬ್ರಹ್ಮ, ವಿಷ್ಣು ಮೊದಲಾದ) ಧರಿಸಿದ್ದರಿಂದ ಅವಯವಾದಿಗಳುಳ್ಳವನೂ ಆಗಿ ಸಕಲ, ನಿಷ್ಕಲನೂ ಅಂದರೆ ನಿರಾಕಾರನೂ, ಆಕಾರವುಳ್ಳವನೂ ಆಗಿರುವನು. ಆಕಾರಗಳಿಂದ ಕೂಡಿದವನಾದ್ದರಿಂದ ವಿಗ್ರಹವುಳ್ಳವನೂ ಆಗಿ ಸಾಕಾರರೂಪಿಯೂ ಆಗಿದ್ದಾನೆ.

ನಿಷ್ಕಲತ್ವಾನ್ನಿರಾಕಾರಂ ಲಿಂಗಂ ತಸ್ಯ ಸಮಾಗತಂ ।
ಸಕಲಾಕಲರೂಪತ್ವಾದ್ಬ್ರಹ್ಮಶಬ್ದಾಭಿದಃ ಪರಃ ||೧೨||

೧೨ ನಿಷ್ಕಲವಾದ್ದರಿಂದ ನಿರಾಕಾರವಾದ್ದರಿಂದ ಲಿಂಗ ಸ್ವರೂಪವೂ, ಅವನ ಪೂಜೆಗೆ ಯೋಗ್ಯವಾದದ್ದಾಗಿದೆ. ವಿಗ್ರಹವುಳ್ಳವನೂ ಆದ್ದರಿಂದ ಬ್ರಹ್ಮನೇ ಮೊದಲಾದ ಶಬ್ದಗಳಿಂದ ಶ್ರೇಷ್ಠವಾಗಿ ಅಭಿಧಾನವುಳ್ಳದ್ದಾಗಿದೆ ಶಿವನ ರೂಪವು.

ಅಪಿ ಲಿಂಗೇ ಚ ಬೇರೇ ಚ ನಿತ್ಯಮಭ್ಯರ್ಚ್ಯತೇ ಜನೈಃ ।
ಅಬ್ರಹ್ಮತ್ವಾತ್ತದನ್ಯೇಷಾಂ ನಿಷ್ಕಲತ್ವಂ ನ ಹಿ ಕ್ವಚಿತ್ ॥೧೩॥

೧೩ ಆದ್ದರಿಂದಲೇ ಲಿಂಗದಲ್ಲಿಯೂ, ವಿಗ್ರಹದಲ್ಲಿಯೂ ಸಹ ಈಶ್ವರನು ಜನಗಳಿಂದ ಪೂಜಿಸಲ್ಪಡುತ್ತಾನೆ. ಬೇರೆ ದೇವತೆಗಳು ನಿರಾಕಾರರಲ್ಲದ್ದರಿಂದಲೇ ಬ್ರಹ್ಮರೂಪರಲ್ಲವು. ಅದ್ದರಿಂದ ಶಿವನನ್ನು ಬಿಟ್ಟು ಬೇರೆ ದೇವತೆಗಳು ವಿಗ್ರಹದಲ್ಲೇ ಪೂಜಿಸಲ್ಪಡುವರು.

ತಸ್ಮಾತ್ತೇ ನಿಷ್ಕಲೇ ಲಿಂಗೇ ನಾರಾಧ್ಯಂತೇ ಸುರೇಶ್ವರಾಃ ।
ಅಬ್ರಹ್ಮತ್ವಾಚ್ಚ ಜೀವತ್ವಾತ್ತಥಾನ್ಯೇ ದೇವತಾಗಣಾಃ ॥೧೪॥

೧೪ ಬೇರೆ ದೇವತೆಗಳು ಬ್ರಹ್ಮತ್ವವಿಲ್ಲದ್ದರಿಂದ ಹಾಗೂ ಜೀವರುಗಳಾದ್ದರಿಂದ ನಿಷ್ಕಲವಾದ ಲಿಂಗದಲ್ಲಿ ದೇವತೆಗಳು ಪೂಜಿಸಲ್ಪಡುವುದಿಲ್ಲ.

ತೂಷ್ಣೀಂ ಸಕಲಮಾತ್ರತ್ವಾದಭ್ಯರ್ಚ್ಯಂತೇ ಬೇರಮಾತ್ರಕೇ ।
ಜೀವತ್ವಂ ಶಂಕರಾನ್ಯೇಷಾಂ ಬ್ರಹ್ಮತ್ವಂ ಶಂಕರಸ್ಯ ಚ ॥೧೫॥

೧೫ ವಿಗ್ರಹ ರೂಪದಿಂದಲೇ ಇನ್ನುಳಿದ ದೇವತೆಗಳು ಪೂಜಿಸಲ್ಪಡುತ್ತಾರೆ. ಆದ್ದರಿಂದ ಅವರುಗಳು ಜೀವರುಗಳು. ಶಂಕರನು ಮಾತ್ರ ಬ್ರಹ್ಮಸ್ವರೂಪನು ಇದೇ ನಿರಾಕಾರ ಸ್ವರೂಪವನ್ನೇ ವೇದಗಳೂ ಸಹ ಓಂಕಾರ ರೂಪವಾಗಿ ಹೊಗಳಿವೆ. ಅದೇ ಬ್ರಹ್ಮವೆಂದು ಸಾರಿವೆ.

ವೇದಾಂತಸಾರಸಂಸಿದ್ಧಂ ಪ್ರಣವಾರ್ಥೇ ಪ್ರಕಾಶನಾತ್ ।
ಏವಮೇವ ಪುರಾ ಪೃಷ್ಟೋ ಮಂದರೇ ನಂದಿಕೇಶ್ವರಃ ॥೧೬॥

೧೬ ವೇದಾಂತಸಾರ ಸರ್ವಸ್ವವೂ ಪ್ರಣವಾರ್ಥದಲ್ಲಿ ಪ್ರಕಾಶಗೊಂಡಿವೆ. ಇದೇ ವಿಚಾರವನ್ನೇ ಹಿಂದೆ ನಂದಿಕೇಶ್ವರನು ಮಂದರ ಪರ್ವತದಲ್ಲಿ ಸನತ್ಕುಮಾರನಿಂದ ಪ್ರಶ್ನಿಸಲ್ಪಟ್ಟನು.

**ಸನತ್ಕುಮಾರಮುನಿನಾ ಬ್ರಹ್ಮಪುತ್ರೇಣ ಧೀಮತಾ ।**
**॥ಸನತ್ಕುಮಾರ ಉವಾಚ॥**
**ಶಿವಾನ್ಯದೇವವಶ್ಯಾನಾಂ ಸರ್ವೇಷಾಮಪಿ ಸರ್ವತಃ ॥೧೭॥**

೧೭ ಬ್ರಹ್ಮಪುತ್ರನೂ, ಬುದ್ಧಿಶಾಲಿಯೂ ಆದ ಸನತ್ಕುಮಾರನು ನಂದಿಕೇಶ್ವರನನ್ನು ಈ ರೀತಿ ಕೇಳಿದನು. ಶಿವನಲ್ಲದೇ ಬೇರೆ ದೇವತೆಗಳಿಗೆ ಎಲ್ಲೆಡೆಯಲ್ಲಿಯೂ.

**ಬೇರಮಾತ್ರಂ ಚ ಪೂಜಾರ್ಥಂ ಶ್ರುತಂ ದೃಷ್ಟಂ ಚ ಭೂರಿಶಃ ।**
**ಶಿವಮಾತ್ರಸ್ಯ ಪೂಜಾಯಾಂ ಲಿಂಗಂ ಬೇರಂ ಚ ದೃಶ್ಯತೇ ॥೧೮॥**

೧೮ ವಿಗ್ರಹದಲ್ಲಿ ಮಾತ್ರ ಪೂಜೆಯನ್ನು ಕೇಳಿದ್ದೇವೆ. ಹಾಗೂ ನೋಡಿದ್ದೇವೆ. ಅನೇಕ ಕಡೆ ಕಂಡಿದ್ದೇವೆ. ಶಿವನಿಗೆ ಮಾತ್ರ ಲಿಂಗದಲ್ಲಿಯೂ, ವಿಗ್ರಹದಲ್ಲಿಯೂ ಪೂಜೆಯು ಕಂಡು ಬರುತ್ತದೆ.

**॥ನಂದಿಕೇಶ್ವರ ಉವಾಚ॥**
**ಅನುತ್ತರಮಿಮಂ ಪ್ರಶ್ನಂ ರಹಸ್ಯಂ ಬ್ರಹ್ಮಲಕ್ಷಣಂ ॥೧೯॥**

೧೯ ಆದ್ದರಿಂದ ಇದರ ಮಂಗಳಕರವಾದ ತತ್ವವೇನೆಂದು ನನಗೆ ತಿಳಿಸು. ಆಗ ನಂದಿಕೇಶ್ವರನು ಹೇಳುತ್ತಾನೆ. ಈಗ ಈ ಪ್ರಶ್ನೆಗೆ ಉತ್ತರವಿಲ್ಲ. ಇದು ಅತ್ಯಂತ ರಹಸ್ಯವಾದುದು. ಹಾಗೂ ಬ್ರಹ್ಮ ಲಕ್ಷಣವುಳ್ಳದ್ದೂ ಆಗಿದೆ.

**ಕಥಯಾಮಿ ಶಿವೇನೋಕ್ತಂ ಭಕ್ತಿಯುಕ್ತಸ್ಯ ತೇಽನಘ ।**
**ಶಿವಸ್ಯ ಬ್ರಹ್ಮರೂಪತ್ವಾನ್ನಿಷ್ಕಲತ್ವಾಚ್ಚ ನಿಷ್ಕಲಂ ॥20॥**

೨೦ ಆದರೂ ಶ್ರದ್ಧಾ, ಭಕ್ತಿಯಿಂದ ಕೂಡಿದ ಭಕ್ತನಾದ ನಿನಗಾಗಿ ಹಿಂದೆ ಶಿವನಿಂದ ಹೇಳಿದ ವಿಚಾರವನ್ನು ಹೇಳುತ್ತೇನೆ. ಶಿವನು ಬ್ರಹ್ಮ ರೂಪವಾದ್ದರಿಂದ, ನಿಷ್ಕಲತ್ವವಾದ್ದರಿಂದ ನಿರಾಕಾರಸ್ವರೂಪವಾಗಿರುವವನಾಗಿದ್ದಾನೆ.

**ಲಿಂಗಂ ತಸ್ಯೈವ ಪೂಜಾಯಾಂ ಸರ್ವವೇದೇಷು ಸಮ್ಮತಂ ।**
**ತಸ್ಯೈವ ಸಕಲತ್ವಾಚ್ಚ ತಥಾ ಸಕಲನಿಷ್ಕಲಂ ॥೨೧॥**

೨೧ ಈ ರೀತಿಯಾದ ಲಿಂಗದಲ್ಲಿ ಪೂಜೆಯು ಎಲ್ಲಾ ವೇದಗಳಲ್ಲಿಯೂ ಸಮ್ಮತವಾಗಿದೆ. ಆದ್ದರಿಂದ ಅವನಿಗೇ ವಿಗ್ರಹರೂಪವೂ ಇರುವಿಕೆಯಿಂದ ನಿರಾಕಾರ,

ಸಾಕಾರವು ಅವನಿಗೆ ಸಿದ್ಧವು. ಎರಡರಲ್ಲಿಯೂ ಈಶ್ವರನನ್ನು ಪೂಜಿಸಬಹುದು.

ಸಕಲಂ ಚ ತಥಾ ಬೇರಂ ಪೂಜಾಯಾಂ ಲೋಕಸಮ್ಮತಂ ।
ಶಿವಾನ್ಯೇಷಾಂ ಚ ಜೀವತ್ವಾತ್ಸಕಲತ್ವಾಚ್ಚ ಸರ್ವತಃ ॥೨೨॥

೨೨ ಆದ್ದರಿಂದ ಲೋಕದಲ್ಲಿ ನಿಷ್ಕಲ ಮತ್ತು ಸಕಲ ರೂಪದಲ್ಲಿ ಶಿವನ ಪೂಜೆಯು ಲೋಕದಲ್ಲಿ ರೂಢಿಯಲ್ಲಿದೆ. ಶಿವನಲ್ಲದೇ ಬೇರೆ ದೇವತೆಗಳು ಜೀವತ್ವವುಳ್ಳವರಾದ್ದರಿಂದ ಅವರಿಗೆಲ್ಲಾ ವಿಗ್ರಹಾರಾಧನೆಯೇ ಮಾಡಬೇಕೆಂದು ಹೇಳಿದೆ.

ಬೇರಮಾತ್ರಂ ಚ ಪೂಜಾಯಾಂ ಸಮ್ಮತಂ ವೇದನಿರ್ಣಯೇ ।
ಸ್ವಾವಿರ್ಭಾವೇ ಚ ದೇವಾನಾಂ ಸಕಲಂ ರೂಪಮೇವ ಹಿ ॥೨೩॥

೨೩ ಇವರುಗಳಿಗೆ ವಿಗ್ರಹದಲ್ಲಿಯೇ ಪೂಜೆ ಎಂದು ವೇದದಲ್ಲಿ ಸಮ್ಮತವಾಗಿದೆ. ಆದ್ದರಿಂದಲೇ ದೇವತೆಗಳು ವಿಗ್ರಹರೂಪದಲ್ಲಿಯೇ ಪ್ರತ್ಯಕ್ಷರಾಗುವರು.

ಶಿವಸ್ಯ ಲಿಂಗಂ ಬೇರಂ ಚ ದರ್ಶನೇ ತೃಶ್ಯತೇ ಖಲು ।
॥ಸನತ್ಕುಮಾರ ಉವಾಚ॥
ಉಕ್ತಂ ತ್ವಯಾ ಮಹಾಭಾಗ ಲಿಂಗಬೇರಪ್ರಚಾರಣಂ ।೨೪॥

೨೪ ಶಿವನಿಗೆ ಮಾತ್ರ ಸಾಕಾರ ಮತ್ತು ನಿರಾಕಾರಗಳೆರಡೂ ಉಂಟು ಹಾಗೆ ಅವನು ಗೋಚರನಾಗುವನು. ಸನತ್ಕುಮಾರನು ಹೇಳುತ್ತಾನೆ. ಎಲೈ ಮಹಾಭಾಗನೇ ನಿನ್ನಿಂದ ಲಿಂಗ ಮತ್ತು ವಿಗ್ರಹಗಳ ವಿಚಾರಗಳು ಹೇಳಲ್ಪಟ್ಟವು.

ಶಿವಸ್ಯ ಚ ತದನ್ಯೇಷಾಂ ವಿಭಜ್ಯ ಪರಮಾರ್ಥತಃ ।
ತಸ್ಮಾತ್ತದೇವ ಪರಮಂ ಲಿಂಗಬೇರಾದಿಸಂಭವಂ ॥೨೫॥

೨೫ ಆದ್ದರಿಂದ ಶಿವನ ಹಾಗೂ ಬೇರೆಯಾದ ವಿಗ್ರಹದ ವಿಚಾರಗಳನ್ನು ಬೇರೆಯಾಗಿ ಅವುಗಳ ಉತ್ಪತ್ತಿಯನ್ನೂ,

ಶ್ರೋತುಮಿಚ್ಛಾಮಿ ಯೋಗೀಂದ್ರ ಲಿಂಗಾವಿರ್ಭಾವಲಕ್ಷಣಂ ।
॥ನಂದಿಕೇಶ್ವರ ಉವಾಚ॥

**ಶೃಣು ವತ್ಸ ಭವತ್ಪ್ರೀತ್ಯಾ ವಕ್ಷ್ಯಾಮಿ ಪರಮಾರ್ಥತಃ ||೨೬||**

೨೬ ಎಲೈ ಯೋಗಿವರ್ಯನೇ, ಲಿಂಗದ ಅವಿರ್ಭಾವ ಲಕ್ಷಣವನ್ನೂ ನಾವು ಕೇಳಲಿಚ್ಛಿಸುತ್ತೇವೆ. ಆಗ ನಂದಿಕೇಶ್ವರನು ಹೇಳುತ್ತಾನೆ. ಎಲೈ ವತ್ಸ ನಿನ್ನಲ್ಲಿ ಪ್ರೀತಿಯಿಂದ ನಿಜವಾದ ವಿಚಾರವನ್ನು ಹೇಳುವೆನು ಕೇಳು.

**ಪುರಾ ಕಲ್ಪೇ ಮಹಾಕಾಲೇ ಪ್ರಸನ್ನೇ ಲೋಕವಿಶ್ರುತೇ |**
**ಅಯುಧ್ಯತಾಂ ಮಹಾತ್ಮಾನೌ ಬ್ರಹ್ಮವಿಷ್ಣೂ ಪರಸ್ಪರಂ ||@&||**

೨೭ ಹಿಂದಿನ ಕಲ್ಪದಲ್ಲಿ ಮಹಾಕಾಲನು ಲೋಕದಲ್ಲಿ ಅವಿರ್ಭವಿಸಿದ ಕಾಲದಲ್ಲಿ ಮಹಾತ್ಮರಾದ ಬ್ರಹ್ಮ, ವಿಷ್ಣುಗಳಿಬ್ಬರೂ ಪರಸ್ಪರ ತಾವೇ ಹೆಚ್ಚೆಂದು ಯುದ್ಧಮಾಡುತ್ತಿದ್ದರು.

**ತಯೋರ್ಮಾನಂ ನಿರಾಕರ್ತುಂ ತನ್ಮಧ್ಯೇ ಪರಮೇಶ್ವರಃ |**
**ನಿಷ್ಕಲಸ್ತಂಭರೂಪೇಣ ಸ್ವರೂಪಂ ಸಮದರ್ಶಯತ್ ||೨೮||**

೨೮ ಅವರುಗಳ ಗರ್ವವನ್ನು ಹೋಗಲಾಡಿಸಲು ಅವರ ಮಧ್ಯೆ ಪರಮೇಶ್ವರನು ನಿರಾಕಾರವಾದ ಕಂಬದ ಸ್ವರೂಪದಿಂದ ತನ್ನ ರೂಪವನ್ನು ತೋರಿಸಿದನು.

**ತತಃ ಸ್ವಲಿಂಗಚಿಹ್ನತ್ವಾತ್ ಸ್ತಂಭತೋ ನಿಷ್ಕಲಂ ಶಿವಃ |**
**ಸ್ವಲಿಂಗಂ ದರ್ಶಯಾಮಾಸ ಜಗತಾಂ ಹಿತಕಾಮ್ಯಯಾ ||೨೯||**

೨೯ ಆ ಬಳಿಕ ತನ್ನ ಸ್ವರೂಪವನ್ನು ಗುರುತಿಸುವಂತಹ ಕಂಬದಿಂದ ಶಿವನು ನಿರಾಕಾರವಾದ ಲಿಂಗರೂಪವನ್ನು ಜಗತ್ತಿನ ಹಿತ ದೃಷ್ಟಿಯಿಂದ ತೋರಿಸಿದನು.

**ತದಾಪ್ರಭೃತಿ ಲೋಕೇಷು ನಿಷ್ಕಲಂ ಲಿಂಗಮೈಶ್ವರಂ |**
**ಸಕಲಂ ಚ ತಥಾ ಬೇರಂ ಶಿವಸ್ಯೈವ ಪ್ರಕಲ್ಪಿತಂ ||೩೦||**

೩೦ ಅದು ಮೊದಲುಗೊಂಡು ಲೋಕದಲ್ಲಿ ನಿರಾಕಾರವಾದ ಶಿವನ ಲಿಂಗ ಸ್ವರೂಪವೂ ಸಕಲ ರೂಪವಾದ ಶಿವನ ವಿಗ್ರಹವೂ ವಿಶೇಷವಾಗಿ ಪೂಜಿಸಲ್ಪಟ್ಟಿತು.

**ಶಿವಾನ್ಯೇಷಾಂ ತು ದೇವಾನಾಂ ವೇರಮಾತ್ರಂ ಪ್ರಕಲ್ಪಿತಂ |**
**ತತ್ತದ್ವೇರಂ ತು ದೇವಾನಾಂ ತತ್ತದ್ಭೋಗಪ್ರದಂ ಶುಭಂ |**
**ಶಿವಸ್ಯ ಲಿಂಗವೇರತ್ವಂ ಭೋಗಮೋಕ್ಷಪ್ರದಂ ಶುಭಂ ||೩೧||**

೩೧ ಶಿವನನ್ನು ಬಿಟ್ಟು ಬೇರೆ ದೇವತೆಗಳಿಗೆ ವಿಗ್ರಹ ಮಾತ್ರ ಪ್ರಸಿದ್ಧವಾಯಿತು. ಶಿವನನ್ನು ಬಿಟ್ಟು ಬೇರೆ ದೇವತೆಗಳ ವಿಗ್ರಹಾರಾಧನೆಯು ಭಕ್ತರಿಗೆ ಐಹಿಕ ಮತ್ತು ಸ್ವರ್ಗದ ಭೋಗಾದಿಗಳನ್ನು, ಆಯಾ ವಿಗ್ರಹಾರಾಧನೆಯು ಆಯಾ ದೇವತೆಯ ಭೋಗವನ್ನು ನೀಡುವುದಾಗಿ ಶುಭಕರವಾಗಿರುವುದು.

ಶಿವನ ಲಿಂಗ ಮತ್ತು ವಿಗ್ರಹಾರಾಧನೆಯು ಭೋಗವನ್ನೂ, ಮೋಕ್ಷವನ್ನೂ ಕೊಡುವುದಾಗಿ ಶುಭವಾಗಿರುವುದು.

**ಇತಿ ಶಿವಮಹಾಪುರಾಣೇ ವಿದ್ಯೇಶ್ವರ ಸಂಹಿತಾಯಾಂ ಪಂಚಮೋಽಧ್ಯಾಯಃ**
**ಇಲ್ಲಿಗೆ ಶಿವಮಹಾಪುರಾಣದಲ್ಲಿ ವಿದ್ಯೇಶ್ವರ ಸಂಹಿತೆಯಲ್ಲಿ**
**ಐದನೆಯ ಅಧ್ಯಾಯವು ಮುಗಿದುದು.**

||ಶ್ರೀಃ||

||ಓಂ ನಮಃ ಶಿವಾಯ||

ಅಥ ಶ್ರೀ ಶಿವಮಹಾಪುರಾಣೇ

ವಿದ್ಯೇಶ್ವರಸಂಹಿತಾಯಾಂ

# ಷಷ್ಠೋऽಧ್ಯಾಯಃ

## ಆರನೆಯ ಅಧ್ಯಾಯವು

||ನಂದಿಕೇಶ್ವರ ಉವಾಚ||

ಪುರಾ ಕದಾಚಿದ್ಯೋಗೀಂದ್ರ ವಿಷ್ಣುರ್ವಿಷಧರಾಸನಃ |

ಸುಷ್ವಾಪ ಪರಯಾ ಭೂತ್ಯಾ ಸ್ವಾನುಗೈರಪಿ ಸಂವೃತಃ ||೧||

ನಂದಿಕೇಶ್ವರನು ಹೇಳುತ್ತಾನೆ.

ಬಹಳ ಹಿಂದೆ ಎಲೈ ಯೋಗೀಂದ್ರನೇ ಸರ್ಪಶಯನನಾದ ವಿಷ್ಣುವು ತನ್ನ ಪರಿವಾರಗಳಿಂದೊಡಗೂಡಿ ಶೇಷ ಶಯನದಲ್ಲಿ ಮಲಗಿದ್ದನು.

ಯದೃಚ್ಛಯಾಗತಸ್ತತ್ರ ಬ್ರಹ್ಮಾ ಬ್ರಹ್ಮವಿದಾಂ ವರಃ |

ಅಪೃಚ್ಛತ್ಪುಂಡರೀಕಾಕ್ಷಂ ಶಯಾನಂ ಸರ್ವಸುಂದರಂ ||೨||

೨ ಅಲ್ಲಿಗೆ ಅಕಸ್ಮಾತ್ತಾಗಿ ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠವಾದ ಬ್ರಹ್ಮನು ಬಂದು, ಸರ್ವಾಂಗ ಸುಂದರನಾದ, ಕಮಲದಂತೆ ಅಂದವಾದ ಕಣ್ಣುಳ್ಳ, ಮಲಗಿರುವ ವಿಷ್ಣುವನ್ನು ಹೀಗೆ ಪ್ರಶ್ನಿಸಿದನು.

ಕಸ್ತ್ವಂ ಪುರುಷವಚ್ಛೇಷೇ ದೃಷ್ಟ್ವಾ ಮಾಮಪಿ ದೃಪ್ತವತ್ |

ಉತ್ತಿಷ್ಠ, ವತ್ಸ ಮಾಂ ಪಶ್ಯ ತವ ನಾಥಮಿಹಾಗತಂ ||೩||

೩ ಎಲೈ ಪುರುಷನೇ ನೀನಾರು ? ನನ್ನನ್ನು ನೋಡಿದರೂ ಕೂಡ ದರ್ಪದಿಂದ ಮಲಗಿರುವೆ ? ಎದ್ದೇಳು, ನಿನ್ನ ಒಡೆಯನಾಗಿ ಬಂದಿರುವ ನನ್ನನ್ನು ಎಲೈ ವತ್ಸನೇ ನೋಡು.

ಅಗತಂ ಗುರುಮಾರಾಧ್ಯಂ ದೃಷ್ಟ್ವಾ ಯೋ ದೃಪ್ತವಚ್ಚರೇತ್ ।
ದ್ರೋಹಿಣಸ್ತಸ್ಯ ಮೂಢಸ್ಯ ಪ್ರಾಯಶ್ಚಿತ್ತಂ ವಿಧೀಯತೇ ॥೪॥

೪ ಆರಾಧಿಸಲ್ಪಡಬೇಕಾದ ಗುರುವು ಬಳಿಗೆ ಬಂದಿದ್ದರೂ ನೋಡಿ ಯಾವನು ದರ್ಪದಿಂದ ಗರ್ವಿಷ್ಠ ನಂತೆ ನಡೆದುಕೊಳ್ಳುವನೋ, ಅಂತಹವನು ಗುರು ದ್ರೋಹಿಯೂ, ಮೂಢನೂ ಆಗಿರುವನು, ಅಂತಹವನಿಗೆ ಪ್ರಾಯಶ್ಚಿತ್ತವನ್ನೂ ವಿಧಿಸಿದ್ದಾರೆ.

ಇತಿ ಶ್ರುತ್ವಾ ವಚಃ ಕ್ರುದ್ಧೋ ಬಹಿಃ ಶಾಂತವದಾಚರನ್ ।
ಸ್ವಸ್ತಿ ತೇ ಸ್ವಾಗತಂ ವತ್ಸ ತಿಷ್ಠ ಪೀಠಮಿತೋ ವಿಶ ॥೫॥

೫ ಈ ರೀತಿಯಾದ ಮಾತುಗಳನ್ನು ಕೇಳಿ ಕೋಪಗೊಂಡರೂ ಹರಿಯು ಕೋಪವನ್ನು ತೋರಿಸದೇ ಹೊರಗೆ ಶಾಂತತೆಯನ್ನು ತೋರಿಸುತ್ತಾ ಹೀಗೆ ಹೇಳಿದರು. ಎಲೈ ವತ್ಸನೇ ನಿನಗೆ ಮಂಗಳವುಂಟಾಗಲಿ ನಿನಗೆ ಸ್ವಾಗತವು. ಈ ಪೀಠದಲ್ಲಿ ಕುಳಿತುಕೋ.

ಕಿಮು ತೇ ವ್ಯಗ್ರವದ್ವಕ್ತ್ರಂ ವಿಭಾತಿ ವಿಷಮೇಕ್ಷಣಂ ।
ಕಿಮುತೇ ವ್ಯಗ್ರವದ್ವಕ್ತ್ರಂ ವಿಭಾತಿ ವಿಷಮೇಕ್ಷಣಂ ।
॥ಬ್ರಹ್ಮೋವಾಚ॥
ವತ್ಸ ವಿಷ್ಣೋ ಮಹಾಮಾನಮಾಗತಂ ಕಾಲವೇಗತಃ ॥೬॥

೬ ಅಲ್ಲದೇ ನಿನ್ನ ಮುಖವು ಏತಕ್ಕೋಸ್ಕರ ಚಿಂತಾಯುಕ್ತವಾಗಿದೆ. ಹಾಗೂ ಚಂಚಲವಾದ ಕಣ್ಣುಗಳಿಂದ ಕೂಡಿದ್ದಾಗಿದೆ, ಇದಕ್ಕೆ ಕಾರಣವೇನು ? ಎಂದನು.

ಪಿತಾಮಹಶ್ಚ ಜಗತಃ ಪಾತಾ ಚ ತವ ವತ್ಸಕ ।
॥ವಿಷ್ಣುರುವಾಚ॥
ಮತ್ಸ್ಥಂ ಜಗದಿದಂ ವತ್ಸ ಮನುವೇ ತ್ವಂ ಹಿ ಚೋರವತ್ ॥೭॥

೭ ಬ್ರಹ್ಮನು ಹೇಳುತ್ತಾನೆ. ವತ್ಸನಾದ ವಿಷ್ಣುವೇ, ನಿನಗೆ ಕಾಲ ಮಹಿಮೆಯಿಂದ ಅತ್ಯಂತವಾದ ಗರ್ವವು ಬಂದಿರುವುದು. ನಾನು ಈ ಜಗತ್ತಿಗೆಲ್ಲಾ ತಾತನೂ, ಜಗತ್ತನ್ನೂ ನಿನ್ನನ್ನೂ ನಾನು ರಕ್ಷಿಸುವವನು ಎಂಬುದನ್ನೆಲ್ಲಾ ಮರೆತಿರುವೆಯಲ್ಲಾ, ವಿಷ್ಣುವು ಹೇಳಿದನು. ನನ್ನಲ್ಲಿಯೇ ಈ ಜಗತ್ತು ಇರುವುದು ನೀನು ಕಳ್ಳನಂತೆ ಸುಳ್ಳು ಮಾತುಗಳನ್ನಾಡುತ್ತಿರುವೆಯಲ್ಲಾ.

ಮನ್ನಾಭಿಕಮಲಾಜ್ಜಾತಃ ಪುತ್ರಸ್ತ್ವಂ ಭಾಷಸೇ ವೃಥಾ ।
॥ನಂದಿಕೇಶ್ವರ ಉವಾಚ॥
ಏವಂ ಹಿ ವದತೋಸ್ತತ್ರ ಮುಗ್ಧಯೋರಜಯೋಸ್ತದಾ ॥೮॥

೮ ನನ್ನ ನಾಭಿಕಮಲದಲ್ಲಿ ಹುಟ್ಟಿದವನೂ, ನನಗೆ ಮಗನೂ ಆಗಿರುವ ನೀನು ವ್ಯರ್ಥವಾಗಿ ಮಾತನಾಡುವೆಯಲ್ಲಾ, ನಂದಿಕೇಶ್ವರನು ಹೇಳಿದನು. ಈ ರೀತಿಯಾಗಿ ಹೇಳುತ್ತಾ ಅಲ್ಲಿ ವಿಷ್ಣುವೂ, ಬ್ರಹ್ಮನೂ ವಾದಿಸುತ್ತಿದ್ದರು.

ಅಹಮೇವ ವರೋ ನ ತ್ವಮಹಂ ಪ್ರಭುರಹಂ ಪ್ರಭುಃ ।
ಪರಸ್ಪರಂ ಹಂತುಕಾಮೌ ಚಕ್ರತುಃ ಸಮರೋದ್ಯಮಂ ॥೯॥

೯ ನಾನೇ ಶ್ರೇಷ್ಠನು ನಾನೇ ಪ್ರಭುವು ಇಲ್ಲಿ ನಾನೇ ಪ್ರಭುವು ನಾನೇ ಶ್ರೇಷ್ಠನು ಎಂದು ಜಗಳವಾಡುತ್ತಾ ಒಬ್ಬರನ್ನೊಬ್ಬರು ಕೊಲ್ಲಲುದ್ಯುಕ್ತರಾಗಿ ಯುದ್ಧ ಮಾಡತೊಡಗಿದರು.

ಯುಯುಧಾತೇಽಮರೌ ವೀರೌ ಹಂಸಪಕ್ಷೀಂದ್ರವಾಹನೌ ।
ವೈರಿಂಚ್ಯಾ ವೈಷ್ಣವಾಶ್ಚೈವಂಮಿಥೋ ಯುಯುಧಿರೇ ತದಾ ॥೧೦॥

೧೦ ಆ ಇಬ್ಬರು ವೀರರೂ ತಮ್ಮ ವಾಹನಗಳಾದ ಹಂಸ, ಗರುಡ ವಾಹನರಾಗಿ ಬ್ರಹ್ಮ, ವಿಷ್ಣುಗಳು ಯುದ್ಧ ಮಾಡತೊಡಗಿದರು. ಆಗ ವಿಷ್ಣುಗಣಗಳೂ, ಬ್ರಹ್ಮನ ಗಣಗಳೂ ಪರಸ್ಪರ ಯುದ್ಧಮಾಡತೊಡಗಿದರು.

ತಾವದ್ವಿಮಾನಗತಯಃ ಸರ್ವಾ ವೈ ದೇವಜಾತಯಃ ।
ದಿದೃಕ್ಷವಃ ಸಮಾಜಗ್ಮುಃ ಸಮರಂ ತಂ ಮಹಾದ್ಭುತಂ ॥೧೧॥

೧೧ ಆ ಕಾಲಕ್ಕೆ ಅಲ್ಲಿಗೆ ಬಂದ ದೇವತಾ ಸಮೂಹವೆಲ್ಲವೂ ವಿಮಾನಗಳಲ್ಲಿದ್ದು ಅತ್ಯಾಶ್ಚರ್ಯಕರವಾದ ಯುದ್ಧವನ್ನು ನೋಡುತ್ತಿದ್ದರು.

ಕ್ಷಿಪಂತಃ ಪುಷ್ಪವರ್ಷಾಣಿ ಪಶ್ಯಂತಃ ಸ್ವೈರಮಂಬರೆ ।
ಸುಪರ್ಣವಾಹನಸ್ತತ್ರ ಕ್ರುದ್ಧೋ ವೈ ಬ್ರಹ್ಮವಕ್ಷಸಿ ॥೧೨॥

೧೨ ಹಾಗೆ ಬಂದ ದೇವತೆಗಳು ಯುದ್ಧವನ್ನು ನೋಡುತ್ತಾ ಬ್ರಹ್ಮವಿಷ್ಣುಗಳ ಮೇಲೆ

ಹೂಮಳೆಗರೆಯುತ್ತಾ, ಆಕಾಶದಲ್ಲಿದ್ದು ನೋಡುತ್ತಾ ಇರಲು ಆ ಯುದ್ಧದಲ್ಲಿ ಗರುಡವಾಹನನಾದ ವಿಷ್ಣುವು ಕೋಪಗೊಂಡವನಾಗಿ ಬ್ರಹ್ಮನ ಎದೆಗೆ,

**ಮುಮೋಚ ಬಾಣಾನಸಹಾನಸ್ತ್ರಾಂಶ್ಚ ವಿವಿಧಾನ್ ಬಹೂನ್ ।**
**ಮುಮೋಚಾಽಥ ವಿಧಿಃ ಕ್ರುದ್ಧೋ ವಿಷ್ಣೋರುರಸಿ ದುಃಸಹಾನ್ ।।೧೩।।**

೧೩ ಸಹಿಸಲಸಾಧ್ಯವಾದ ಬಾಣಗಳನ್ನೂ ವಿವಿಧವಾದ ಅಸ್ತ್ರಗಳನ್ನೂ ಬಹಳವಾಗಿ ಬಿಡುತ್ತಿದ್ದನು. ಬಳಿಕ ಬ್ರಹ್ಮನೂ ಸಹ ಕೋಪಗೊಂಡು ವಿಷ್ಣುವಿನ ಎದೆಗೆ ದುಸ್ಸಹವಾದ,

**ಬಾಣಾನನಲಸಂಕಾಶಾನಸ್ತ್ರಾಂಶ್ಚ ಬಹುಶಸ್ತದಾ ।**
**ತದಾಶ್ಚರ್ಯಮಿತಿ ಸ್ಪಷ್ಟಂ ತಯೋಃ ಸಮರಗೋಚರಂ ।।೧೪।।**

೧೪ ಅಗ್ನಿಗೆ ಸದೃಶವಾದಂತಹ ಬಾಣಗಳನ್ನು ಬಿಟ್ಟನು. ಹಾಗೆಯೇ ಬಹಳವಾದ ಅಸ್ತ್ರಗಳನ್ನು ಬಿಟ್ಟನು. ಈ ರೀತಿಯಾಗಿದ್ದಂತಹ ಇವರ ಸಮರವು ಬಹಳ ಆಶ್ಚರ್ಯಕರವಾಗಿದ್ದಿತು.

**ಸಮೀಕ್ಷ್ಯ ದೈವತಗಣಾಃ ಶಶಂಸುರ್ಭೃಶಮಾಕುಲಾಃ ।**
**ತತೋ ವಿಷ್ಣುಃ ಸುಸಂಕ್ರುದ್ಧಃ ಶ್ವಸನ್ ವ್ಯಸನಕರ್ಶಿತಃ ।।೧೫।।**

೧೫ ಹಾಗೆ ನೋಡುತ್ತಿದ್ದ ದೇವತಾಗಣಗಳು ಆಶ್ಚರ್ಯ, ಆಶ್ಚರ್ಯವೆಂದು ಮುಂದೇನಾಗುವುದೋ ಎಂದು ವ್ಯಾಕುಲಗೊಂಡರು. ನಂತರ ವಿಷ್ಣುವು ಬಹಳವಾಗಿ ಕೋಪಗೊಂಡು, ಬ್ರಹ್ಮನ ಬಾಣಗಳ ಹೊಡೆತದಿಂದ ವ್ಯಥೆಗೊಂಡು ನಿಟ್ಟುಸಿರುಗಳನ್ನು ಬಿಡುತ್ತಿದ್ದನು.

**ಮಾಹೇಶ್ವರಾಸ್ತ್ರಂ ಮತಿಮಾನ್ ಸಂದಧೇ ಬ್ರಹ್ಮಣೋಪರಿ ।**
**ತತೋ ಬ್ರಹ್ಮಾ ಭೃಶಂ ಕ್ರುದ್ಧಃ ಕಂಪಯನ್ ವಿಶ್ವಮೇವ ಹಿ ।।೧೬।।**

೧೬ ಹಾಗೆ ಕೋಪಗೊಂಡ ವಿಷ್ಣುವು ಬ್ರಹ್ಮನ ಮೇಲೆ ಮಾಹೇಶ್ವರಾಸ್ತ್ರವನ್ನು ಪ್ರಯೋಗಿಸಿದನು. ಅನಂತರದಲ್ಲಿ ಬ್ರಹ್ಮನೂ ಸಹ ತಕ್ಷಣವೇ ಪ್ರಪಂಚವೇ ಭಯದಿಂದ ಕಂಪಿಸುವಂತಹ,

**ಅಸ್ತ್ರಂ ಪಾಶುಪತಂ ಘೋರಂ ಸಂದಧೇ ವಿಷ್ಣುವಕ್ಷಸಿ ।**
**ತತಸ್ತುದುತ್ಥಿತಂ ವ್ಯೋಮ್ನಿ ತಪನಾಯುತಸನ್ನಿಭಂ ॥೧೭॥**

೧೭ ಘೋರವಾದ ಪಾಶುಪತಾಸ್ತ್ರವನ್ನು ವಿಷ್ಣುವಿನ ಎದೆಗೆ ಚೆನ್ನಾಗಿ ಪ್ರಯೋಗಿಸಿದನು. ಆ ಪಾಶುಪತಾಸ್ತ್ರವೂ ಹಾಗೇ ಮಾಹೇಶ್ವರಾಸ್ತ್ರನಾದರೋ ಹತ್ತು ಸಾವಿರ ಸೂರ್ಯರ ತೇಜಸ್ಸಿಗೆ ಸಮನಾಗಿ ಆಕಾಶದಲ್ಲೆದ್ದವು.

**ಸಹಸ್ರಮುಖಮತ್ಯುಗ್ರಂ ಚಂಡವಾತಭಯಂಕರಂ ।**
**ಅಸ್ತ್ರದ್ವಯಮಿದಂ ತತ್ರ ಬ್ರಹ್ಮವಿಷ್ಣೋರ್ಭಯಂಕರಂ ॥೧೮॥**

೧೮ ಸಹಸ್ರ ಮುಖಗಳುಳ್ಳನಾಗಿಯೂ ಪ್ರಚಂಡವಾದ ಗಾಳಿಯಿಂದ ಕೂಡಿರುವುದಾಗಿ ಅತ್ಯಂತ ಭಯವನ್ನುಂಟು ಮಾಡವುಗಳಾಗಿ ಆ ಎರಡು ಅಸ್ತ್ರಗಳೂ ಬ್ರಹ್ಮನಾರಾಯಣರಿಗೆ ಭಯಂಕರಗಳಾಗಿದ್ದವು.

**ಇತ್ಥಂ ಬಭೂವ ಸಮರಂ ಬ್ರಹ್ಮವಿಷ್ಣ್ವೋಃ ಪರಸ್ಪರಂ ।**
**ತತೋ ದೇವಗಣಾಃ ಸರ್ವೇ ವಿಷಣ್ಣಾ ಭೃತಮಾಕುಲಾಃ ॥೧೯॥**

೧೯ ಈ ರೀತಿಯಾಗಿ ಉಂಟಾಗುತ್ತಿದ್ದ ಬ್ರಹ್ಮ, ವಿಷ್ಣುಗಳ ಸಮರದಿಂದ ದೇವತೆಗಳಿಗೆ ಭ್ರಾಂತಿಯೂ, ದುಃಖವೂ, ಆಶ್ಚರ್ಯವೂ ಉಂಟಾಯಿತು.

**ಊಚುಃ ಪರಸ್ಪರಂ ತಾತ ರಾಜಕ್ಷೋಭೇ ಯಥಾ ದ್ವಿಜಾಃ ।**
**ಸೃಷ್ಟಿಃ ಸ್ಥಿತಿಶ್ಚ ಸಂಹಾರಸ್ತಿರೋಭಾವೋಽಷ್ಯನುಗ್ರಹಃ ॥೨೦॥**

೨೦ ಹಾಗೇ ಅವರುಗಳು, ಪ್ರಪಂಚದಲ್ಲಿ ಪರಸ್ಪರ ರಾಜರಿಗೆ ಯುದ್ಧ ಉಂಟಾದಾಗ ಹೇಗೆ ಪ್ರಜೆಗಳು ಮಾತನಾಡುವರೋ ಹಾಗೆ ಮಾತನಾಡುತ್ತಿದ್ದರು. ನಂತರ ಸೃಷ್ಟಿ, ಸ್ಥಿತಿ, ಸಂಹಾರ, ತಿರೋಭಾವ ಹಾಗೂ ಅನುಗ್ರಹಗಳು ಯಾವನಿಂದ ಆಗುವುದೋ ಅಂತಹ ಬ್ರಹ್ಮರೂಪಿಯಾದ ಪರಮೇಶ್ವರನಿಗೆ,

**ಯಸ್ಮಾತ್ಪ್ರವರ್ತತೇ ತಸ್ಮೈ ಬ್ರಹ್ಮಣೇ ಚ ತ್ರಿಶೂಲಿನೇ ।**
**ಅಶಕ್ಯಮನ್ಯೈರ್ಯವನುಗ್ರಹಂ ವಿನಾ**
**ತೃಣಕ್ಷಯೋಽಪ್ಯತ್ರ ಯದೃಚ್ಛಯಾ ಕ್ವಚಿತ್ ॥೨೧॥**

೨೧ ಹಾಗೂ ಯಾರ ಅನುಗ್ರಹದಿಂದ ಎಲ್ಲವೂ ಆಗುವುದೋ ಯಾರ ಅನುಗ್ರಹವಿಲ್ಲದೇ ಒಂದು ಹುಲ್ಲುಕಡ್ಡಿಯೂ ಅಲ್ಲಾಡುವುದಿಲ್ಲವೋ ಅಂತಹ ಶಿವನಿಗೆ ನಮಸ್ಕಾರವು.

**ಇತಿ ದೇವಾ ಭಯಂ ಕೃತ್ವಾ ವಿಚಿನ್ವಂತಃ ಶಿವಕ್ಷಯಂ ।**
**ಜಗ್ಮುಃ ಕೈಲಾಸಶಿಖರಂ ಯತ್ರಾಸ್ತೇ ಚಂದ್ರಶೇಖರಃ ।।೨೨।।**

೨೨ ಹೀಗೆ ದೇವತೆಗಳೆಲ್ಲರೂ ಭಯಗೊಂಡವರಾಗಿ, ಯೋಚಿಸುತ್ತಾ, ಎಲ್ಲಿ ಚಂದ್ರಶೇಖರನಾದ ಶಿವನಿರುವನೋ ಅಂತಹ ಕೈಲಾಸ ಶಿಖರಕ್ಕೆ ಹೋದರು.

**ದೃಷ್ಟ್ವೈವಮಮರಾ ಹೃಷ್ಟಾಃ ಪದಂ ತತ್ಪಾರಮೇಶ್ವರಂ ।**
**ಪ್ರಣೇಮುಃ ಪ್ರಣವಾಕಾರಂ ಪ್ರವಿಷ್ಟಾಸ್ತತ್ರ ಸದ್ಮನಿ ।।೨೩।।**

೨೩ ಹೀಗೆ ಹೊರಟಂತಹ ದೇವತೆಗಳು ಕೈಲಾಸವನ್ನು ಸೇರಿ ಅಲ್ಲಿ ಪರಮೇಶ್ವರನ ಸ್ಥಾನವನ್ನು ನೋಡಿ ಸಂತೋಷಗೊಂಡವರಾಗಿ ಓಂಕಾರಸ್ವರೂಪನಾದ ಈಶ್ವರನನ್ನು ನಮಸ್ಕರಿಸಿದರು.

**ತೇऽಪಿ ತತ್ರ ಸಭಾಮಧ್ಯೇ ಮಂಟಪೇ ಮಣಿವಿಷ್ಟರೇ ।**
**ವಿರಾಜಮಾನಮುಮಯಾ ದದೃಶುರ್ದೇವಪುಂಗವಂ ।।೨೪।।**

೨೪ ಆ ದೇವತೆಗಳೂ ಸಹ ಆ ಕೈಲಾಸ ಪರ್ವತದಲ್ಲಿ ಸಭೆಯ ಮಧ್ಯದಲ್ಲಿದ್ದ ಮಣಿಮಯವಾದ ಆಸನವುಳ್ಳ ಮಂಟಪದಲ್ಲಿ ಪಾರ್ವತಿಯಿಂದ ರಾರಾಜಿಸುತ್ತಿದ್ದ ದೇವ ಶ್ರೇಷ್ಠ ನಾದ ಈಶ್ವರನನ್ನು ನೋಡಿದರು.

**ಸವ್ಯೋತ್ತರೇತರಪದಂ ತದರ್ಪಿತಕರಾಂಬುಜಂ ।**
**ಸ್ವಗಣೈಃ ಸರ್ವತೋ ಜುಷ್ಟಂ ಸರ್ವಲಕ್ಷಣಲಕ್ಷಿತಂ ।।೨೫।।**

೨೫ ಆ ಈಶ್ವರನಾದರೋ ತನ್ನ ಬಲಗಾಲಿನ ಮೇಲೆ ಎಡಗಾಲನ್ನಿಟ್ಟುಕೊಂಡು ಅಲ್ಲಿ ಕೈಗಳನ್ನಿಟ್ಟು ಕುಳಿತಿದ್ದನು. ಹೀಗಿರುವ ಶಿವನನ್ನು ಅವನ ಪ್ರಮಥಗಣವೇ ಮೊದಲಾದದವರು, ಸರ್ವಲಕ್ಷಣಗಳಿಂದ ಕೂಡಿದ ಶಿವನನ್ನು ಸೇವಿಸುತ್ತಿದ್ದರು.

**ವೀಜ್ಯಮಾನಂ ವಿಶೇಷಜ್ಞೈಃ ಸ್ತ್ರೀಜನೈಸ್ತ್ರಿವ್ರಭಾವನೈಃ ।**
**ಶಸ್ಯಮಾನಂ ಸದಾ ವೇದೈರನುಗೃಹ್ಣಂತಮೀಶ್ವರಂ ।।೨೬।।**

೨೬ ವಿಶೇಷವಾದ ಜ್ಞಾನವುಳ್ಳಂತಹ ಸ್ತ್ರೀಯರು ಬಹಳವಾದ ಭಯಭಕ್ತಿಗಳಿಂದ ಈಶ್ವರನಿಗೆ ಬೀಸಣಿಗೆಯಿಂದ ಬೀಸುತ್ತಿದ್ದರು. ವೇದಗಳಿಂದ ಅನೇಕರು ಹೊಗಳುತ್ತಿದ್ದರು. ಹೀಗೆ ಇರುವ ಈಶ್ವರನು ಭಕ್ತರನ್ನು ಅನುಗ್ರಹಿಸುತ್ತಿದ್ದನು.

**ದೃಷ್ಟ್ವೈವಮೀಶಮಮರಾಃ ಸಂತೋಷಸಲಿಲೇಕ್ಷಣಾಃ ||**
**ದಂಡವದ್ದೂರತೋ ವತ್ಸ ನಮಶ್ಚಕ್ರುರ್ಮಹಾಗಣಾಃ ||೨೭||**

೨೭ ಈ ರೀತಿಯಾದ ವೈಭವದಿಂದ ಕೂಡಿದ ಪರಮೇಶ್ವರನನ್ನು ನೋಡಿ ಆ ದೇವತೆಗಳು ಆನಂದಬಾಷ್ಪಗಳಿಂದ ಕೂಡಿದ ಕಣ್ಣುಳ್ಳವನಾಗಿ ದೂರದಿಂದಲೇ ಸಾಷ್ಟಾಂಗ ನಮಸ್ಕಾರಗಳನ್ನು ಮಾಡಿದರು.

**ತಾನವೇಕ್ಷ್ಯ ಪತಿರ್ದೇವಾ ಸಮೀಪೇ ಚಾಹ್ವಯದ್ಗಣೈಃ |**
**ಅಥ ಸಂಹ್ಲಾಹಯನ್ ದೇವಾ ದೇವೋ ದೇವಶಿಖಾಮಣಿಃ |**
**ಅವೋಚದರ್ಥಗಂಭೀರಂ ವಚನಂ ಮಧುಮಂಗಲಂ ||೨೮||**

೨೮ ಹೀಗೆ ದೂರದಲ್ಲೇ ನಮಸ್ಕರಿಸಿದ ದೇವತಾಗಣಗಳನ್ನು ತನ್ನ ಗಣಗಳ ಮೂಲಕ ಪರಮೇಶ್ವರನು ತನ್ನ ಬಳಿಗೆ ಕರೆಯಿಸಿಕೊಂಡು, ಆ ದೇವತೆಗಳನ್ನು ಸಂತೋಷಗೊಳಿಸುವವನಾಗಿ ದೇವದೇವೋತ್ತಮನಾದ ಈಶ್ವರನು ಕೇಳಲು ಮಧುರವಾದ ಮಂಗಳಕರವಾದ ಅರ್ಥಗಾಂಭೀರ್ಯದಿಂದ ಕೂಡಿದ ಮಾತುಗಳನ್ನು ಹೀಗೆ ಆಡಿದನು.

**ಇತಿ ಶ್ರೀ ಶಿವಮಹಾಪುರಾಣೇ ವಿದ್ಯೇಶ್ವರ ಸಂಹಿತಾಯಾಂ ಷಷ್ಠೋಽಧ್ಯಾಯ.**
**ಇಲ್ಲಿಗೆ ಶ್ರೀ ಶಿವಪುರಾಣದಲ್ಲಿ ವಿದ್ಯೇಶ್ವರ**
**ಸಂಹಿತೆಯಲ್ಲಿ ಆರನೇ ಅಧ್ಯಾಯವು ಮುಗಿದುದು.**

||ಶ್ರೀಃ||

||ಓಂ ನಮಃ ಶಿವಾಯ||

ಅಥ ಶ್ರೀ ಶಿವಮಹಾಪುರಾಣೇ

ವಿದ್ಯೇಶ್ವರಸಂಹಿತಾಯಾಂ

# ಸಪ್ತಮೋಽಧ್ಯಾಯಃ

## ಏಳನೇ ಅಧ್ಯಾಯವು

||ಈಶ್ವರ ಉವಾಚ||

ವತ್ಸಕಾಃ ಸ್ವಸ್ತಿ ವಃ ಕಚ್ಚಿದ್ವರ್ತತೇ ಮಮ ಶಾಸನಾತ್ ।

ಜಗಚ್ಚ ದೇವತಾವಂಶಃ ಸ್ವಸ್ವಕರ್ಮಣಿ ಕಿಂ ನ ವಾ ||೧||

ಈಶ್ವರನು ಹೇಳಿದನು

೧ ಎಲೈ ಪುತ್ರರಾದ ದೇವತೆಗಳೇ ನಿಮಗೆ ಮಂಗಳವಾಗಲಿ. ನನ್ನ ನಿಯಮದಂತೆ ನೀವು ಹಾಗೂ ಜಗತ್ತೂ ಸಹ ಸುಖವಾಗಿರುವಿರಾ ? ದೇವತೆಗಳೆಲ್ಲರೂ ಅವರವರ ಕರ್ಮಗಳಲ್ಲಿ ಸರಿಯಾಗಿದ್ದಾರಷ್ಟೇ ?

ಪ್ರಾಗೇವ ವಿದಿತಂ ಯುದ್ಧಂ ಬ್ರಹ್ಮವಿಷ್ಣ್ವೋರ್ಮಯಾ ಸುರಾಃ ।

ಭವತಾಮಭಿತಾಪೇನ ಪೌನರುಕ್ತ್ಯೇನ ಭಾಷಿತಂ||೨||

೨ ಬ್ರಹ್ಮ-ವಿಷ್ಣುಗಳ ಯುದ್ಧದ ವಿಚಾರವು ನನಗೆ ಈ ಮೊದಲೇ ತಿಳಿದಿರುವುದು. ಈ ನಿಮ್ಮ ಆತಂಕದಿಂದ ಮತ್ತೊಮ್ಮೆ ತಿಳಿದಂತಾಯಿತು.

ಇತಿ ಸಸ್ಮಿತಯಾ ಮಾಧ್ವ್ಯಾ ಕುಮಾರಪರಿಭಾಷಯಾ ।

ಸಮತೋಷಯದಂಬಾಯಾಃ ಸ ಪತಿಸ್ತತ್ಸುರವ್ರಜಂ ||೩||

೩ ಹೀಗೆ ಪಾರ್ವತೀ ಪತಿಯಾದ ಪರಮೇಶ್ವರನು ಮುಗುಳ್ನಗೆಯಿಂದ ಕೂಡಿದ ಮಧುರವಾದ, ಚಿಕ್ಕ ಮಕ್ಕಳಿಗೆ ಹೇಳುವಂತಹ ಮಾತುಗಳಿಂದ ಆ ದೇವತೆಗಳ ಸಮೂಹವನ್ನು ಸಂತೋಷಗೊಳಿಸಿದನು.

ಅಥ ಯುದ್ಧಾಂಗಣಂ ಗಂತುಂ ಹರಿಧಾತ್ರೋರಧೀಶ್ವರಃ ।
ಅಜ್ಞಾಪಯದ್ಗಣೇಶಾನಾಂ ಶತಂ ತತ್ರೈವ ಸಂಸದಿ ॥೪॥

೪ ಅನಂತರ ಅವನ ನೂರು ಗಣೇಶ್ವರರನ್ನು ಬ್ರಹ್ಮ ವಿಷ್ಣುಗಳು ಯುದ್ಧ ಮಾಡುತ್ತಿದ್ದ ಸ್ಥಳಕ್ಕೆ ಹೊರಡಲು ಆಜ್ಞಾಪಿಸಿದನು.

ತತೋ ವಾದ್ಯಂ ಬಹುವಿಧಂ ಪ್ರಯಾಣಾಯ ಪರೇಶಿತುಃ ।
ಗಣೇಶ್ವರಾಶ್ಚ ಸನ್ನದ್ಧಾ ನಾನಾವಾಹನಭೂಷಣಾಃ ॥೫॥

೫ ಅನಂತರದಲ್ಲಿ ಆ ಗಣೇಶ್ವರರು ನಾನಾ ವಿಧವಾದ ಆಭರಣಗಳನ್ನು ಧರಿಸಿ ನಾನಾ ವಿಧವಾದ ವಾಹನಗಳಲ್ಲಿ ಕುಳಿತು ಸಿದ್ಧವಾಗಿ ಪರಮೇಶ್ವರನ ಪ್ರಯಾಣಕ್ಕೋಸ್ಕರ ಅನೇಕ ವಿಧವಾದ ಮಂಗಳ ವಾದ್ಯಗಳನ್ನು ಬಾರಿಸುತ್ತಿದ್ದರು.

ಪ್ರಣವಾಕಾರಮಾದ್ಯಂತಂ ಪಂಚಮಂಡಲಮಂಡಿತಂ ।
ಅರುರೋಹ ರಥಂ ಭದ್ರಮಂಬಿಕಾಪತಿರೀಶ್ವರಃ
ಸಸೂನುಗಣಮಿಂದ್ರಾದ್ಯಾಃ ಸರ್ವೇಽಪ್ಯನುಯಯುಃ ಸುರಾಃ ॥೬॥

೬ ಮೊದಲಿನಿಂದ ಕೊನೆಯವರೆಗೂ ಓಂಕಾರ ರೂಪವುಳ್ಳ ಹಾಗೂ ಐದು ಮಂಡಲಗಳಿಂದ ಅಲಂಕರಿಸಲ್ಪಟ್ಟ, ಮಂಗಳಕರವಾದ ರಥವನ್ನು ಪಾರ್ವತೀ ಪತಿಯಾದ ಈಶ್ವರನು ಏರಿದನು. ತನ್ನ ಮಕ್ಕಳು ಮತ್ತು ತನ್ನ ಗಣಗಳಿಂದ ಕೂಡಿದ ಆ ಶಿವನನ್ನು ಇಂದ್ರಾದಿಗಳೇ ಮೊದಲಾದ ಎಲ್ಲಾ ದೇವತೆಗಳೂ ಅನುಸರಿಸಿದರು.

ಚಿತ್ರಧ್ವಜವ್ಯಜನಚಾಮರಪುಷ್ಪವರ್ಷ-
ಸಂಗೀತನೃತ್ಯನಿವಹೈರಪಿ ವಾದ್ಯವರ್ಗೈಃ
ಸಂಮಾನಿತಃ ಪಶುಪತಿಃ ಪರಯಾ ಚ ದೇವ್ಯಾ
ಸಾಕಂ ತಯೋಃ ಸಮರಭೂಮಿಮಗಾತ್ಸಸೈನ್ಯಃ ॥೭॥

೭ ನಾನಾ ವರ್ಣವುಳ್ಳ ಧ್ವಜ, ಬೀಸಣಿಗೆ, ಚಾಮರ, ಹೂಮಳೆ, ಸಂಗೀತ, ನೃತ್ಯಗಳ ಸಮೂಹಗಳಿಂದೊಡಗೂಡಿ, ಅನೇಕ ವಿಧವಾದ ವಾದ್ಯಗಳ ಸಮೂಹದಿಂದ ಕೂಡಿ ಚೆನ್ನಾಗಿ ಗೌರವಿಸಲ್ಪಟ್ಟ 'ಪಶುಪತಿ'ಯಾದ ಶ್ರೇಷ್ಠಳಾದ ದೇವಿ ಪಾರ್ವತಿಯಿಂದ ಸೇರಿದ ಪರಮೇಶ್ವರನು ಸಸೈನ್ಯನಾಗಿ ಯುದ್ಧ ಭೂಮಿಗೆ ತೆರಳಿದನು.

ವಿ.ವಿ.:- ಇಲ್ಲಿ 'ಪಶುಪತಿ' ಎಂದು ಈಶ್ವರನಿಗೆ ಹೇಳಿದ್ದಾರೆ. ಪಶೂನಾಂ ಪತಿಃ ಪಶುಪತಿಃ ಎಂದು. ಎಂದರೆ ಪಶುಗಳಿಗೆ ಅರ್ಥಾತ್ ಜೀವರುಗಳಿಗೆ ಒಡೆಯ ಎಂದರ್ಥ. 'ಶೈವಾಗಮನದ ಸಿದ್ಧಾಂತದಲ್ಲಿ 'ಪಶು', 'ಪತಿ', 'ಪಾಶ'ಗಳೆಂದು ಮೂರು ಪದಾರ್ಥಗಳೆಂದು ಹೇಳಿದ್ದಾರೆ.

"ಶೈವಾಗಮೇಷು ಮುಖ್ಯಂ ಪಶುಪತಿ ಪಾಶರ"ಇತಿ ತ್ರಿತಯಮ್
ತತ್ರಪತಿಃ ಶಿವಃ ಪಶವಃ ಅಣವಃ ಅರ್ಥಪಂಚಕಂ ಪಾಶಾಃ" ಎಂದು

ಅಂದರೆ 'ಪಾಶವುಳ್ಳವರು ಪಶು'ಗಳು, ಅರ್ಥಾತ್ ಜೀವರು, ಸಂಸಾರಬಂಧನದಿಂದ ಕೂಡಿರುವರು, 'ಪಶು'ಗಳು. ಇವರನ್ನು ನಿಯಂತ್ರಿಸುವನೇ 'ಪಶುಪತಿ' ಇದಕ್ಕೆ 'ಶ್ರುತಿ'ಯೂ ಹೀಗೆ ಹೇಳಿದೆ. 'ಏಷಾಮೀಶೇ ಪಶುಪತಿಃ ಪಶೂನಾಂ' ಇತ್ಯಾದಿ.

ಸಮೀಕ್ಷ್ಯ ತು ತಯೋರ್ಯುದ್ಧಂ ನಿಗೂಢೋಽಭ್ರಂ ಸಮಾಸ್ಥಿತಃ ।
ಸಮಾಪ್ತವಾದ್ಯನಿರ್ಘೋಷಃ ಶಾಂತೋರುಗಣನಿಸ್ವನಃ ॥8॥

೮ ಆ ಯುದ್ಧ ಭೂಮಿಗೆ ಬಂದು ಈಶ್ವರನು ಬ್ರಹ್ಮ ವಿಷ್ಣುಗಳ ಯುದ್ಧವನ್ನು ನೋಡಲು ಗೋಪ್ಯವಾಗಿ ಆಕಾಶದಲ್ಲಿ ನಿಂತನು. ಹಾಗೇ ತನ್ನ ಗಣಗಳಿಗೆ ವಾದ್ಯ ಧ್ವನಿಯನ್ನು ನಿಲ್ಲಿಸಿಸಲು ತಿಳಿಸಿ ಶಾಂತವಾಗಿಸಿದನು.

ಅಥ ಬ್ರಹ್ಮಾಚ್ಯುತೌ ವೀರೌ ಹಂತುಕಾಮೌ ಪರಸ್ಪರಂ ।
ಮಾಹೇಶ್ವರೇಣ ಚಾಸ್ತ್ರೇಣ ತಥಾ ಪಾಶುಪತೇನ ಚ ॥೯॥

೯ ಆ ಕಾಲದಲ್ಲಿ ಬ್ರಹ್ಮ ವಿಷ್ಣುಗಳಿಬ್ಬರೂ ಒಬ್ಬರನ್ನೊಬ್ಬರು ಕೊಲ್ಲಬೇಕೆಂಬ ಇಚ್ಛೆಯಿಂದ ಆ ವೀರರು ಮಾಹೇಶ್ವರಾಸ್ತ್ರ ಪಾಶುಪತಾಸ್ತ್ರಗಳನ್ನು ಪ್ರಯೋಗಿಸಿದರು.

ಅಸ್ತ್ರಜ್ವಾಲೈರಥೋ ದಗ್ಧಂ ಬ್ರಹ್ಮವಿಷ್ಣ್ವೋರ್ಜಗತ್ತ್ರಯಂ ।
ಈಶೋಽಪಿ ತಂ ನಿರೀಕ್ಷ್ಯಾಥ ಹ್ಯಕಾಲಪ್ರಳಯಂ ಭೃಶಂ ॥೧೦॥

೧೦ ಈ ರೀತಿಯಾಗಿ ಪ್ರಯೋಗಿಸಿದ ಅಸ್ತ್ರಗಳಿಂದ (ಬ್ರಹ್ಮ ವಿಷ್ಣುಗಳ) ಮೂರು ಲೋಕಗಳೂ ದಹಿಸಲು ಪ್ರಾರಂಭಿಸಿದವು. ಈಶ್ವರನೂ ಸಹ ಹೀಗೆ ಅಕಾಲ ಪ್ರಳಯವನ್ನು ನೋಡಿ ತಕ್ಷಣದಲ್ಲಿಯೇ,

**ಮಹಾನಲಸ್ತಂಭವಿಭೀಷಣಾಕೃತಿ-**
**ರ್ಬಭೂವ ತನ್ಮಧ್ಯತಲೇ ಸ ನಿಷ್ಕಲಃ ||೧೧||**

೧೧ ಆ ಬ್ರಹ್ಮ ವಿಷ್ಣುಗಳ ಮಧ್ಯದಲ್ಲೇ, ಅತ್ಯಂತ ದೊಡ್ಡದಾದ ಬೆಂಕಿಯ ಕಂಬದಂತೆ ಭೀಕರಾಕೃತಿಯುಳ್ಳವನಾಗಿ ನಿರಾಕಾರ ರೂಪನಾಗಿ ಆವಿರ್ಭವಿಸಿದನು.

**ತೇ ಅಸ್ತ್ರೇ ಚಾಪಿ ಸಜ್ವಾಲೇ ಲೋಕಸಂಹರಣಕ್ಷಮೇ |**
**ನಿಪೇತತುಃ ಕ್ಷಣೇನೈವ ಹ್ಯಾವಿರ್ಭೂತೇ ಮಹಾನಲೇ ||೧೨||**

೧೨ ಆಗ ಜ್ವಾಲೆಗಳಿಂದ ಕೂಡಿದ ಆ ಮಾಹೇಶ್ವರ, ಪಾಶುಪತಾಸ್ತ್ರಗಳು ಲೋಕವನ್ನು ದಹಿಸುತ್ತಿದ್ದುದು, ಕ್ಷಣ ಮಾತ್ರದಲ್ಲಿ ಆವಿರ್ಭವಿಸಿದ ನಿರಾಕಾರ ಸ್ತಂಭದ ಮುಂದೆ ಶಾಂತವಾಗಿ ಬಿದ್ದು ಬಿಟ್ಟಿತು.

**ದೃಷ್ಟ್ವಾ ತತದದ್ಭುತಂ ಚಿತ್ರಮಸ್ತ್ರಶಾಂತಿಕರಂ ಶುಭಂ |**
**ಕಿಮೇತದದದ್ಭುತಾಕಾರಮಿತ್ಯೂಚುಶ್ಚ ಪರಸ್ಪರಂ ||೧೩||**

೧೩ ಈ ರೀತಿಯಾಗಿ ತಕ್ಷಣವೇ ಶಾಂತವಾದ ಅಸ್ತ್ರಗಳಳನ್ನು ನೋಡಿ ಬ್ರಹ್ಮ-ನಾರಾಯಣರು ಆಶ್ಚರ್ಯಗೊಂಡವರಾಗಿ ಈ ಅದ್ಭುತವುಳ್ಳ ಸ್ತಂಭಾಕಾರವಾದ ನಿರಾಕಾರವು ಯಾವುದು ಎಂದು ಪರಸ್ಪರ ಮಾತನಾಡಿಕೊಂಡರು.

**ಅತೀಂದ್ರಿಯಮಿದಂ ಸ್ತಂಭಮಗ್ನಿರೂಪಂ ಕಿಮುತ್ಥಿತಂ |**
**ಅಸ್ಯೋರ್ಧ್ವಮಪಿ ಚಾಧಶ್ಚ ಅವಯೋರ್ಲಕ್ಷ್ಯಮೇವ ಹಿ ||೧೪||**

೧೪ ನಮ್ಮ ಇಂದ್ರಿಯಗಳಿಗೆ ನಿಲುಕದಂತಹ ಕಂಬರೂಪವಾದ ಅಗ್ನಿ ರೂಪವಾದ ಈ ಸ್ವರೂಪವು ಉದ್ಭವವಾದದ್ದೇಕೆ ? ಇದರ ಮೇಲ್ಭಾಗ ಹಾಗೂ ಕೆಳಭಾಗಗಳು ನಮಗೆ ಕಾಣಿಸುತ್ತಿಲ್ಲವಲ್ಲಾ.

**ಇತಿ ವ್ಯವಸ್ಥಿತೌ ವೀರೌ ಮಿಲಿತೌ ವೀರಮಾನಿನೌ |**
**ತತ್ಪರೌ ತತ್ಪರೀಕ್ಷಾರ್ಥಂ ಪ್ರತಸ್ಥಾತೇಽಥ ಸತ್ವರಂ ||೧೫||**

೧೫ ಈ ರೀತಿಯಾಗಿ ಯೋಚಿಸಿದ ಆ ವೀರರಾದ ಬ್ರಹ್ಮ-ನಾರಾಯಣರು ತಮ್ಮ ತಮ್ಮ ಬಲದ ಗರ್ವದಿಂದ ನಿರಾಕಾರದ ಪರೀಕ್ಷೆಗಾಗಿ ತಕ್ಷಣ ಸನ್ನದ್ಧರಾದರು.

**ಅವಯೋರ್ಮಿಶ್ರಯೋಸ್ತತ್ರ ಕಾರ್ಯಮೇಕಂ ನ ಸಂಭವೇತ್ ।**
**ಇತ್ಯುಕ್ತ್ವಾ ಸೂಕರತನುರ್ದಿಷ್ಣುಸ್ತಸ್ಯಾದಿಮೀಯಿವಾನ್ ॥೧೬॥**

೧೬ ನಂತರ ಅವರು ಹೀಗೆ ಯೋಚಿಸಿದರು. ನಾವೀರ್ವರೂ ಸೇರಿ ಹೊರಟರೆ ಯಾವ ಒಂದು ಕಾರ್ಯವೂ ಆಗಲು ಹೀಗೆ ಯೋಚಿಸಿ ವಿಷ್ಣುವು ಹಂದಿಯ (ವರಾಹ) ರೂಪವನ್ನು ಧರಿಸಿ ಆ ನಿರಾಕಾರದ ಬುಡವನ್ನು ನೋಡಲು ಹೊರಟನು.

**ತಥಾ ಬ್ರಹ್ಮಾ ಹಂಸತಮಸ್ತದಂತಂ ವೀಕ್ಷಿತುಂ ಯಯೌ ।**
**ಭಿತ್ವಾ ಪಾತಾಳನಿಲಯಂ ಗತ್ವಾ ದೂರತರಂ ಹರಿಃ ॥೧೭॥**

೧೭ ಹಾಗೆ ಬ್ರಹ್ಮನೂ ಸಹ ಹಂಸರೂಪವನ್ನು ಧರಿಸಿ ನಿರಾಕಾರದ ಮೇಲ್ತುದಿಯನ್ನು ಕಾಣಲು ಹೊರಟನು. ಶ್ರೀ ಹರಿಯು ಪಾತಾಳ ಲೋಕವನ್ನೂ ಸಹ ಭೇದಿಸಿಕೊಂಡು ಬಹು ದೂರ ಹೋದನು.

**ನಾಪಶ್ಯತ್ತಸ್ಯ ಸಂಸ್ಥಾನಂ ಸ್ತಂಭಸ್ಯಾನಲವರ್ಚಸಃ ।**
**ಶ್ರಾಂತಃ ಸ ಸೂಕರಹರಿಃ ಪ್ರಾಪ ಪೂರ್ವಂ ರಣಾಂಗಣಂ ॥೧೮॥**

೧೮ ಆ ಕಡೆ ನಿನ್ನ (ಸನತ್ಕುಮಾರನ) ತಂದೆಯಾದ ಬ್ರಹ್ಮನು ಹಂಸ ರೂಪದಲ್ಲಿ ಆಕಾಶದಲ್ಲಿ ಹೋಗುತ್ತಾ ಅಲ್ಲಿ ಮೇಲಿನಿಂದ ಕೆಳಗೆ ಬೀಳುತ್ತಿರುವ ಅದ್ಭುತವಾದ ಕೇದಗೆ ಹೂವನ್ನು ನೋಡಿದನು.

**ಅಥ ಗಚ್ಛಂಸ್ತು ವ್ಯೋಮ್ನಾ ಚ ವಿಧಿಸ್ತಾತ ಪಿತಾ ತವ ।**
**ದದರ್ಶ ಕೇತಕೀಪುಷ್ಪಂ ಕಿಂಚಿದ್ವಿಚ್ಯುತಮದ್ಭುತಂ ॥19॥**

೧೯ ಆ ಕಡೆ ನಿನ್ನ ತಂದೆಯಾದ ಬ್ರಹ್ಮನು, ಮೇಲಿಂದ ಬೀಳುತ್ತಿರುವ ಅದ್ಭುತವಾದ ಕೇದ ಗೇಹುವನ್ನು ನೋಡಿದನು.

**ಅತಿಸೌರಭ್ಯಮಮ್ಲಾನಂ ಬಹುವರ್ಷಚ್ಯುತಂ ತಥಾ ।**
**ಅನ್ವೀಕ್ಷ್ಯ ಚ ತಯೋಃ ಕೃತ್ಯಂ ಭಗವಾನ್ ಪರಮೇಶ್ವರಃ ॥೨೦॥**

೨೦ ಅತ್ಯಂತ ಸುಗಂಧವುಳ್ಳ, ಬಾಡದಿರುವ ಅನೇಕ ವರ್ಷಗಳಿಂದ ಬೀಳುತ್ತಲಿರುವ ಹೂವನ್ನು ಬ್ರಹ್ಮನು ನೋಡಿದನು. ಹಾಗೇ ಪರಮೇಶ್ವರನು ತುದಿ ಬುಡಗಳನ್ನು ನೋಡಲು ಪ್ರಯತ್ನಿಸುತ್ತಿರುವ ಅವರಿಬ್ಬರನ್ನೂ ನೋಡಿ,

**ಪರಿಹಾಸಂ ತು ಕೃತವಾನ್ ಕಂಪನಾಚ್ಚಲಿತಂ ಶಿರಃ |**
**ತಸ್ಮಾತ್ತಾವನುಗೃಹಾಣಾತುಂ ಚ್ಯುತಂ ಕೇತಕಮುತ್ತಮಂ ||೨೧||**

೨೧ ಪರಮೇಶ್ವರನು (ನಿರಾಕಾರನಾದ) ನಕ್ಕನು. ಆಗ ಅವನ ತಲೆಯು ಅಲ್ಲಾಡಿತು. ಆಗ ಅವರನ್ನು (ಬ್ರಹ್ಮ-ವಿಷ್ಣುಗಳನ್ನು) ಅನುಗ್ರಹಿಸಲು ಕೇತಕೀ (ತಾಳೆ ಹೂ) ಬೀಳತೊಡಗಿತು.

**ಕಿಂ ತ್ವಂ ಪತಸಿ ಪುಷ್ಪೇಶ ಪುಷ್ಪರಾಟ್ ಕೇನ ವಾ ಧೃತಃ |**
**ಆದಿಮಸ್ಯಾಪ್ರಮೇಯಸ್ಯ ಸ್ತಂಭಮಧ್ಯಾಚ್ಚ್ಯುತಶ್ಚಿರಂ ||೨೨||**

೨೨ ಆಗ ಆ ತಾಳೆಯ ಹೂವನ್ನು ನೋಡಿ ಬ್ರಹ್ಮನು ಅದನ್ನು ಕುರಿತು ಹೀಗೆ ಹೇಳಿದನು. ಎಲೈ ಪುಷ್ಪರಾಜನಾದ ಕೇತಕಿಯೇ ನೀನು ಎಲ್ಲಿಂದ ಬೀಳುತ್ತಿರುವೆ, ಯಾರಿಂದ ನೀನು ಧರಿಸಲ್ಪಟ್ಟವನಾಗಿದ್ದೀ? ಎಂದು ಕೇಳಿದನು. ಅದಕ್ಕೆ ಆ ತಾಳೆಯ ಹೂ ನಿಮ್ಮ ಕಣ್ಣಿಗೆ ಗೋಚರವಾಗದಂತಹ ಈ ನಿರಾಕಾರದ ಮಧ್ಯದಿಂದ ಬಹಳ ಕಾಲದಿಂದ ಬೀಳುತ್ತಿರುವೆನು ಎಂದಿತು.

**ನ ಸಂಪಶ್ಯಾಮಿ ತಸ್ಮಾತ್ತ್ವಂ ಜಹ್ಯಾಶಾಮಂತದರ್ಶನೇ |**
**ಅಸ್ಯಾಂತಸ್ಯ ಚ ಸೇವಾರ್ಥಂ ಹಂಸಮೂರ್ತಿರಿಹಾಗತಃ ||೨೩||**

೨೩ ನಾನೂ ಸಹ ಇದರ ಆದಿ-ಅಂತ್ಯಗಳನ್ನು ತಿಳಿಯೇನು. ನೀನು ಸಹ ಈ ನಿರಾಕಾರದ ತುದಿಯನ್ನು ನೋಡುವ ಆಸೆಯನ್ನು ಬಿಡು, ಎಂದಿತು. ಆಗ ಬ್ರಹ್ಮನು ಹೀಗೆ ಹೇಳಿದನು. ಈ ನಿರಾಕಾರದ ಅಂತ್ಯವನ್ನು ಸೇವಿಸಲಿಕ್ಕಾಗಿಯೇ ನಾನು ಹಂಸರೂಪ ಧರಿಸಿ ಇಲ್ಲಿಗೆ ಬಂದೆನು.

**ಇತಃ ಪರಂ ಸಖೇ ಮೇऽದ್ಯ ತ್ವಯಾ ಕರ್ತವ್ಯಮೀಪ್ಸಿತಂ |**
**ಮಯಾ ಸಹ ತ್ವಯಾ ವಾಚ್ಯಮೇತದ್ವಿಷ್ಣೋಶ್ಚ ಸನ್ನಿಧೌ ||೨೪||**

೨೪ ಎಲೈ ಕೇತಕೀ ಪುಷ್ಪವೇ ಇನ್ನು ಮೇಲೆ ನೀನು ನನ್ನ ಸ್ನೇಹಿತನಾಗಿದ್ದೀಯೇ ?ನಿನ್ನಿಂದ ನನಗೊಂದು ಕರ್ತವ್ಯನಾಗಬೇಕು. ನನ್ನ ಜತೆ ಬಂದು ವಿಷ್ಣುವಿನ ಬಳಿ ಹೀಗೆ ಹೇಳಬೇಕು.

**ಸ್ತಂಭಾಂತೋ ವೀಕ್ಷಿತೋ ಧಾತ್ರಾ ತತ್ರ ಸಾಕ್ಷ್ಯಹಮಚ್ಯುತ ।**
**ಇತ್ಯುಕ್ತ್ವಾ ಕೇತಕಂ ತತ್ರ ಪ್ರಣನಾಮ ಪುನಃ ಪುನಃ**
**ಅಸತ್ಯಯ ಮಪಿ ಶಸ್ತಂ ಸ್ಯಾದಾಪದೀತ್ಯನುಶಾಸನಂ ।।25।।**

೨೫ ಎಲೈ ಅಚ್ಯುತನೇ ಬ್ರಹ್ಮನು ಸ್ತಂಭದ ತುದಿಯನ್ನು ನೋಡಿದನು ಎಂದು ಹೇಳಬೇಕು. ಇದಕ್ಕೆ ನಾನೇ ಸಾಕ್ಷಿಯಾಗಿದ್ದೇನೆಂದು ಸಹ ಹೇಳಬೇಕು, ಎಂದು ಹೇಳಿ ಬ್ರಹ್ಮನು 'ಆ ಕೇತಕೀ ಪುಷ್ಪಕ್ಕೆ ಮತ್ತೆ ಮತ್ತೆ ನಮಸ್ಕರಿಸಿದನು. ಮತ್ತು ಆಪತ್ಕಾಲದಲ್ಲಿ ಅಸತ್ಯವನ್ನು ಹೇಳಬಹುದೆಂದು ಶಾಸ್ತ್ರ ಸಮ್ಮತಿಯಿರುವುದು'ಎಂದನು. ಇದಕ್ಕೆ ಅದೃಷ್ಟವು ಒಪ್ಪಿತು.

**ಸಮೀಕ್ಷ್ಯ ತತ್ರಾಚ್ಯುತ ಮಾಯತಶ್ರಮಂ**
**ಪ್ರಣಷ್ಟಹರ್ಷಂ ತು ನನರ್ತ ಹರ್ಷಾತ್**
**ಉವಾಚ ಚೈನಂ ಪರಮಾರ್ಥಮಚ್ಯುತಂ**
**ಷಂಚಾತ್ತವಾದಃ ಸ ವಿಧಿಸ್ತತೋಽಚ್ಯುತಂ।।೨೬।।**

೨೬ ಇಷ್ಟರಲ್ಲಿ ಸ್ತಂಭದ ಮೂಲವನ್ನವರಿಯದೇ ಆಯಾಸಗೊಂಡ ಮಹಾ ವಿಷ್ಣುವೂ ಅಲ್ಲಿಗೆ ಬಂದನು. ಹಾಗೆ ಬಂದಂತಹ ಮಹಾವಿಷ್ಣುವನ್ನು ನೋಡಿ ಬ್ರಹ್ಮನು ಬಹಳ ಸಂತೋಷದಿಂದ ನರ್ತಿಸಿದನು. ನಂತರ ಸತ್ಯವಂತನಾದ ಅಚ್ಯುತನನ್ನು ಕುರಿತು ಕೈಲಾಗದ ಹೇಡಿಯಂತೆ (ಷಂಡನಂತೆ) ಸುಳ್ಳನು ಈ ರೀತಿ ಹೇಳಿದನು.

**ಸ್ತಂಭಾಗ್ರಮೇತತ್ಸಮುದೀಕ್ಷಿತಂ ಹರೇ**
**ತತ್ರೈವ ಸಾಕ್ಷೀ ನನು ಕೇತಕಂ ತ್ವಿದಂ**
**ತತೋಽವದತ್ತತ್ರ ಹಿ ಕೇತಕಂ ಮೃಷಾ**
**ತಥೇತಿ ತದ್ಧಾತೃವಚಸ್ತವಂತಿಕೇ**
**ಹರಿಶ್ಚ ತತ್ಸತ್ಯ ಮೀತೀವ ಚಿಂತಯಂ-**
**ಶ್ಚಕಾರ ತಸ್ಮೈ ವಿಧಯೇ ನಮಃ ಸ್ವಯಂ ।।೨೭।।**

೨೭ ಎಲೈ ಹರಿಯೇ ಸ್ತಂಭದ ತುದಿಯನ್ನು ನಾನು ನೋಡಿದೆನು. ಅದಕ್ಕೆ ಸಾಕ್ಷಿಯು ಈ ಕೇತಕೀ ಪುಷ್ಪವು ಎಂದಾಗ ಅಷ್ಟರಲ್ಲಿ ಆ ಕೇತಕೀ ಪುಷ್ಪವು ಹೌದು ಹೌದೆಂದು ಸುಳ್ಳನ್ನು ನುಡಿಯಿತು. ಬ್ರಹ್ಮನು ಸ್ತಂಭಾಗ್ರವನ್ನು ನೋಡಿದನೆಂದು ನುಡಿಯಿತು.

**ಷೋಡಶೈರುಪಚಾರೈಶ್ಚ ಪೂಜಯಾಮಾಸ ತು ವಿಧಿಂ ||೨೮||**

೨೮ ಆಗ ಶ್ರೀ ಹರಿಯು ಅದು ನಿಜವೆಂದು ಯೋಚಿಸಿ ಆ ಬ್ರಹ್ಮನಿಗೆ ನಮಸ್ಕರಿಸಿದನು. ಅನಂತರ ಧ್ಯಾನವೇ ಮೊದಲಾದ ಷೋಡಶೋಪಚಾರಗಳಿಂದ ಪೂಜಿಸಿದನು.

**ವಿಧಿಂ ಪ್ರಹರ್ತುಂ ಶತಮಗ್ನಿ ಲಿಂಗತಃ |**
**ಸ ಈಶ್ವರಸ್ತತ್ರ ಬಭೂವ ಸಾಕೃತಿಃ**
**ಸಮುತ್ಥಿತಃ ಸ್ವಾಮಿವಿಲೋಕನಾತ್ಪುನಃ**
**ಪ್ರಕಂಪಪಾಣಿಃ ಪರಿಗೃಹ್ಯ ತತ್ಪದಂ ||೨೯||**

೨೯ ಈ ಸಮಯದಲ್ಲಿ ಸುಳ್ಳುಗಾರನಾದ ಬ್ರಹ್ಮನನ್ನು ಶಿಕ್ಷಿಸಲು ಅಗ್ನಿಸ್ತಂಭದಿಂದ ಈಶ್ವರನು ಆಕಾರದಿಂದ ಕೂಡಿದವನಾಗಿ ಆವಿರ್ಭವಿಸಿದನು. ಹಾಗೆ ಅನಿರೀಕ್ಷಿತವಾಗಿ ಆವಿರ್ಭವಿಸಿದ ಶಿವನನ್ನು ನೋಡಿ ನಡುಗುತ್ತಿರುವ ಕೈಗಳಿಂದ ಶಿವನ ಪಾದವನ್ನು ವಿಷ್ಣುವು ಹಿಡಿದನು.

**ಅದ್ಯಂತಹೀನವಪುಷಿ ತ್ವಯಿ ಮೋಹಬುದ್ಧ್ಯಾ**
**ಭೂಯಾನ್ ವಿಮರ್ಶ ಇಹ ನಾವತಿ ಕಾಮನೋತ್ಥಃ |**
**ಸ ತ್ವಂ ಪ್ರಸೀದ ಕರುಣಾಕರ ಕಶ್ಮಲಂ ನೌ**
**ಮೃಷ್ಟಂ ಕ್ಷಮಸ್ವ ವಿಹಿತಂ ಭವತೈವ ಕೇಲ್ಯಾ ||೩೦||**

೩೦ ಆದ್ಯಂತ ಹೀನನಾದ ನಿನ್ನಲ್ಲಿ ಅಜ್ಞಾನದ ವಶರಾಗಿ ನಾವುಗಳು ನಾವೇ ದೊಡ್ಡವರೆಂಬ ಅಹಂಭಾವದಿಂದ ಆದ್ಯಂತವನ್ನು ವಿಮರ್ಶಿಸಲು ಹೋದೆವು. ಆದ್ದರಿಂದ ನಮ್ಮಲ್ಲಿ ನೀನು ಪ್ರಸನ್ನನಾಗು. ಎಲೈ ಕರುಣಾಕರನೇ, ನಮ್ಮ ತಪ್ಪನ್ನು ಕ್ಷಮಿಸು. ಈ ತಪ್ಪನ್ನು ವಿನೋದಕ್ಕಾಗಿ ನೀನೇ ಮಾಡಿಸಿರುವೆ. ನಾವು ಕೇವಲ ನಿಮಿತ್ತ ಮಾತ್ರರು. ಇಲ್ಲದಿದ್ದಲ್ಲಿ ಅಸ್ವತಂತ್ರರಾದ ನಾವು ಹೀಗೆ ಮಾಡಲಾಗುವುದಿಲ್ಲ ಎಂದು ಹೇಳಿದನು.

**||ಈಶ್ವರ ಉವಾಚ||**

**ವತ್ಸ ಪ್ರಸನ್ನೋಽಸ್ಮಿ ಹರೇ ಯತಸ್ತ್ವ-**
**ಮೀಶತ್ವಮಿಚ್ಛನ್ನಪಿ ಸತ್ಯವಾಕ್ಯಂ**

**ಬ್ರೂಯಾಸ್ತತಸ್ತೇ ಭವಿತಾ ಜನೇಷು**

**ಸಾಮ್ಯಂ ಮಯಾ ಸತ್ಕೃತಿರಪ್ಯಲಪ್ಸಿ ||೩೧||**

ಈಶ್ವರನು ಹೇಳುತ್ತಾನೆ

೩೧ ಎಲೈ ವತ್ಸನಾದ ಹರಿಯೇ, ನೀನೇ ಈಶ್ವರನಾಗಬೇಕೆಂಬ ಹಂಬಲವಿದ್ದರೂ ಅಗ್ನಿ ಸ್ತಂಭದ ವಿಚಾರದಲ್ಲಿ ಸತ್ಯವನ್ನೇ ಹೇಳಿರುವೆ. ಆದ್ದರಿಂದ ಇನ್ನು ಮುಂದೆ ಜನಗಳಲ್ಲಿ ನಿನಗೆ ನನ್ನಂತೆಯೇ ಗೌರವವು, ಪೂಜೆಯೂ ಕೂಡ ಲಭಿಸುವುದು.

**ಇತಃ ಪರಂ ತೇ ಪೃಥಗಾತ್ಮನಶ್ಚ।**

**ಕ್ಷೇತ್ರಪ್ರತಿಷ್ಠೋತ್ಸವಪೂಜನಂ ಚ ||೩೨||**

೩೨ ಇಲ್ಲಿಂದ ಮುಂದೆ ನಿನಗೆ ನನ್ನಂತೆಯೇ ಬೇರೆಯಾಗಿ ಕ್ಷೇತ್ರಗಳಲ್ಲಿ ಪ್ರತಿಷ್ಠಾ-ಪೂಜಾ ಉತ್ಸವಗಳೂ ನಡೆಯುವುವು.

**ಇತಿ ದೇವಃ ಪುರಾ ಪ್ರೀತಃ ಸತ್ಯೇನ ಹರಯೇ ಪರಂ ।**

**ದದೌ ಸ್ವಸಾಮ್ಯಮತ್ಯರ್ಥಂ ದೇವಸಂಘೇ ಚ ಪಶ್ಯತಿ ||೩೩||**

೩೩ ಈ ರೀತಿಯಾಗಿ 'ಶ್ರೀ ಹರಿಯ ಸತ್ಯವಾಕ್ಯದಿಂದ ಸಂತುಷ್ಟನಾಗಿ ತನ್ನ ಸಾಮ್ಯವನ್ನು ಅಂದರೆ ಈಶ್ವರನಿಗೆ ಸರಿ ಸಮನಾದ ಗೌರವ, ಪೂಜಾರಿಗಳು ದೊರಕುವಂತೆ ದೇವತೆಗಳೆದುರಿಗೆ ಅನುಗ್ರಹಿಸಿದನು'.

**ಇತಿ ಶ್ರೀ ಶಿವಮಹಾಪುರಾಣೇ ಪ್ರಥಮಾಯಾಂ ವಿದ್ಯೇಶ್ವರ ಸಂಹಿತಾಯಾಂ**

**ಸಪ್ತಮೋಽಧ್ಯಾಯಃ**

**ಇಲ್ಲಿಗೆ ಶಿವಪುರಾಣದ ಮೊದಲನೇ ವಿದ್ಯೇಶ್ವರ ಸಂಹಿತೆಯಲ್ಲಿ**

**ಏಳನೇ ಅಧ್ಯಾಯವು ಮುಗಿದುದು.**

।ಶ್ರೀಃ।।

।।ಓಂ ನಮಃ ಶಿವಾಯ।।

ಅಥ ಶ್ರೀ ಶಿವಮಹಾಪುರಾಣೇ

ವಿದ್ಯೇಶ್ವರಸಂಹಿತಾಯಾಂ

# ಅಷ್ಟಮೋಽಧ್ಯಾಯಃ

## ಎಂಟನೇ ಅಧ್ಯಾಯವು

।।ನಂದಿಕೇಶ್ವರ ಉವಾಚ।।

**ಸಸರ್ಜಾಽಥ ಮಹಾದೇವಃ ಪುರುಷಂ ಕಂಚಿದದ್ಭುತಂ।**
**ಭೈರವಾಖ್ಯಂ ಭ್ರುವೋರ್ಮಧ್ಯಾದ್ಬ್ರಹ್ಮದರ್ಪಜಿಘಾಂಸಯಾ ।।೧।।**

ನಂದಿಕೇಶ್ವರನು ಹೇಳಿದನು

೧ ಬಳಿಕ ಮಹಾದೇವನು ಒಬ್ಬಾನೊಬ್ಬ ಅತ್ಯದ್ಭುತನಾದ ಭೈರವನೆಂಬ ಹೆಸರಿನ ಪುರುಷನೊಬ್ಬನನ್ನು ತನ್ನ ಹುಬ್ಬುಗಳ ನಡುವೆಯಿಂದ ಬ್ರಹ್ಮನ ದರ್ಪವನ್ನಡಗಿಸಲು ಸೃಷ್ಟಿಸಿದನು.

**ಸ ವೈ ತದಾ ತತ್ರ ಪತಿಂ ಪ್ರಣಮ್ಯ ಶಿವಮಂಗಣೇ।**
**ಕಿಂ ಕಾರ್ಯಂ ಕರವಾಣ್ಯತ್ರ ಶೀಘ್ರಮಾ ಜ್ಞಾಪಯ ಪ್ರಭೋಃ ।।೨।।**

೨ ಹಾಗೆ ಸೃಷ್ಟಿಸಲ್ಪಟ್ಟ ಭೈರವನಾದರೋ ಆ ಕೂಡಲೇ ಜಗತ್ಪತಿಯಾದ ಪರಮೇಶ್ವರನನ್ನು ನಮಸ್ಕರಿಸಿ, ಇಲ್ಲಿ ನಾನು ಮಾಡಬೇಕಾದದ್ದೇನು? ಕೂಡಲೇ ಎಲೈ ಪ್ರಭುವೇ ನನಗೆ ಆಜ್ಞಾಪಿಸು ಎಂದು ಪ್ರಾರ್ಥಿಸಿದನು.

**ವತ್ಸಯೋಽಯಂ ವಿಧಿಃಸಾಕ್ಷಾಜ್ಜಗತಾಮಾದ್ಯದೈವತಂ।**
**ನೂನ ಮರ್ಚಯ ಖಡ್ಗೇನ ತಿಗ್ಮೇನ ಜವಸಾ ಪರಂ ।।೩।।**

೩ ಆಗ ಈಶ್ವರನು ಭೈರವನನ್ನು ಕುರಿತು ಹೀಗೆ ಹೇಳಿದನು. ಎಲೈ ವತ್ಸ! ನಿನ್ನೆದುರಿಗೆ ನಿಂತಿರುವ ಈ ಬ್ರಹ್ಮನು ಜಗತ್ತಿಗೆಲ್ಲಾ ಮೊದಲನೆಯ ದೇವನು. ಇವನನ್ನು ಖಂಡಿತವಾಗಿ ನಿನ್ನ ಹರಿತವಾದ ಖಡ್ಗದಿಂದ ಅರ್ಚಿಸು ಅಂದರೆ ಇವನನ್ನು ಕತ್ತರಿಸು ಎಂದು ಹೇಳಿದನು.

ಸ ವೈ ಗೃಹೀತ್ವೈ ಕಕರೇಣ ಕೇಶಂ
ತತ್ಪಂಚಮಂ ದೃಪ್ತಮಸತ್ಸ ಭಾಷಣಂ।
ಛಿತ್ವಾ ಶಿರೋಹಸ್ಯ ನಿಹಂತುಮುದ್ಯತಃ
ಪ್ರಕಂಪರ್ಯ ಖಡ್ಗಮತಿಸ್ಫುಟಂ ಕರೈಃ ॥೪॥

೪ ಹೀಗೆ ಹೇಳಿದ ತಕ್ಷಣ ಆ ಭೈರವನು ಅಸತ್ಯವನ್ನಾಡಿದ ಆತನ (ಬ್ರಹ್ಮ) ಐದನೆಯ ತಲೆಯ ಕೂದಲನ್ನು ಹಿಡಿದು ದರ್ಪದ ಆ ತಲೆಯನ್ನು ಕತ್ತರಿಸಿ, ಉಳಿದ ತಲೆಗಳನ್ನೂ ಕತ್ತರಿಸುವ ಸಲುವಾಗಿ ಅತ್ಯಂತ ಹರಿತವಾದ ತನ್ನ ಕತ್ತಿಯನ್ನು ಅಲುಗಾಡಿಸಿದನು.

ಪಿತಾ ತವೋತ್ಸೃಷ್ಟವಿಭೂಷಣಾಂಬರ-
ಸ್ರಗುತ್ತರೀಯಾಮಲಕೇಶಸಂಹತಿಃ।
ಪ್ರವಾತರಂಭೇವ ಲತೇವ ಚಂಚಲಃ
ಪಪಾತ ವೈ ಭೈರವಪಾದಪಂಕಜೇ ॥೫॥

೫ ಆಗ ಎಲೈ ಸನತ್ಕುಮಾರನೇ, ನಿನ್ನ ತಂದೆಯು ಅಲಂಕರಿಸಿಕೊಂಡಿದ್ದ ಬಟ್ಟೆ ಆಭರಣಗಳೆಲ್ಲವೂ ಹಾಗೂ, ಮಾಲಿಕೆಗಳು, ಉತ್ತರೀಯ ಇವೆಲ್ಲವೂ ಅಸ್ತವ್ಯಸ್ತವಾಯಿತು. ತಲೆಗೂದಲು ಸಹ ವ್ಯತ್ಯಾಸಗಳಾಗಿ ಕೆದರಿದವು. ಬಿರುಗಾಳಿಗೆ ಸಿಕ್ಕ ಮೃದುವಾದ ಲತೆಯಂತೆ ನಡುಗುತ್ತಾ ಆತನು ಆ ಭೈರವನ ಪಾದಕಮಲಗಳಲ್ಲಿ ಬಿದ್ದು ಬಿಟ್ಟಿತು.

ತಾವದ್ವಿಧಿಂ ತಾತ ದಿದೃಕ್ಷುರಚ್ಯುತಃ
ಕೃಪಾಲುರಸ್ಮತ್ಪ್ರತಿಪಾದಪಲ್ಲವಂ।
ನಿಷಿಚ್ಯ ಬಾಷ್ಪೈರವದತ್ಕೃತಾಂಜಲಿ-
ರ್ಯಥಾ ಶಿತುಃ ಸ್ವಂ ಪಿತರಂ ಕಲಾಕ್ಷರಂ ॥೬॥

೬ ಆಗ ಈ ದೃಶ್ಯವನ್ನು ನೋಡುತ್ತಿದ್ದ ವಿಷ್ಣುವು ಅತ್ಯಂತ ಕರುಣೆಯುಳ್ಳವನಾಗಿ ನಮ್ಮೊಡೆಯನಾದ ಶಿವನ ಪಾದಕಮಲಗಳನ್ನು ತನ್ನ ಕಣ್ಣೀರುಗಳಿಂದ ಸಿಂಪಡಿಸಿ ಅಂಜಲಿಬದ್ಧನಾಗಿ, ಹೇಗೆ ಮಕ್ಕಳು ತಮ್ಮ ತಂದೆಯ ಬಳಿಯಲ್ಲಿ ತೊದಲ್ನುಡಿಯಿಂದ ಮಾತನಾಡುವರೋ ಹಾಗೆ ಈ ರೀತಿಯಾಗಿ ನುಡಿದನು.

||ಅಚ್ಯುತ ಉವಾಚ||
ತ್ವಯಾ ಪ್ರಯತ್ನೇನ ಪುರಾ ಹಿ ದತ್ತಂ
ಯದಸ್ಯ ಪಂಚಾನನಮೀಶಚಿಹ್ನಂ।
ತಸ್ಮಾತ್ಕ್ಷಮಸ್ವಾದ್ಯಮನುಗ್ರಹಾರ್ಹಂ
ಕುರು ಪ್ರಸಾದಂ ವಿಧಯೇ ಹ್ಯಮುಷ್ಮೈ ||೭||

ಅಚ್ಯುತನು ಹೇಳುತ್ತಾನೆ

೭ ಓ ಈಶ್ವರನೇ! ಈ ಬ್ರಹ್ಮನಿಗೆ ನೀನೇ ಜಗದೊಡೆಯನ ಗುರುತಾಗಿ ಐದು ತಲೆಗಳನ್ನು ಅನುಗ್ರಹಿಸಿದ್ದೆಯಲ್ಲವೇ ? ಆದ್ದರಿಂದ ಈಗ ನೀನು ಇವನ ತಪ್ಪನ್ನು ಮನ್ನಿಸು. ಇವನ ಮೇಲೆ ಅನುಗ್ರಹವನ್ನು ಮಾಡು.

ಇತ್ಯರ್ಥಿತೋಽಚ್ಯುತೇನೇಶಸ್ತುಷ್ಟಃ ಸುರಗಣಾಂಗಣೇ।
ನಿವರ್ತಯಾಮಾಸ ತದಾ ಭೈರವಂ ಬ್ರಹ್ಮದಂಡತಃ ||೮||

೮ ಈ ರೀತಿಯಾಗಿ ಈಶ್ವರನು ವಿಷ್ಣುವಿನಿಂದ ದೇವತೆಗಳೆದುರು ಸ್ತುತಿಸಲ್ಪಡಲು ಈಶ್ವರನು ಬ್ರಹ್ಮನನ್ನು ದಂಡಿಸುತ್ತಿದ್ದ ಭೈರವನನ್ನು ತಡೆದನು.

ಅಥಾಽಹ ದೇವಃ ಕಿತವಂ ವಿಧಿಂ ವಿಗತಕಂಧರಂ ।
ಬ್ರಹ್ಮಂಸ್ತ್ವಮರ್ಹಣಾಕಾಂಕ್ಷೀ ಶಠೇಶತ್ವಂ ಸಮಾಸ್ಥಿತಃ ||೯||

೯ ನಂತರ ಈಶ್ವರನು ಸುಳ್ಳುಗಾರನೂ, ತನ್ನ ಐದನೆಯ ತಲೆಯನ್ನು ಕಳೆದುಕೊಂಡವನೂ ಆದ ಬ್ರಹ್ಮನನ್ನು ಕುರಿತು ಈ ರೀತಿ ಹೇಳಿದನು. ಎಲೈ ಬ್ರಹ್ಮನೇ ನೀನೇ ಈಶ್ವರನಾಗಬೇಕೆಂಬ ಹಟದಿಂದ, ದುರಾಸೆಯಿಂದ ಮೋಸವನ್ನು ಆಚರಿಸಿರುವೆ.

ನಾಽತಸ್ತೇ ಸತ್ಕೃತಿರ್ಲೋಕೇ ಭೂಯಾತ್ಸ್ಥಾನೋತ್ಸವಾದಿಕಂ ।
||ಬ್ರಹ್ಮೋವಾಚ||
ಸ್ವಾಮಿನ್ ಪ್ರಸೀದಾದ್ಯ ಮಹಾವಿಭೂತೇ।
ಮನ್ಯೇ ವರಂ ಮೇ ಶಿರಸಃ ಪ್ರಮೋಕ್ಷಂ ||10||

೧೦ ಆದ್ದರಿಂದ ನಿನಗೆ ಲೋಕದಲ್ಲಿ ಪೂಜೆ ಇರಬಾರದು ನಿನ್ನ ಪ್ರತಿಷ್ಠೆ, ಉತ್ಸವಾದಿಗಳು ನಡೆಯಲಾರದು. ಉತ್ತಮವಾದ ಸ್ಥಾನವೂ ಇರಲಾರದು ಎಂದನು.

ಆಗ ಬ್ರಹ್ಮನು ಹೇಳಿದನು:-ಸಕಲೈಶ್ವರ್ಯ ಸಂಪನ್ನನಾದ ಸ್ವಾಮಿಯೇ ಈಗ ನನ್ನ ಮೇಲೆ ಪ್ರಸನ್ನನಾಗು. ನಾನು ಸುಳ್ಳು ಹೇಳಿದ ತಲೆಯನ್ನು ತೆಗೆದದ್ದು ಒಳ್ಳೆಯದೇ ಆಯಿತೆಂದು ತಿಳಿದಿರುವೆನು.

**ನಮಸ್ತುಭ್ಯಂ ಭಗವತೇ ಬಂಧವೇ ವಿಶ್ವಯೋನಯೇ ।**

**ಸಹಿಷ್ಣವೇ ಚ ದೋಷಾಣಾಂ ಶಂಭವೇ ಶೈಲಧನ್ವನೇ ॥೧೧॥**

೧೧ ಜಗದ್ಬಂಧುವೇ, ಸಕಲ ಜಗತ್ತಿಗೂ ಕಾರಣಸ್ವರೂಪನೇ ನಿನಗೆ ನಮಸ್ಕಾರವು ಎಲ್ಲಾ ತಪ್ಪುಗಳನ್ನು ಮನ್ನಿಸುವವನೇ ಮೇರು ಪರ್ವತವನ್ನೇ ಧನುಸ್ಸನ್ನಾಗಿ ಉಳ್ಳವನೇ ನಿನಗೆ ನಮ್ಮ ನಮಸ್ಕಾರವು.

ವಿ.ವಿ:- 'ಶೈಲಧನ್ವನೇ' ಎಂದರೆ ಮೇರು ಪರ್ವತವನ್ನೇ ಈಶ್ವರನು ಧನುಸ್ಸನ್ನಾಗಿ ತ್ರಿಪುರ ಸಂಹಾರ ಕಾಲದಲ್ಲಿ ಮಾಡಿಕೊಂಡಿದ್ದನು. ತ್ರಿಪುರ ಸಂಹಾರ ಕಾಲದಲ್ಲಿ ಈಶ್ವರನು ಭೂಮಿಯನ್ನೇ ರಥವನ್ನಾಗಿಯೂ, ನಾಲ್ಕು ವೇದಗಳನ್ನೇ ರಥದ ಕುದುರೆಯನ್ನಾಗಿಯೂ ಸೂರ್ಯ, ಚಂದ್ರರನ್ನು ರಥದ ಚಕ್ರವನ್ನಾಗಿಯೂ, ಬ್ರಹ್ಮನನ್ನೇ ಸಾರಥಿಯನ್ನಾಗಿಯೂ, ಧನುಸ್ಸಿಗೆ ಆದಿಶೇಷನನ್ನೇ ಹಗ್ಗವನ್ನಾಗಿಯೂ, ನಾರಾಯಣನನ್ನೇ ಬಾಣವನ್ನಾಗಿಯೂ ಮಾಡಿಕೊಂಡಿದ್ದನು. ಆದ್ದರಿಂದಲೇ 'ಶೈಲಧನ್ವನೇ' ಎಂದು ಹೇಳಿರುವುದು. 'ನಮೋಗಿರಿಧನ್ವನೇ' ಎಂಬ ವೇದವಾಕ್ಯವನ್ನೂ ನಾವಿಲ್ಲಿ ಸ್ಮರಿಸಬಹುದು.

**॥ಈಶ್ವರ ಉವಾಚ॥**

**ಅರಾಜಭಯಮೇತದ್ವೈ ಜಗತ್ಸರ್ವಂ ನಶಿಷ್ಯತಿ।**

**ತತಸ್ತ್ವಂ ಜಹಿ ದಂಡಾಹತಂ ವಹ ಲೋಕಧುರಂ ಶಿಶೋ ॥೧೨॥**

ಈಶ್ವರನು ಹೇಳಿದನು

೧೨ ರಾಜ ಭಯವಿಲ್ಲದಿದ್ದರೆ ಲೋಕವೆಲ್ಲವೂ ನಾಶವಾಗುವುದು. ಆದ್ದರಿಂದ ಎಲೈ ವತ್ಸನೇ ನೀನು ಅಪರಾಧಿಗಳನ್ನು ಶಿಕ್ಷಿಸುತ್ತಾ ಲೋಕವನ್ನು ರಕ್ಷಿಸುವವನಾಗು.

**ವರಂ ದದಾಮಿ ತೇ ತತ್ರ ಗೃಹಾಣ ದುರ್ಲಭಂ ಪರಂ ।**

**ವೈತಾನಿಕೇಷು ಗೃಹ್ಯೇಷು ಯಜ್ಞೇಷು ಚ ಭವಾನ್ ಗುರುಃ ॥೧೩॥**

೧೩ ಅಲ್ಲದೇ ನಿನಗೀಗ ದುರ್ಲಭವಾದ, ಶ್ರೇಷ್ಠವಾದ ವರವನ್ನೂ ನೀಡುವೆನು,

ತೆಗೆದುಕೋ ವಿಶೇಷವಾಗಿ ನಿತ್ಯ ನೈಮಿತ್ತಿಕ, ಕಾಮ್ಯ, ಗೃಹ್ಯ ಕರ್ಮಗಳಲ್ಲಿ ಹಾಗು ಯಜ್ಞಗಳಲ್ಲಿ ನೀನೇ ಗುರುವು.

ನಿಷ್ಫಲಸ್ತ್ವದೃತೇ ಯಜ್ಞಃ ಸಾಂಗಶ್ಚ ಸಹದಕ್ಷಿಣಃ ।
ಅಥಾಹ ದೇವಃ ಕಿತವಂ ಕೇತಕಂ ಕೂಟಸಾಕ್ಷಿಣಂ ॥೧೪॥

೧೪ ಅಲ್ಲದೇ ನಿನ್ನನ್ನು ಬಿಟ್ಟು ಮಾಡಿದ, ಸಾಂಗವಾದ ಯಾಗವಾದರೂ, ದಕ್ಷಿಣೆಯಿಂದ ಆ ಯಜ್ಞವು ಕೂಡಿದ್ದರೂ, ಅದು ಫಲವನ್ನು ನೀಡುವುದಿಲ್ಲವು ಅಂದರೆ ನೀನಿಲ್ಲದ ಯಜ್ಞವು ನಿಷ್ಫಲವೆಂದು ಅರ್ಥವು ನಂತರ ಈಶ್ವರನು ಸುಳ್ಳುಗಾರನೂ, ಸುಳ್ಳುಸಾಕ್ಷಿಯನ್ನೂ ಹೇಳಿದ ಕೇದಗೆಯ ಹೂವನ್ನು ಕುರಿತು ಈ ರೀತಿ ಹೇಳಿದನು.

ರೇ ರೇ ಕೇತಕ ದುಷ್ಟಸ್ತ್ವಂ ಶಠ ದೂರಮಿತೋ ವ್ರಜ ।
ಮಮಾಪಿ ಪ್ರೇಮ ತೇ ಪುಷ್ಪೇ ಮಾ ಭೂತ್ವಾಜಾಸ್ವಿತಃ ಪರಂ ॥೧೫॥

೧೫ ಎಲೈ ಕೇತಕೀ ಪುಷ್ಪವೇ ನೀನು ದುಷ್ಟನು, ಕಪಟಿಯು, ನೀನು ಆದ ಕಾರಣ ಇಲ್ಲಿ ನಿಲ್ಲದೇ ದೂರ ಹೊರಟು ಹೋಗು. ಇನ್ನು ಮುಂದೆ ನೀನು ನನಗೆ ಪ್ರೀತಿಪಾತ್ರವಾದ ಪುಷ್ಪವಾಗದೇ ಹೋಗು. ನನ್ನ ಪೂಜೆಗೆ ಬೇಡವಾಗಿ ಹೋಗು.

ಇತ್ಯುಕ್ತೇ ತತ್ರ ದೇವೇನ ಕೇತಕಂ ದೇವಜಾತಯಃ ।
ಸರ್ವಾ ನಿವಾರಯಾಮಾಸುಸ್ತತ್ಪಾರ್ಶ್ವಾದನಯತಸ್ತದಾ ॥೧೬॥

೧೬ ಹೀಗೆ ಈಶ್ವರನು ಹೇಳಿದ ಬಳಿಕ ಅಲ್ಲಿದ್ದಂತಹ ದೇವತೆಗಳು ಆ ತಾಳೆಯ ಹೂವನ್ನು ಅಲ್ಲಿಂದ ದೂರಕ್ಕೆ ಅಂದರೆ ಬೇರೆಡೆಗೆ ಸಾಗಹಾಕಿದರು.

॥ಕೇತಕ ಉವಾಚ॥

ನಮಸ್ತೇ ನಾಥ ಮೇ ಜನ್ಮ ನಿಷ್ಫಲಂ ಭವದಾಜ್ಞಯಾ।
ಸಫಲಂ ಕ್ರಿಯತಾಂ ತಾತ ಕ್ಷಮ್ಯತಾಂ ಮಮ ಕಿಲ್ಬಿಷಂ ॥೧೭॥

೧೭ ಆಗ ಕೇತಕೀ ಪುಷ್ಪವು ಹೇಳಿತು. ಎಲೈ ಒಡೆಯನೆ ನಿನಗೆ ನಮಸ್ಕಾರವು. ನೀನು ಈ ಅಪ್ಪಣೆ ಮಾಡಿದಂತಾದರೆ ನನ್ನ ಜನ್ಮವೇ ವ್ಯರ್ಥವಾದಂತಾಯಿತು. ಎಲೈ ತಂದೆಯೇ ನನ್ನನ್ನು ಕ್ಷಮಿಸಿ, ನನ್ನ ಪಾಪಗಳನ್ನು ಹೋಗಲಾಡಿಸಿ ನನ್ನ ಜನ್ಮವು ಸಾರ್ಥಕವಾಗುವಂತೆ ಮಾಡು.

ಜ್ಞಾನಾಜ್ಞಾನಕೃತಂ ಪಾಪಂ ನಾಶಯತ್ಯೇವ ತೇ ಸ್ಮೃತಿಃ ।
ತಾದೃಶೇ ತ್ವಯಿ ದೃಷ್ಟೇ ಮೆ ಮಿಥ್ಯಾದೋಷಃ ಕುತೋ ಭವೇತ್ ॥೧೮॥

೧೮ ಜ್ಞಾನಪೂರ್ವಕವಾಗಿ ಆಗಲಿ, ಅಜ್ಞಾನಪೂರ್ವಕವಾಗಿ ಮಾಡಿದ ಅಪರಾಧಗಳೇ ಆಗಲಿ ಅವೆಲ್ಲವೂ ನಿನ್ನ ಸ್ಮರಣೆಯಿಂದಲೇ ನಾಶವಾಗುವುವು. ಹಾಗಿರುವಾಗ ನಿನ್ನ ದರ್ಶನ ಮಾಡುತ್ತಿರುವ ನನಗೆ ಸುಳ್ಳು ಹೇಳಿದ ದೋಷವು ಹೇಗೆ ತಾನೇ ನನಗೆ ತಗಲುವುದು.?

ತಥಾ ಸ್ತುತಸ್ತು ಭಗವಾನ್ ಕೇತಕೇನ ಸಭಾತಲೇ ।
ನ ಮೇ ತ್ವದ್ಧಾರಣಂ ಯೋಗ್ಯಂ ಸತ್ಯವಾಗಹಮೀತ್ವರಃ ॥೧೯॥

೧೯ ಹೀಗೆ ದೇವತೆಗಳ ಸಭೆಯಲ್ಲಿ ತಾಳೆಯ ಹೂನಿಂದ ಸ್ತುತಿಸಲ್ಪಟ್ಟ ಈಶ್ವರನು, ಎಲೈ ಕೇತಕಿಯೇ ನಾನು ಸತ್ಯವಾದಿಯು ನನ್ನ ಮಾತು ಎಂದಿಗೂ ಸುಳ್ಳಾಗಲಾರದು. ಆದ್ದರಿಂದ ನೀನು ನನ್ನ ಧಾರಣೆಗೆ ಯೋಗ್ಯವಲ್ಲ ಎಂದು ಹೇಳಿದನು.

ಮದೀಯಾಸ್ತ್ವಾಂ ಧರಿಷ್ಯಂತಿ ಜನ್ಮ ತೇ ಸಫಲಂ ತತಃ ।
ತ್ವಂ ವೈ ವಿತಾನವ್ಯಾಜೇನ ಮನೋಪರಿ ಭವಿಷ್ಯಸಿ ॥೨೦॥

೨೦ ಆದರೆ ಎಲೈ ತಾಳೆಯ ಹೂವೆ, ನನ್ನ ಭಕ್ತರ ನಿನ್ನನ್ನು ಧರಿಸುವಂತಾಗಲಿ, ಅದರಿಂದ ನಿನ್ನ ಜನ್ಮ ಸಾರ್ಥಕವಾಗುವುದು ಹಾಗೇ ನೀನು ಧ್ವಜದ ರೂಪದಲ್ಲಿ ನನ್ನ ಮೇಲೆ ನೀನು ಇರುತ್ತೀಯೆ.

ಇತ್ಯನುಗೃಹ್ಯ ಭಗವಾನ್ ಕೇತಕಂ ವಿಧಿಮಾಧವೌ ।
ವಿರರಾಜ ಸಭಾಮಧ್ಯೇ ಸರ್ವದೇವೈರಭಿಷ್ಟುತಃ ॥೨೧॥

೨೧ ಈ ರೀತಿಯಾಗಿ ಅನುಗ್ರಹ ಮಾಡಿ ಪೂಜ್ಯನಾದ ಶಂಕರನು ಬ್ರಹ್ಮ-ನಾರಾಯಣರನ್ನೂ ಅನುಗ್ರಹಿಸಿ ಸಭಾಮಧ್ಯದಲ್ಲಿ ದೇವತೆಗಳಿಂದ ಸೇವಿಸಲ್ಪಡುತ್ತಾ ಪರಮೇಶ್ವರನು ವಿರಾಜಿಸಿದನು.

ಇತಿ ಶ್ರೀ ಶಿವಮಹಾಪುರಾಣೇ ಪ್ರಥಮಾಯಾಂ ವಿದ್ಯೇಶ್ವರ ಸಂಹಿತಾಯಾ ಮಷ್ಟಮೋಽಧ್ಯಾಯಃ.

ಇಲ್ಲಿಗೆ ಶ್ರೀ ಶಿವಪುರಾಣದಲ್ಲಿ ಮೊದಲನೆಯ ವಿದ್ಯೇಶ್ವರ ಸಂಹಿತೆಯಲ್ಲಿ ಎಂಟನೇ ಅಧ್ಯಾಯವು ಮುಗಿದುದು.

||ಶ್ರೀಃ||

||ಓಂ ನಮಃ ಶಿವಾಯ||

ಅಥ ಶ್ರೀ ಶಿವಮಹಾಪುರಾಣೇ

ವಿದ್ಯೇಶ್ವರಸಂಹಿತಾಯಾಂ

# ನವಮೋಽಧ್ಯಾಯಃ

ಒಂಬತ್ತನೇ ಅಧ್ಯಾಯವು

||ನಂದಿಕೇಶ್ವರ ಉವಾಚ||

ತತ್ರಾಂತರೇ ತೌ ಚ ನಾಥಂ ಪ್ರಣಮ್ಯ ವಿಧಿಮಾಧವೌ ।

ಬದ್ಧಾಂಜಲಿಪುಟೌ ತೂಷ್ಣೀಂ ತಸ್ಥತುರ್ದಕ್ಷವಾಮಗೌ ||೧||

ನಂದಿಕೇಶ್ವರನು ಹೇಳಿದನು

೧ ಆ ಸಮಯದಲ್ಲಿ ಬ್ರಹ್ಮ-ವಿಷ್ಣುಗಳಿಬ್ಬರೂ ಈಶ್ವರನನ್ನು ನಮಸ್ಕರಿಸಿ ಬದ್ಧಾಂಜಲಿವುಳ್ಳವರಾಗಿ ಅವನ ಎಡಬಲಗಳಲ್ಲಿ ಸುಮ್ಮನಿದ್ದರು.

ತತ್ರ ಸಂಸ್ಥಾಪ್ಯ ತೌ ದೇವಂ ಸಕುಟುಂಬಂ ವರಾಸನೇ ।

ಪೂಜಯಾಮಾಸತುಃ ಪೂಜ್ಯಂ ಪುಣ್ಯೈಃ ಪುರುಷವಸ್ತುಭಿಃ ||೨||

೨ ಅನಂತರ ಶಿವನೊಡನೆ ಪಾರ್ವತಿಯನ್ನು ಉತ್ತಮವಾದ ಆಸನದಲ್ಲಿ ಕುಳ್ಳರಿಸಿ ಪರಿವಾರ ಸಹಿತನಾದ ಅವನನ್ನು ಪುಣ್ಯತಮವಾದ ಪುರುಷರು ಉಪಯೋಗಿಸುವ ವಸ್ತುಗಳಿಂದ ಪೂಜಿಸಿದರು.

ಪೌರುಷಂ ಪ್ರಾಕೃತಂ ವಸ್ತು ಜ್ಞೇಯಂ ದೀರ್ಘಾಲ್ಪಕಾಲಿಕಂ ।

ಹಾರನೂಪುರಕೇಯೂರಕಿರೀಟಮಣಿಕುಂಡಲೈಃ ||೩।

೩ ಪುರುಷ ವಸ್ತುಗಳೆಂದರೆ ಪ್ರಕೃತಿದತ್ತವಾದ ದೀರ್ಘಕಾಲಿಕ ಮತ್ತು ಅಲ್ಪಕಾಲಿಕವಾದ ವಸ್ತುಗಳಿಗೆ ಹೆಸರು. ಹಾರ, ಗೆಜ್ಜೆ, ತೋಳಿನ ಆಭರಣ, ಕಿರೀಟ, ಮಣಿಮಯವಾದ ಕುಂಡಲಗಳಿಂದಲೂ,

ಯಜ್ಞಸೂತ್ರೋತ್ತರೀಯಸ್ರಕ್ಕ್ಷೌಮಮಾಲ್ಯಾಂಗುಲೀಯಕೈಃ ।
ಪುಷ್ಪತಾಂಬೂಲಕರ್ಪೂರಚಂದನಾಗರುಲೇಪನೈಃ ॥೪॥

೪ ಯಜ್ಞಸೂತ್ರ, ಉತ್ತರೀಯ, ಹಾರ, ರೇಷ್ಮೆಯವಸ್ತ್ರ ಮಾಲಿಕೆ, ಉಂಗುರಗಳಿಂದಲೂ, ಹೂ, ತಾಂಬೂಲ, ಪಚ್ಚಕರ್ಪೂರ, ಚಂದನ, ಅಗರುಗಂಧ, ಮೈಗೆ ಲೇಪಿಸುವ ಸುಗಂಧಗಳಿಂದಲೂ,

ಧೂಪದೀಪಸಿತಚ್ಛತ್ರವ್ಯಜನಧ್ವಜಚಾಮರೈಃ ।
ಅನ್ಯೈರ್ದಿವ್ಯೋಽಪಹಾರೈಶ್ಚ ವಾಙ್ಮನೋತೀತವೈಭವೈಃ ॥೫॥

೫ ಧೂಪ, ದೀಪ, ಬಿಳಿಯ ಛತ್ರಿ, ಬೀಸಣಿಗೆ, ಧ್ವಜ, ಚಾಮರಗಳಿಂದಲೂ, ಇನ್ನೂ ಬೇರೆಯದಾದ ದೇವಯೋಗ್ಯವಾದಂತಹ ಉಪಹಾರಗಳಿಂದಲೂ ಮಾತು, ಮನಸ್ಸುಗಳಿಗೆ ಸಿಲುಕದಂತಹ ವೈಭವಗಳಿಂದಲೂ,

ಪತಿಯೋಗ್ಯೈಃ ಪಶ್ವಲಭ್ಯೈಸ್ತೌ ಸಮಾರ್ಚಯತಾಂ ಪತಿಂ ।
ಯದ್ಯಚ್ಛ್ರೇಷ್ಠತಮಂ ವಸ್ತು ಪತಿಯೋಗ್ಯಂ ಹಿತಧ್ವಜ ॥೬॥

೬ ಒಡೆಯನಾದ ಶಿವನಿಗೆ ಯೋಗ್ಯವಾದಂತಹ, ಜೀವರುಗಳಿಗೆ ಅಲಭ್ಯವಾದಂತಹ, ವಸ್ತುಗಳಿಂದ ಬ್ರಹ್ಮ-ನಾರಾಯಣರು ಈಶ್ವರನನ್ನು ಪೂಜಿಸಿದರು. ಯಾವ ಯಾವ ಶಿವಯೋಗ್ಯವಾದ ವಸ್ತುಗಳಿವೆಯೋ ಅದೆಲ್ಲವನ್ನೂ ಅರ್ಪಿಸಿದರು.

ತದ್ವಸ್ತ್ವಖಿಲಮೀಶೋಽಪಿ ಪಾರಂಪರ್ಯಚಿಕೀರ್ಷಯಾ ।
ಸಭ್ಯಾನಾಂ ಪ್ರದದೌ ಹೃಷ್ಟಃ ಪೃಥಕ್ತತ್ರ ಯಥಾಕ್ರಮಂ ॥೭॥

೭ ಅವರು ಅರ್ಪಿಸಿದ ಎಲ್ಲಾ ವಸ್ತುಗಳನ್ನೂ ಸಹ ಎಲ್ಲೈ ಸಕಲರಿಗೆ ಹಿತನಾದ ಸನತ್ಕುಮಾರನೇ ಶಿವನು ಸತ್ಸಂಪ್ರದಾಯವನ್ನುಂಟು ಮಾಡಲು ಅಲ್ಲಿ ನೆರೆದಿದ್ದಂತಹ ದೇವತೆಗಳಿಗೆ ಬೇರೆ ಬೇರೆಯಾಗಿ ಕೊಟ್ಟನು.

ಕೋಲಾಹಲೋ ಮಹಾನಾಸೀತ್ತತ್ರ ತದ್ವಸ್ತು ಗೃಹ್ಣತಾಂ ।
ತತ್ರೈವ ಬ್ರಹ್ಮ ವಿಷ್ಣುಭ್ಯಾಂ ಚಾರ್ಚಿತಃ ಶಂಕರಃ ಪುರಾ ॥೮॥

೮ ಹಾಗೆ ಈಶ್ವರನು ವಸ್ತುಗಳನ್ನು ಕೊಡುವಾಗ ದೇವತೆಗಳು ತೆಗೆದುಕೊಳ್ಳುವಾಗ

ಬಹಳವಾದ ಕೋಲಾಹಲವು ನಡೆಯಿತು. ಅಲ್ಲೂ ಸಹ ಈಶ್ವರನು ಬ್ರಹ್ಮ-ವಿಷ್ಣುಗಳಿಂದ ಹಿಂದಿನಂತೆ ಅರ್ಚಿಸಲ್ಪಟ್ಟನು.

**ಪ್ರಸನ್ನಃ ಪ್ರಾಹ ತೌ ನಮ್ರೌ ಸಸ್ಮಿತಂ ಭಕ್ತಿವರ್ಧನಃ ।**
**॥ಈಶ್ವರ ಉವಾಚ॥**
**ತುಷ್ಟೋಽಹಮದ್ಯ ವಾಂ ವತ್ಸೌ ಪೂಜಯಾಸ್ಮಿನ್ ಮಹಾದಿನೇ ॥9॥**

೯ ಹೀಗೆ ಅರ್ಚಿಸಲ್ಪಟ್ಟ ಮೇಲೆ ಈಶ್ವರನು ಪ್ರಸನ್ನನಾಗಿ, ತಲೆಬಾಗಿ ನಿಂತಿರುವ ಬ್ರಹ್ಮ ವಿಷ್ಣುಗಳನ್ನು ಕುರಿತು ಮುಗುಳ್ನಗೆಗೂಡಿ ಹೀಗೆ ಹೇಳಿದನು.

**ದಿನಮೇತತ್ತತಃ ಪುಣ್ಯಂ ಭವಿಷ್ಯತಿ ಮಹತ್ತರಂ ।**
**ಶಿವರಾತ್ರಿರಿತಿ ಖ್ಯಾತಾ ತಿಥಿರೇಷಾ ಮಮ ಪ್ರಿಯಾ ॥೧೦॥**

೧೦ ಈಶ್ವರನು ಹೇಳಿದನು, ಎಲೈ ವತ್ಸರೇ ಈ ದಿನದಲ್ಲಿ ನೀವು ನನ್ನನ್ನು ಪೂಜಿಸಿದ್ದೀರಿ. ಇದರಿಂದ ನಾನು ಸಂತುಷ್ಟನಾಗಿರುವೆನು. ಈ ದಿನವು ಇನ್ನು ಮುಂದೆ ಪುಣ್ಯಕರವಾದ ಮಹಾದಿನವಾಗುವುದು. ಇಂದಿನ ತಿಥಿಯು (ಚತುರ್ದಶಿ) ನನಗೆ ಅತ್ಯಂತ ಪ್ರಿಯವಾಗಿ 'ಶಿವರಾತ್ರಿ' ಎಂದು ಪ್ರಸಿದ್ಧವಾಗುವುದು.

**ಏತತ್ಕಾಲೇತು ಯಃ ಕುರ್ಯಾತ್ಪೂಜಾಂ ಮಲ್ಲಿಂಗಬೇರಯೋಃ ।**
**ಕುರ್ಯಾತ್ಸ ಜಗತಃ ಕೃತ್ಯಂ ಸ್ಥಿತಿಸರ್ಗಾದಿಕಂ ಪುಮಾನ್ ॥೧೧॥**

೧೧ ಈ ಪವಿತ್ರತಮವಾದ ಶಿವರಾತ್ರಿ ದಿನದಲ್ಲಿ ಯಾವ ಮನುಷ್ಯನು ನನ್ನನ್ನು ಲಿಂಗದಲ್ಲಿಯಾಗಲೀ, ವಿಗ್ರಹದಲ್ಲಿಯಾಗಲೀ ಭಕ್ತಿಯಿಂದ ಪೂಜೆಯನ್ನು ಮಾಡುವನೋ ಅಂತಹ ಮನುಜನು ಜಗತ್ತಿನ ಸೃಷ್ಟಿ, ಪಾಲನೆ, ಸಂಹಾರ ಮುಂತಾದುವನ್ನು ಮಾಡುವನು. ಅರ್ಥಾತ್ ಈಶ್ವರ ಸ್ವರೂಪವನ್ನು ಹೊಂದುವನು.

**ಶಿವರಾತ್ರಾವಹೋರಾತ್ರಂ ನಿರಾಹಾರೋ ಜಿತೇಂದ್ರಿಯಃ ।**
**ಅರ್ಚಯೇದ್ವಾ ಯಥಾನ್ಯಾಯಂ ಯಥಾಬಲಮವಂಚಕಃ ॥೧೨॥**

೧೨ ಈ ಪುಣ್ಯತಮವಾದ ಶಿವರಾತ್ರಿಯ ದಿನ ಹಗಲು-ರಾತ್ರಿಯಲ್ಲೂ ಸಹ ಆಹಾರವನ್ನು ಸೇವಿಸದೇ ಇಂದ್ರಿಯ ನಿಗ್ರಹ ಉಳ್ಳವನಾಗಿ, ವಂಚನೆ ಇಲ್ಲದೇ ತನ್ನ

ಶಕ್ತಿಗೆ ತಕ್ಕಹಾಗೆ ವಿಧಿವತ್ತಾಗಿ ನನ್ನನ್ನು ಪೂಜಿಸಬೇಕು.

ಯತ್ಫಲಂ ಮಮ ಪೂಜಾಯಾಂ ವರ್ಷಮೇಕಂ ನಿರಂತರಂ ।
ತತ್ಫಲಂ ಲಭತೇ ಸದ್ಯಃ ಶಿವರಾತ್ರೌ ಮದರ್ಚನಾತ್ ॥೧೩॥

೧೩ ಈ ರೀತಿಯಾದ ಪೂಜೆಯು ಎಷ್ಟು ಪುಣ್ಯಪ್ರದವೆಂದರೆ, ವರ್ಷವೆಲ್ಲವೂ ನಿರಂತರವಾಗಿ ನನ್ನನ್ನು ಪೂಜಿಸಿದರೆ ಯಾವ ಫಲ ಉಂಟೋ ಅಂತಹ ಪುಣ್ಯವನ್ನು ಶಿವರಾತ್ರಿಯ ದಿನ ನನ್ನನ್ನು ಪೂಜಿಸುವಿಕೆಯಿಂದ ತಕ್ಷಣದಲ್ಲೇ ಹೊಂದುವನು.

ಮದ್ಧರ್ಮವೃದ್ಧಿಕಾಲೋಽಯಂ ಚಂದ್ರಕಾಲ ಇವಾಂಬುಧೇಃ ।
ಪ್ರತಿಷ್ಠಾದ್ಯುತ್ಸವೋ ಯತ್ರ ಮಾಮಕೋ ಮಂಗಲಾಯನಃ ॥೧೪॥

೧೪ ಎಲೈ ವತ್ಸರೇ, ಪ್ರಪಂಚದಲ್ಲಿ ಹೇಗೆ ಚಂದ್ರೋದಯ ಕಾಲವು ಸಮುದ್ರದ ಅಭಿವೃದ್ಧಿಗೆ ಕಾರಣವೋ ಹಾಗೆ ಈ ಪುಣ್ಯ ದಿನವು ನನ್ನ ಧರ್ಮವನ್ನು ಅಭಿವೃದ್ಧಿಗೊಳಿಸುವಂತಹದಾಗಿರುವುದು. ಈ ದಿನದಲ್ಲಿ ನನ್ನ ಪ್ರತಿಷ್ಠಾ, ಉತ್ಸವಗಳು ಮಂಗಳಕರಗಳಾಗಿವೆ.

ಯತ್ಪುನಃ ಸ್ತಂಭರೂಪೇಣ ಸ್ವಾವಿರಾಸಮಹಂ ಪುರಾ ।
ಸ ಕಾಲೋ ಮಾರ್ಗಶೀರ್ಷೇ ತು ಸ್ಯಾದ್ರಾ ರ್ಬುಯಕ್ಷಮರ್ಭಕೌ ॥೧೫॥

೧೫ ಯಾವ ಈ ದಿನದಲ್ಲಿ ನಿಮ್ಮ ಮುಂದೆ ಸ್ತಂಭರೂಪದಿಂದ ಅವಿರ್ಭವಿಸಿದೆನೋ ಆ ದಿನವು 'ಮಾರ್ಗ ಶೀರ್ಷಮಾಸದ ಆದ್ರ್ರಾ' ನಕ್ಷತ್ರವಾಗಿದೆ.

ಅದ್ರ್ರಾಯಾಂ ಮಾರ್ಗಶೀರ್ಷೇ ತು ಯಃ ಪಶ್ಯೇನ್ಮಾಮುಮಾಸಖಂ ।
ಮದ್ವೇರಮಪಿ ವಾ ಲಿಂಗಂ ಸ ಗುಹಾದಪಿ ಮೇ ಪ್ರಿಯಃ ॥೧೬॥

೧೬ ಈ ರೀತಿ ಪವಿತ್ರವಾದ 'ಮಾರ್ಗಶೀರ್ಷ ಮಾಸದ ಆದ್ರ್ರಾ ನಕ್ಷತ್ರದಲ್ಲಿ ಪಾರ್ವತಿ ಸಹಿತನಾದ ನನ್ನನ್ನು ಅಂದರೆ ನನ್ನ ಲಿಂಗ ರೂಪ ಅಥವಾ ವಿಗ್ರಹ ರೂಪದಲ್ಲಿ ದರ್ಶನ ಮಾಡುವನೋ ಅಂತಹವನು ನನಗೆ ಸುಬ್ರಹ್ಮಣ್ಯನಿಗಿಂತಲೂ ಪ್ರಿಯ'ನಾಗುವನು.

ಅಲಂ ದರ್ಶನಮಾತ್ರೇಣ ಫಲಂ ತಸ್ಮಿನ್ ಶುಭೇ ದಿನೇ ।
ಅಭ್ಯರ್ಚನಂ ಚೇದಧಿಕಂ ಫಲಂ ವಾಚಾಮಗೋಚರಂ ॥೧೭॥

೧೭ ಈ ದಿನದಲ್ಲಿ ಕೇವಲ ದರ್ಶನ ಮಾತ್ರದಿಂದ ಈ ರೀತಿ ಫಲವಿರುವಾಗ ವಿಶೇಷವಾಗಿ ಪೂಜಿಸಿದರೆ ಅದರ ಫಲವನ್ನು ಬಾಯಿ ಮಾತಿನಿಂದ ಹೇಳಲು ಸಾಧ್ಯವಿಲ್ಲ. ಅಂತಹ ಹೆಚ್ಚಿನ ಪುಣ್ಯಲಭ್ಯವಾಗುವುದು.

**ರಣರಂಗತಲೇಽಮುಷ್ಮಿನ್ ಯದಹಂ ಲಿಂಗಪರ್ವಣಾ ।**
**ಜೃಂಭಿತೋ ಲಿಂಗವತ್ತಸ್ಮಾಲ್ಲಿಂಗಸ್ಥಾನಮಿದಂ ಭವೇತ್ ।।18।।**

೧೮ ಈ ಬ್ರಹ್ಮ-ವಿಷ್ಣುಗಳ ಯುದ್ಧ ಭೂಮಿಯಲ್ಲಿ ಯಾವ ನಾನು ಲಿಂಗರೂಪವನ್ನು ತಾಳಿದೆನೋ ಅಂತಹ ಈ ಪ್ರದೇಶವು ಲಿಂಗ ಸ್ಥಾನವೆಂದು ಪ್ರಸಿದ್ಧಿಯಾಗಿ ವಿಜೃಂಭಿಸಲಿ.

**ಅನಾದ್ಯಂತಮಿದಂ ಸ್ತಂಭಮಣುಮಾತ್ರಂ ಭವಿಷ್ಯತಿ ।**
**ದರ್ಶನಾರ್ಥಂ ಹಿ ಜಗತಾಂ ಪೂಜನಾರ್ಥಂ ಹಿ ಪುತ್ರಕೌ ।।೧೯।।**

೧೯ ಎಲೈ ಪುತ್ರನೇ, ಆದಿ-ಅಂತ್ಯಗಳಿಲ್ಲದ ಈ ಸ್ತಂಭವು ಇನ್ನು ಮುಂದೆ ಜನಗಳು ದರ್ಶನ ಮಾಡುವುದಕ್ಕೂ, ಪೂಜಿಸುವುದಕ್ಕೂ ಅನುಕೂಲಕರವುಳ್ಳದ್ದಾಗಿ ಚಿಕ್ಕ ಸ್ವರೂಪ ಉಳ್ಳದ್ದಾಗುವುದು.

**ಭೋಗವಹಮಿದಂ ಲಿಂಗಂ ಭುಕ್ತಿಮುಕ್ತ್ಯೇಕಸಾಧನಂ ।**
**ದರ್ಶನಸ್ಪರ್ಶನಧ್ಯಾನಾಜ್ಜಂತೂನಾಂ ಜನ್ಮಮೋಚನಂ ।।೨೦।।**

೨೦ ಸಕಲ ಭೋಗಗಳನ್ನು ನೀಡುವಂತಹ ಈ ಲಿಂಗವು ಭುಕ್ತಿ-ಮುಕ್ತಿಗಳಿಗೆ ಸಾಧನವಾಗಿದೆ. ಈ ಲಿಂಗದ, ದರ್ಶನ, ಸ್ಪರ್ಶನ, ಧ್ಯಾನಗಳಿಂದ ಪ್ರಾಣಿಗಳಿಗೆ ಸಂಸಾರ ಬಂಧನದಿಂದ ಬಿಡುಗಡೆಯಾಗಿ ಮುಕ್ತಿಯು ದೊರಕುವುದು.

**ಅನಲಾಚಲಸಂಕಾಶಂ ಯದಿದಂ ಲಿಂಗಮುತ್ಥಿತಂ ।**
**ಅರುಣಾಚಲಮಿತ್ಯೇವ ತದಿದಂ ಖ್ಯಾತಿಮೇಷ್ಯತಿ ।।೨೧।।**

೨೧ ಅಗ್ನಿ ಪರ್ವತದಂತೆ ಕಾಂತಿಯುಳ್ಳ ಯಾವ ಈ ಲಿಂಗವು ಉದ್ಭವಿಸಿರುವುದು. ಆದ್ದರಿಂದ ಈ ಕ್ಷೇತ್ರವು 'ಅರುಣಾಚಲ' ಎಂಬ ಹೆಸರಿನಿಂದ ಪ್ರಸಿದ್ಧಿಯನ್ನು ಹೊಂದುವುದು.

**ಅತ್ರ ತೀರ್ಥಂ ಚ ಬಹುಧಾ ಭವಿಷ್ಯತಿ ಮಹತ್ತರಂ ।**
**ಮುಕ್ತಿರಷ್ಯತ್ರ ಜಂತೂನಾಂ ವಾಸೇನ ಮರಣೇನ ಚ ।।೨೨।।**

೨೨ ಈ ಕ್ಷೇತ್ರದಲ್ಲಿ ಮಹತ್ರವಾದ ಅನೇಕ ತೀರ್ಥಗಳು ಉದ್ಭವಿಸಸುವುವು. ಇಲ್ಲಿ ವಾಸ ಮಾಡಿದವರಿಗೂ ಮತ್ತು ಮರಣ ಹೊಂದಿದವರಿಗೂ ಮೋಕ್ಷವುಂಟಾಗುವುದು.

ರಥೋತ್ಸವಾದಿಕಲ್ಯಾಣಂ ಜನಾವಾಸಂ ತು ಸರ್ವತಃ ।
ಅತ್ರ ದತ್ತಂ ಹುತಂ ಜಪ್ತಂ ಸರ್ವಂ ಕೋಟಿಗುಣಂ ಭವೇತ್ ॥೨೩॥

೨೩ ಇಲ್ಲಿ ಎಲ್ಲೆಡೆಯಲ್ಲಿಯೂ ರಥೋತ್ಸವಾದಿಯಾದ ಎಲ್ಲಾ ಮಂಗಳ ಕಾರ್ಯಗಳೂ ಜರುಗುವುವು.. ಎಲ್ಲೆಡೆ ಜನಗಳು ವಾಸಿಸುವರು ಇಲ್ಲಿ ದಾನ ಮಾಡಿದ್ದೂ ಹೋಮ ಮಾಡಿದ್ದೂ ಸಹ ಕೋಟಿಯಷ್ಟು ಅಧಿಕ ಫಲವುಳ್ಳದ್ದಾಗುವುದು.

ಮತ್ಕ್ಷೇತ್ರಾದಪಿ ಸರ್ವಸ್ಮಾತ್ ಕ್ಷೇತ್ರಮೇತನ್ಮಹತ್ತರಂ ।
ಅತ್ರ ಸಂಸ್ಮೃತಿಮಾತ್ರೇಣ ಮುಕ್ತಿರ್ಭವತಿ ದೇಹಿನಾಂ ॥೨೪॥

೨೪ ನನ್ನ ಎಲ್ಲಾ ಕ್ಷೇತ್ರ (ಶಿವಕ್ಷೇತ್ರ)ಗಳಿಗಿಂತಲೂ ಇಲ್ಲಿ ಅಂದರೆ ಈ ಕ್ಷೇತ್ರವು ಮಹತ್ತರವಾದುದಾಗುತ್ತದೆ. ಈ ಕ್ಷೇತ್ರದ ಸ್ಮರಣ ಮಾತ್ರದಿಂದಲೇ ದೇಹಿಗಳಿಗೆ ಮುಕ್ತಿಯುಂಟಾಗುವುದು.

ತಸ್ಮಾನ್ಮಹತ್ತರಮಿದಂ ಕ್ಷೇತ್ರಮತ್ಯಂತಶೋಭನಂ ।
ಸರ್ವಕಲ್ಯಾಣಸಂಪೂರ್ಣಂ ಸರ್ವಮುಕ್ತಿಕರಂ ಶುಭಂ ॥೨೫॥

೨೫ ಆದ್ದರಿಂದ ಈ ಕ್ಷೇತ್ರವು ಅತ್ಯಂತ ಶ್ರೇಷ್ಠವೆನಿಸುವುದು. ಮತ್ತು ಅತ್ಯಂತ ಶುಭಕರವಾಗಿರುವುದು. ಎಲ್ಲಾ ಮಂಗಳಗಳೂ ಈ ಕ್ಷೇತ್ರದಲ್ಲಿ ನೆಲಸಿರುವುವು. ಎಲ್ಲರಿಗೂ ಈ ಕ್ಷೇತ್ರದಲ್ಲಿ ಮುಕ್ತಿಯು ಲಭಿಸುವುದು.

ಅರ್ಚಯತ್ವಾತ್ರ ಮಾಮೇವ ಲಿಂಗೇ ಲಿಂಗಿನಮೀಶ್ವರಂ ।
ಸಾಲೋಕ್ಯಂ ಚೈವ ಸಾಮೀಪ್ಯಂ ಸಾರೂಪ್ಯಂ ಸಾರ್ಷ್ಟಿರೇವ ಚ ॥೨೬॥

೨೬ ಈ ಕ್ಷೇತ್ರದಲ್ಲಿ ಲಿಂಗರೂಪವಾದ ನನ್ನನ್ನು ಹಾಗೂ ಲಿಂಗಾಭಿಮಾನಿಯಾದ ನನ್ನನ್ನು ಒಡೆಯನಾದ ನನ್ನನ್ನು ಪೂಜಿಸಿದರೆ ಸಾಲೋಕ್ಯ, ಆತನ ಸಮೀಪ, ಆತನದೇ ರೂಪ, ಆತನ ಸಮಾನ ವೈಭವವು ದೊರಕುವುದು.

ವಿ.ವಿ. :- ಇಲ್ಲಿ ಐದು ವಿಧವಾದ ಮೋಕ್ಷವು ವಿವರಿಸಿದೆ. ಅದಾವುದೆಂದರೆ

(1)ಸಾಲೋಕ್ಯ, (2) ಸಾಮೀಪ್ಯ, (3)ಸಾರೂಪ್ಯ, (4)ಸಾಷ್ಟಿೀ, (5)ಸಾಯುಜ್ಯ.

(1) ಸಾಲೋಕ್ಯ, ಎಂದರೆ ಪರಮೇಶ್ವರನನ್ನು ಹೊಂದುವಿಕೆ,

(2)ಸಾಮೀಪ್ಯ, ಎಂದರೆ ಹತ್ತಿರದಿಂದ ಶಿವನ ಸಂಬಂಧ,

(3)ಸಾರೂಪ್ಯ, ಎಂದರೆ ಶಿವನದೇ ರೂಪ ಹೊಂದುವುದು,

(4)ಸಾಷ್ಟಿೀ, ಎಂದರೆ ಶಿವನ ಸಮಾನವಾದ ಗೌರವಾದಿಗಳನ್ನು ಹೊಂದುವುದು,

(5)ಸಾಯುಜ್ಯ, ಎಂದರೆ ಶಿವನಲ್ಲೇ ಸೇರಿ ಹೋಗುವಂತಹ ಮೋಕ್ಷ.

**ಸಾಯುಜ್ಯಮಿತಿ ಪಂಚೈತೇ ಕ್ರಿಯಾದೀನಾಂ ಫಲಂ ಮತಂ ।**
**ಸರ್ವೇಽಪಿ ಯೂಯಂ ಸಕಲಂ ಪ್ರಾಪ್ಯಥಾಽಶು ಮನೋರಥಂ ॥27॥**

೨೭ ಅವನಲ್ಲಿಯೇ ಸೇರಿ ಹೋಗುವಂತಹ ಐದು ವಿಧವಾದ ಮೋಕ್ಷಗಳ ಈ ಕ್ಷೇತ್ರದ ಶಿವನ ಸೇವೆಯಿಂದ ಲಭ್ಯವಾಗುತ್ತದೆ. ಎಲೈ ಬ್ರಹ್ಮ, ವಿಷ್ಣು ದೇವತೆಗಳಿರಾ ನೀವು ಸಹ ಈ ಲಿಂಗದಲ್ಲಿ ನನ್ನನ್ನು ಪೂಜಿಸಿ ಬೇಗನೆ ನಿಮ್ಮ ಇಷ್ಟಾರ್ಥವನ್ನು ಹೊಂದಿರಿ.

**॥ನಂದಿಕೇಶ್ವರ ಉವಾಚ॥**
**ಇತ್ಯನುಗೃಹ್ಯ ಭಗವಾನ್ ವಿನೀತೌ ವಿಧಿಮಾಧವೌ ।**
**ಯತ್ಪೂರ್ವಂ ಪ್ರಹತಂ ಯುದ್ಧೇ ತಯೋಃ ಸೈನ್ಯಂ ಪರಸ್ಪರಂ ॥೨೮॥**

ನಂದಿಕೇಶ್ವರನು ಹೇಳುತ್ತಾನೆ.

೨೮ ಈ ರೀತಿಯಾಗಿ ವಿನೀತರಾದ ಬ್ರಹ್ಮ-ವಿಷ್ಣುಗಳನ್ನು ಶಿವನು ಅನುಗ್ರಹಿಸಿ, ನಂತರ ಅವರಿಬ್ಬರ ಯುದ್ಧದಲ್ಲಿ ಮಡಿದಿರುವಂತಹ ಪರಸ್ಪರ ಅವರಿಬ್ಬರ ಸೈನ್ಯವನ್ನು,

**ತದುತ್ಥಾಪಯದತ್ಯರ್ಥಂ ಸ್ವಶಕ್ತ್ಯಾಽಮೃತಧಾರಯಾ ।**
**ತಯೋರ್ಮೌಢ್ಯಂ ಚ ವೈರಂ ಚ ವ್ಯಪನೇತುಮುವಾಚ ತೌ ॥೨೯॥**

೨೯ ತನ್ನ ವಿಶೇಷ ಶಕ್ತಿಯೆಂಬ ಅಮೃತಧಾರೆಯಿಂದ ಬದುಕಿಸಿದನು. ಅನಂತರ ಅವರಿಬ್ಬರ ಮೌಢ್ಯವನ್ನು ವೈರವನ್ನೂ ಹೋಗಲಾಡಿಸಲು ಹೀಗೆ ಹೇಳಿದನು.

**ಸಕಲಂ ನಿಷ್ಕಲಂ ಚೇತಿ ಸ್ವರೂಪದ್ವಯಮಸ್ತಿ ಮೇ ।**
**ನಾನ್ಯಸ್ಯ ಕಸ್ಯಚಿತ್ತಸ್ಮಾದನ್ಯಃ ಸರ್ವೋಽಪ್ಯನೀಶ್ವರಃ ॥30॥**

೩೦ ಎಲೈ ಬ್ರಹ್ಮ-ವಿಷ್ಣುಗಳಿರಾ ನನಗೆ ಸಕಲ-ನಿಷ್ಕಲವೆಂಬ ಎರಡು ರೂಪಗಳಿವೆ. ಅಂದರೆ ಆಕಾರಸಹಿತವಾಗಿರುವುದು, ಮತ್ತು ಆಕಾರವಿಲ್ಲದಿರುವುದು, ಇನ್ಯಾರಿಗೂ ಈ ರೀತಿಯಾದ ಎರಡು ರೂಪಗಳಿಲ್ಲ. ಆದ್ದರಿಂದ ಉಳಿದವರೆಲ್ಲಾ ಅನೀಶ್ವರರು, ಈಶ್ವರರಲ್ಲ.

ಪುರಸ್ತಾತ್ಸ್ತಂಭರೂಪೇಣ ಪಶ್ಚಾದ್ರೂಪೇಣ ಚಾರ್ಭಕೌ ।
ಬ್ರಹ್ಮತ್ವಂ ನಿಷ್ಕಲಂ ಪ್ರೋಕ್ತಮೀಶತ್ವಂ ಸಕಲಂ ತಥಾ ॥೩೧॥

೩೧ ಮೊದಲಿಗೆ ಎಲೈ, ವತ್ಸರೇ ನನ್ನ ನಿರಾಕಾರವಾದ ಸ್ತಂಭರೂಪವು ನಿಮಗೆ ತೋರಲ್ಪಟ್ಟಿತು. ನಂತರ ಸಾಕಾರವಾದ ಈ ನನ್ನ ರೂಪವು ತೋರಲ್ಪಟ್ಟಿತು.

ದ್ವಯಂ ಮಮೈವ ಸಂಸಿದ್ಧಂ ನ ಮದನ್ಯಸ್ಯ ಕಸ್ಯಚಿತ್ ।
ತಸ್ಮಾದೀಶತ್ವಮನ್ಯೇಷಾಂ ಯುವಯೋರಪಿ ನ ಕ್ವಚಿತ್ ॥೩೨॥

೩೨ ಈ ಎರಡೂ ಆಕಾರ-ನಿರಾಕಾರಗಳು ನನಗೆ ಮಾತ್ರ ಸಿದ್ಧವಾದುದು, ಇನ್ಯಾರಿಗೂ ಸಹ ಇಲ್ಲ. ಆದ್ದರಿಂದ ಈಶ್ವರತ್ವವೆಂಬುದೂ ಸಹ ನನಗೆ ಮಾತ್ರ ಸಿದ್ಧವು. ಇದಲ್ಲದೇ ನಿಮ್ಮಿಬ್ಬರಿಗಾಗಲಿ ಅಥವಾ ಉಳಿದಂತಹ ದೇವತೆಗಳಿಗಾಗಲೀ ಇಲ್ಲ.

ತದಜ್ಞಾನೇನ ವಾಂ ವೃತ್ತಮೀಶಮಾನಂ ಮಹಾದ್ಭುತಂ ।
ತನ್ನಿರಾಕರ್ತುಮತ್ರೈವಮುತ್ಥಿತೋಽಹಂ ರಣಕ್ಷಿತೌ ॥೩೩॥

೩೩ ಆದ್ದರಿಂದ ಈ ನನ್ನ ತತ್ವವನ್ನು ನೀವುಗಳು ತಿಳಿಯದೇ ನಾನೇ ಈಶ್ವರನು, ನಾನೇ ಈಶ್ವರನು ಎಂದು ಅಜ್ಞಾನದಿಂದ ವಿಜೃಂಭಿಸಿದಿರಿ. ಆದ್ದರಿಂದ ಈ ರೀತಿಯಾದ ನಿಮ್ಮ ಭಾವನೆಯನ್ನು ದೂರ ಮಾಡಲು ನಾನೇ ರಣಭೂಮಿಯಲ್ಲಿ ಅವಿರ್ಭವಿಸಿದೆನು.

ತ್ಯಜ ತಂ ಮಾನಮಾತ್ಮೀಯಂ ಮಯೀಶೇ ಕುರು ತಂ ಮತಿಂ ।
ಮತ್ಪ್ರಸಾದೇನ ಲೋಕೇಷು ಸರ್ವೋಽಪ್ಯರ್ಥಃ ಪ್ರಕಾಶತೇ ॥೩೪॥

೩೪ ಆದ್ದರಿಂದ ಈ ರೀತಿಯಾದ ದುರ್ಭಾವನೆಯನ್ನು ಬಿಡಿರಿ. ನಾನೇ ಈಶ್ವರನೆಂಬ ಬುದ್ಧಿಯನ್ನು ಹೊಂದಿರಿ. ನನ್ನ ಅನುಗ್ರಹದಿಂದಲೇ ಲೋಕಗಳಲ್ಲಿ ಎಲ್ಲವೂ ಪ್ರಕಾಶಿಸುತ್ತಿರುವುದು. ನನ್ನ ಅನುಗ್ರಹವಿಲ್ಲದೇ ಯಾವುದೂ ಸಹ ಪ್ರಕಾಶಿಸುವುದಿಲ್ಲವು.

ವಿ.ವಿ. :- ಇಲ್ಲಿ ಮೇಲಿನ ಶ್ಲೋಕದ 'ಮತ್ಪ್ರಸಾದೇನ ಲೋಕೇಷು ಸರ್ವೋಽಪ್ಯರ್ಥಃ ಪ್ರಕಾಶತೇ' ಎಂಬ ಪಾದದಿಂದ ಶ್ರುತಿ ವಾಕ್ಯವೂ ಸಹ ಹೊಂದುತ್ತದೆ. ಉದಾ:- 'ಭೀಷಾಸ್ಮಾದ್ವಾತಃಪವತೇ' ಇತ್ಯಾದಿಗಳು. ಅಂದರೆ ಅವನ ಒಂದು ಭಯದಿಂದಲೇ ಗಾಳಿಯು ಬೀಸುತ್ತದೆ. ಸೂರ್ಯನು ಉದಯಿಸುತ್ತಾನೆ. ಇತ್ಯಾದಿಗಳು. ತೈತ್ತರೀಯುಪನಿಷತ್ತಿನ ವಾಕ್ಯಗಳು, ಶ್ರೀಕಂಠಚಾರ್ಯರೂ ಸಹ ತಮ್ಮ ಶ್ರೀಕಂಠಭಾಷ್ಯದಲ್ಲಿ, ಭವಾನಿ ಶಬ್ದಗಳ ವಿವರಣೇ ನೀಡುತ್ತಾ ಭೀಮ, ಎಂಬ ಶಬ್ದಕ್ಕೆ ನಿಯಂತ್ರಿಸುವ ಎಂದು ಹೇಳಿ ಶ್ರುತಿ ಉದಾಹರಣೆಯನ್ನು 'ಭೀಷಾಸ್ಮಾದ್ವಾತಃಪವತೆ' ಇತ್ಯಾದಿಗಳನ್ನು ಕೊಟ್ಟಿರುತ್ತಾರೆ. ಎಂದರೆ ಅವನ ಆಜ್ಞೆ ಇಲ್ಲದೇ ಯಾವುದೂ ಸಹ ಕಾರ್ಯಪ್ರವೃತ್ತವಾಗಲಾರದು ಎಂದರ್ಥ.

ಗುರೂಕ್ತಿರ್ವ್ಯಂಜಕಂ ತತ್ರ ಪ್ರಮಾಣಂ ವಾ ಪುನಃ ಪುನಃ ।
ಬ್ರಹ್ಮತತ್ತ್ವಮಿದಂ ಗೂಢಂ ಭವತ್ಪ್ರೀತ್ಯಾ ಭಣಾಮ್ಯಹಂ ॥೩೫॥

೩೫ ಗುರುವಿನ ಉಕ್ತಿಯೇ ಇದಕ್ಕೆ ಪ್ರಮಾಣವು. ಬ್ರಹ್ಮ ತತ್ವವನ್ನು ತಿಳಿಯಲು ಗುರುವಿನ ಉಪದೇಶವೇ ಅತ್ಯಗತ್ಯವಾದದು. ಈ ಬ್ರಹ್ಮ ತತ್ವವು ಅತ್ಯಂತ ಗೋಪ್ಯವಾದುದು ಇಂತಹ ಬ್ರಹ್ಮ ವಿಚಾರವನ್ನು ನಿಮ್ಮ ಮೇಲಿನ ಪ್ರೀತಿಯಿಂದ ಹೇಳುತ್ತೇನೆ, ಕೇಳಿ.

ಅಹಮೇವ ಪರ ಬ್ರಹ್ಮ ಮತ್ಸ್ವರೂಪಂ ಕಲಾಕಲಂ ।
ಬ್ರಹ್ಮತ್ವಾದೀಶ್ವರಶ್ಚಾಹಂ ಕೃತ್ಯಂ ಮೇಽನುಗ್ರಹಾದಿಕಂ ॥೩೬॥

೩೬ ನಾನೇ ಪರಬ್ರಹ್ಮನು. ನನ್ನ ಸ್ವರೂಪವೂ ಸಹ ಈ ಹಿಂದೆ ಹೇಳಿದಂತೆ ಸಕಲ-ನಿಷ್ಕಲ ರೂಪವುಳ್ಳದ್ದಾಗಿರುವುದು. ಬ್ರಹ್ಮತ್ವವೂ, ಈಶ್ವರತ್ವವೂ ನನ್ನಲ್ಲಿರುವುದರಿಂದ ಅನುಗ್ರಹಾದಿಗಳನ್ನು ಮಾಡುವ ಕ್ರಿಯೆಯು ನನ್ನದೇ ಆಗಿರುವುದು.

ಬೃಹತ್ವಾದ್ಬೃಂಹಣತ್ವಾಚ್ಚ ಬ್ರಹ್ಮಾಹಂ ಬ್ರಹ್ಮಕೇಶವೌ ।
ಸಮತ್ವಾದ್ವ್ಯಾಪಕತ್ವಾಚ್ಚ ತಥೈವಾತ್ಮಾಹಮರ್ಭಕೌ ॥೩೭॥

೩೭ ಎಲೈ ಬ್ರಹ್ಮ-ವಿಷ್ಣುಗಳೇ, ದೊಡ್ಡ ಸ್ವರೂಪವುಳ್ಳವನೂ (ನಿರಾಕಾರಿಯೂ) ಮನುಷ್ಯಾದಿ ಎಲ್ಲಾ ಶರೀರದಲ್ಲೂ ವ್ಯಾಪಿಸಿ, ಸರ್ವಸಮನಾದ್ದರಿಂದಲೂ ನಾನೇ ಆತ್ಮಸ್ವರೂಪನು.

**ಅನಾತ್ಮಾನಃ ಪರೇ ಸರ್ವೇ ಜೀವಾ ಏವ ನ ಸಂಶಯಃ ।**
**ಅನುಗ್ರಹಾದ್ಯಂ ಸರ್ಗಾಂತಂ ಜಗತ್ಕೃತ್ಯಂ ಚ ಪಂಚಕಂ ॥೩೮॥**

೩೮ ಉಳಿದವರೆಲ್ಲರೂ ಅನಾತ್ಮರು, ಜೀವರು ಇದರಲ್ಲಿ ಸಂಶಯವಿಲ್ಲ. ಅನುಗ್ರಹದಿಂದ ಪ್ರಾರಂಭಿಸಿ ಸೃಷ್ಟಿಯವರೆವಿಗೆ ಐದು ಕೃತ್ಯಗಳು ನನಗೇ ನಿತ್ಯವಾದದ್ದಾಗಿದೆ.

ವಿ.ವಿ.:- ಈಶ್ವರನಿಗೆ ಐದು ಕಾರ್ಯಗಳು. (1)ಸೃಷ್ಟಿ, (೨. ಸ್ಥಿತಿ, (3)ಲಯ, (4)ತಿರೋಭಾವ, (5)ಅನುಗ್ರಹ ಎಂದು ಜಗತ್ತಿನ, ಜೀವರುಗಳ 'ಉತ್ಪತ್ತಿ' ನಂತರ ಅವುಗಳ 'ಪಾಲನೆ' ಮತ್ತು ಅದಕ್ಕೆ ಬೇಕಾದ ಅನುಕೂಲತೆಗಳನ್ನು ಒದಗಿಸುವುದು. ನಂತರ 'ಲಯಕಾರ್ಯ' ಅರ್ಥಾತ್ ನಾಶಪಡಿಸುವಿಕೆ. ತದನಂತರ ಜೀವಿಗಳ ಮೇಲಿನ ಕರುಣೆಯಿಂದ 'ಅನುಗ್ರಹ' ಮಾಡಲು 'ಪುನರುತ್ಪತ್ತಿ'ಯೆಂಬ 'ತಿರೋಧಾನ'ಕಾರ್ಯ. ಜೀವರಿಗೆ 'ಅನುಗ್ರಹ' ಮಾಡಿ 'ಮೋಕ್ಷ' ಕೊಡುವುದು. ಹೀಗೆ 'ಈಶ್ವರನ ಕೃತ್ಯಗಳು ಐದಾ'ಗಿವೆ.

**ಈಶತ್ವಾದೇವ ಮೇ ನಿತ್ಯಂ ನ ಮದನ್ಯಸ್ಯ ಕಸ್ಯಚಿತ್ ।**
**ಆದೌ ಬ್ರಹ್ಮತ್ವಬುದ್ಧ್ಯರ್ಥಂ ನಿಷ್ಕಲಂ ಲಿಂಗಮುತ್ಥಿತಂ ॥೩೯॥**

೩೯ ನನಗೆ ಈಶತ್ವವಿರುದದರಿಂದ ಮತ್ತು ಅದು ನನಗೆ ನಿತ್ಯವಾದ್ದರಿಂದ ನನಗಲ್ಲದೇ ಬೇರಾರಿಗೂ ಇಂತಹ ವಿಶೇಷ ಶಕ್ತಿ ಇರುವುದಿಲ್ಲ. ಆದ್ದರಿಂದಲೇ ನಾನೇ ಬ್ರಹ್ಮನೆಂಬ ತಿಳುವಳಿಕೆಗಾಗಿ ನಿಷ್ಕಲ ಅಂದರೆ ನಿರಾಕಾರ ರೂಪವಾದ ಲಿಂಗರೂಪದಿಂದ ಅವಿರ್ಭವಿಸಿದೆನು.

**ತಸ್ಮಾದಜ್ಞಾತಮೀಶತ್ವಂ ವ್ಯಕ್ತಂ ದ್ಯೋತಯಿತುಂ ಹಿ ವಾಂ ।**
**ಸಕಲೋಽಹಮತೋ ಜಾತಃ ಸಾಕ್ಷಾಧೀಶಸ್ತು ತತ್ಕ್ಷಣಾತ್ ॥೪೦॥**

೪೦ ಆಮೇಲೆ ಯಾರಿಗೂ ತಿಳಿಯದ ನನ್ನ ಈಶ್ವರ ಭಾವವನ್ನು ನಿಮ್ಮಗಳಿಗೆ ತೋರಿಸುವುದಕ್ಕಾಗಿ ಸಾಕಾರ ರೂಪವನ್ನು ಧರಿಸಿ ಕ್ಷಣದಲ್ಲೇ ನಿಮ್ಮೆದುರಿಗೆ ಆವಿರ್ಭಾವಿಸಿದೆನು. ಆದ್ದರಿಂದ ಸಾಕಾರದ ಈಶ್ವರತ್ವವೂ ನನ್ನಲ್ಲಿರುವುದೆಂದು ತಿಳಿಯಬೇಕು.

ಸಕಲತ್ವಮತೋ ಜ್ಞೇಯಮೀಶತ್ವಂ ಮಯಿ ಸತ್ವರಂ |
ಯದಿದಂ ನಿಷ್ಕಲಂ ಸ್ತಂಭಂ ಮಮ ಬ್ರಹ್ಮತ್ವಬೋಧಕಂ ||೪೧||

೪೧ ನನ್ನಲ್ಲಿ [illegible] ಈಶತ್ವವೂ ಇರುವುದೆಂದು ತಿಳಿಸಲು ಕೂಡಲೇ ನಾನ ಪ್ರತ್ಯಕ್ಷನಾದೆನು. ಯಾವ ಈ ನಿಷ್ಕಲವಾದ ಸ್ತಂಭ ರೂಪವಿರುವುದೋ ಇದು ನನ್ನ [illegible] ಬ್ರಹ್ಮ ವಿಷಯ ಜ್ಞಾನವಾಗಿದೆ.

ಲಿಂಗಲಕ್ಷಣಯುಕ್ತತ್ವಾನ್ಮಮ ಲಿಂಗಂ ಭವೇದಿದಂ |
ತದಿದಂ ನಿತ್ಯಮಭ್ಯರ್ಚ್ಯ ಯುವಾಭ್ಯಾಮತ್ರ ಪುತ್ರಕೌ ||೪೨||

೪೨ ನನ್ನ ಬ್ರಹ್ಮತ್ವ [illegible]ವಾದ ಈ ನಿರಾಕಾರ ಬ್ರಹ್ಮತ್ವ (ಸ್ತಂಭವು) ಲಿಂಗ ಲಕ್ಷಣವುಳ್ಳದ್ದಾದ್ದರಿಂದ ಇದು ಲಿಂಗವಾಗುವುದು. ಎಲೈ ಪುತ್ರನೇ ಇದನ್ನು ನೀವು ನಿತ್ಯದಲ್ಲಿಯೂ ಅರ್ಚಿಸಿರಿ.

ಮದಾತ್ಮಕಮಿದಂ ನಿತ್ಯಂ ಮಮ ಸಾನ್ನಿಧ್ಯಕಾರಣಂ |
ಮಹತ್ಪೂಜ್ಯಮಿದಂ ನಿತ್ಯಮಭೇದಾಲ್ಲಿಂಗಲಿಂಗಿನೋಃ ||೪೩||

೪೩ ಈ ಲಿಂಗವು ನನ್ನ ಸ್ವರೂಪವುಳ್ಳದ್ದಾಗಿರುವುದು. ಯಾವಾಗಲೂ ಇದರಲ್ಲಿ ನನ್ನ [illegible]. ಇಲ್ಲಿ ಲಿಂಗಾಧಿಷ್ಠಾಯಿಯಾದ ನಾನೇ ಈಶ್ವರನು ಎಂಬ [illegible] ಈ [illegible]ಲಿಂಗವನ್ನು ಪೂಜಿಸಬೇಕು.

ಯತ್ರ ಪ್ರತಿಷ್ಠಿತಂ ಯೇನ ಮದೀಯಂ ಲಿಂಗಮೀದೃಶಂ |
ತತ್ರ ಪ್ರತಿಷ್ಠಿತಃ ಸೋಽಹಮಪ್ರತಿಷ್ಠೋಽಪಿ ವತ್ಸಕೌ ||೪೪||

೪೪ ಎಲ್ಲೆಲ್ಲಿ ಈ [illegible] ಲಿಂಗವು ಯಾರಿಂದ ಪ್ರತಿಷ್ಠಾಪಿಸಲ್ಪಡುವುದೋ ಅಲ್ಲಿ ನಾನು ಪ್ರ[illegible]. ನಾನು ಒಂದೆಡೆ ಮಾತ್ರ ಇರುವವನಲ್ಲವಾದರೂ ಎಲ್ಲೆಡೆ [illegible] ಹೀಗೆ ಪ್ರತಿಷ್ಠಾಪಿಸಿದ ಲಿಂಗದಲ್ಲಿ ವಿಶೇಷ ಸಾನ್ನಿಧ್ಯ [illegible] ತಾತ್ಪರ್ಯ.

ಮತ್ಸಾಮ್ಯಮೇಕಲಿಂಗಸ್ಯ ಸ್ಥಾಪನೇ ಫಲಮೀರಿತಂ |
ದ್ವಿತೀಯೇ ಸ್ಥಾಪಿತೇ ಲಿಂಗೇ ಮದೈಕ್ಯಂ ಫಲಮೇವ ಹಿ ||೪೫||

೪೫ ಒಂದು ಈ ರೀತಿಯಾದ ಲಿಂಗವನ್ನು ಸ್ಥಾಪಿಸಿದ್ದೇ ಆದರೆ ನನ್ನ ಸಮಾನತೆಯು ಲಭಿಸುವುದು. ಎರಡು ಲಿಂಗವನ್ನು ಸ್ಥಾಪಿಸಿದ್ದೇ ಆದರೆ ನನ್ನಲ್ಲೇ ಐಕ್ಯನಾಗುವನು. ಇದೇ ಫಲವು.

**ಲಿಂಗಂ ಪ್ರಾಧಾನ್ಯತಃ ಸ್ಥಾಪ್ಯಂ ತಥಾ ಬೇರಂ ತು ಗೌಣಕಂ |**

**ಲಿಂಗಾಭಾವೇನ ತತ್ಕ್ಷೇತ್ರಂ ಸಬೇರಮಪಿ ಸರ್ವತಃ ||೪೬||**

೪೬ ಲಿಂಗವನ್ನು ಪ್ರಧಾನವಾಗಿ ಸ್ಥಾಪಿಸಬೇಕು. ವಿಗ್ರಹವು ಗೌಣ ಎಂದರೆ ಲಿಂಗ ಪ್ರತಿಷ್ಠೆಯಷ್ಟು ಶ್ರೇಷ್ಠವಲ್ಲ. ವಿಗ್ರಹವನ್ನು ಸ್ಥಾಪಿಸಿದ ಕ್ಷೇತ್ರವು. ಲಿಂಗವಿಲ್ಲದಿದ್ದರೆ ಅಷ್ಟೊಂದು ಶ್ರೇಷ್ಠ ವಲ್ಲ. ಲಿಂಗ ಪ್ರತಿಷ್ಠೆಯುಳ್ಳ ಕ್ಷೇತ್ರವೇ ಶ್ರೇಷ್ಠ ವಾದುದು.

**ಇತಿ ಶ್ರೀ ಶಿವಮಹಾಪುರಾಣೇ ವಿದ್ಯೇಶ್ವರ ಸಂಹಿತಾಯಾಂ ನವಮೋಽಧ್ಯಾಯಃ**

**ಇಲ್ಲಿಗೆ ಶ್ರೀ ಶಿವಪುರಾಣದಲ್ಲಿ ವಿದ್ಯೇಶ್ವರ ಸಂಹಿತೆಯಲ್ಲಿ**

**ಒಂಭತ್ತನೇ ಅಧ್ಯಾಯವು ಮುಗಿದುದು.**

||ಶ್ರೀಃ||
||ಓಂ ನಮಃ ಶಿವಾಯ||
ಅಥ ಶ್ರೀ ಶಿವಮಹಾಪುರಾಣೇ
ವಿದ್ಯೇಶ್ವರಸಂಹಿತಾಯಾಂ

# ದಶಮೋಽಧ್ಯಾಯಃ

## ಹತ್ತನೆಯ ಅಧ್ಯಾಯವು

||ಬ್ರಹ್ಮವಿಷ್ಣೂ ಊಚತುಃ||
ಸರ್ಗಾದಿಪಂಚಕೃತ್ಯಸ್ಯ ಲಕ್ಷಣಂ ಬ್ರೂಹಿ ನೋ ಪ್ರಭೋ।
||ಶಿವ ಉವಾಚ||
ಮತ್ಕೃತ್ಯಬೋಧನಂ ಗುಹ್ಯಂ ಕೃಪಯಾ ಪ್ರಬ್ರವೀಮಿ ವಾಂ ||೧||

೧ ಬ್ರಹ್ಮವಿಷ್ಣುಗಳು ಹೇಳಿದರು:- ಓ! ಪ್ರಭುವೇ! ಸೃಷ್ಟಿಯೇ ಮೊದಲಾದ ನಿನ್ನ ಐದು ಕೃತ್ಯಗಳನ್ನು ನಮಗೆ ಹೇಳು ಎಂದರು. ಆಗ ಶಿವನು ಹೇಳುತ್ತಾನೆ:- ಎಲೈ ಬ್ರಹ್ಮ-ವಿಷ್ಣುಗಳಿರಾ, ನನ್ನ ಅತಿಗೋಪ್ಯವಾದ ಪಂಚಕೃತ್ಯಗಳನ್ನು ನಿಮ್ಮಗಳ ಮೇಲಿನ ಕೃಪಾದೃಷ್ಟಿಯಿಂದ ಹೇಳುವೆನು.

ಸೃಷ್ಟಿಃ ಸ್ಥಿತಿಶ್ಚ ಸಂಹಾರಸ್ತಿರೋಭಾವೋಽಪ್ಯನುಗ್ರಹಃ।
ಪಂಚೈವ ಮೇ ಜಗತ್ಕೃತ್ಯಂ ನಿತ್ಯಸಿದ್ಧಮಹಾಚ್ಯುತೌ ||೨||

೨ ಎಲೈ ಬ್ರಹ್ಮ-ವಿಷ್ಣುಗಳಿರಾ ಸೃಷ್ಟಿ, ಸ್ಥಿತಿ, ಸಂಹಾರ, ನಿಗ್ರಹ, (ತಿರೋಭಾವ) ಅನುಗ್ರಹ ಎಂಬಿವೆ ನನ್ನ ಐದು ಕೃತ್ಯಗಳು. ಇವು ನನಗೆ ನಿತ್ಯ ಸಿದ್ಧವಾದವು ಎಂದರೆ ಯಾವಾಗಲೂ ನನ್ನಲ್ಲಿರುವ ಕೃತ್ಯಗಳು.

ಸರ್ಗಃ ಸಂಸಾರಸಂರಂಭಸ್ತತ್ಪ್ರತಿಷ್ಠಾ ಸ್ಥಿತಿರ್ಮತಾ।
ಸಂಹಾರೋ ಮರ್ದನಂ ತಸ್ಯ ತಿರೋಭಾವಸ್ತದುತ್ಕ್ರಮಃ ||೩||

೩ ಸಂಸಾರದ ಆರಂಭವೇ (ಜಗತ್ತಿನಲ್ಲಿ ಅಥವಾ ಜಗತ್ತು) ಅಂದರೆ ಅದರಲ್ಲಿ ಪ್ರವರ್ತಿಸುವುದೇ ಮೊದಲನೆಯದಾದ 'ಸೃಷ್ಟಿ'ಕಾರ್ಯವು. ಪ್ರವರ್ತಿಸಿದ ಜಗತ್ತು ಅಂದರೆ ಸಂಸಾರವು ಕೆಲ ಕಾಲ ಇರುವಂತೆ ಮಾಡುವುದೇ 'ಸ್ಥಿತಿ'. ಕೊನೆಗೆ ಸಂಸಾರ (ಜಗತ್ತು)ವನ್ನು ನಾಶಗೊಳಿಸುವುದಕ್ಕೆ 'ಸಂಹಾರ'ವೆಂದು ಹೆಸರು. ಮತ್ತೆ ಜಗತ್ತಿನ ಪ್ರಾಣಿಗಳು ದುಷ್ಟ ಮಾರ್ಗಕ್ಕೆ ಹೋಗದೆ ಸನ್ಮಾರ್ಗಕ್ಕೆ ತರುವುದೇ 'ತಿರೋಭಾವ'.

**ತನ್ಮೋಕ್ಷೋಽನುಗ್ರಹಸ್ತನ್ಮೇ ಕೃತ್ಯಮೇವಂ ಹಿ ಪಂಚಕಂ ।**
**ಕೃತ್ಯಮೇತದ್ವಹತ್ಯನ್ಯಸ್ತೂಷ್ಣೀಂ ಗೋಪುರಬಿಂಬವತ್ ॥೪॥**

೪ ಈ ರೀತಿ ಸನ್ಮಾರ್ಗಗಾಮಿಯಾದ ಜೀವಿಗಳಿಗೆ ಸಂಸಾರದಿಂದ ಬಿಡುಗಡೆ ನೀಡುವುದೇ ಅನುಗ್ರಹವೆಂದಾಗಿದೆ. ಇವೇ ನನ್ನ ಪಂಚ (ಐದು) ಕಾರ್ಯಗಳಾಗಿವೆ. ಉಳಿದವರೂ ಸಹ ಸುಮ್ಮನೆ ಮಾಡುವರು ಎಂದರೆ ನಾನು ಪ್ರಧಾನ. ಅವರು ಅಪ್ರಧಾನರು. ಹೇಗೆಂದರೆ ಗೋಪುರದಲ್ಲಿ ಮೂರ್ತಿ ಇರುವಂತೆ, ಅಂದರೆ ಹೆಸರಿಗೆ ಮಾತ್ರ ಆಗಿರುತ್ತಾರೆ. ಆದ್ದರಿಂದ ನನ್ನ ಹೊರತು ಉಳಿದವರಿಗೆ ಈ ಕೃತ್ಯಗಳನ್ನು ಮಾಡಲು ಸಾಧ್ಯವಿಲ್ಲವು.

**ಸರ್ಗಾದಿಯಚ್ಚತುಷ್ಕೃತ್ಯಂ ಸಂಸಾರಪರಿಜೃಂಭಣಂ ।**
**ಪಂಚಮಂ ಮುಕ್ತಿಹೇತುರ್ವೈ ನಿತ್ಯಂ ಮಯಿ ಚ ಸುಸ್ಥಿರಂ ॥೫॥**

೫ ಸೃಷ್ಟಿಯೇ ಮೊದಲಾದ ನಾಲ್ಕು ಕೃತ್ಯಗಳು ಸಂಸಾರದಲ್ಲಿ ವಿಜೃಂಭಿಸುವಂತಹುದು. ಐದನೆಯದಾದ ಮುಕ್ತಿಯೇ ನನ್ನಲ್ಲಿ ಸ್ಥಿರವಾಗಿದ್ದು, ಜೀವರಿಗೆ ಮುಕ್ತಿಗೆ ಸಾಧನವಾಗಿದೆ. ಅಂದರೆ ಮುಕ್ತಿ ಎಂದರೆ ನನ್ನಲ್ಲಿರುವುದೇ ಆಗಿದೆ ಎಂದರ್ಥ.

**ತದಿದಂ ಪಂಚಭೂತೇಷು ದೃಶ್ಯತೇ ಮಾಮಕೈರ್ಜನೈಃ ।**
**ಸೃಷ್ಟಿರ್ಭೂಮೌ ಸ್ಥಿತಿಸ್ತೋಯೇ ಸಂಹಾರಃ ಪಾವಕೇ ತಥಾ ॥೬॥**

೬ ಈ ಐದು ಕೃತ್ಯಗಳೂ ನನ್ನ ಭಕ್ತರಿಗೆ ಪಂಚ ಭೂತಗಳಲ್ಲಿ ತೋರುವುದು. ಹೇಗೆಂದರೆ ಸೃಷ್ಟಿಕಾರ್ಯವು ಭೂಮಿಯಲ್ಲಿಯೂ, ಸ್ಥಿತಿಕಾರ್ಯವು ಜಲದಲ್ಲಿಯೂ ಸಂಹಾರ ಕಾರ್ಯವು ಅಗ್ನಿಯಲ್ಲಿ ಹಾಗೆಯೇ,

**ತಿರೋಭಾವೋಽನಿಲೇ ತದ್ವದನುಗ್ರಹ ಇಹಾಂಬರೇ।**
**ಸೃಜ್ಯತೇ ಧರಯಾ ಸರ್ವಮದ್ಭಿಃ ಸರ್ವಂ ಪ್ರವರ್ಧತೇ ॥೭॥**

೭ ತಿರೋಭಾವ ಕ್ರಿಯೆಯು ವಾಯುವಿನಲ್ಲೂ ಅದರಂತೆ ಅನುಗ್ರಹವು ಆಕಾಶದಲ್ಲೂ ಉಂಟಾಗುವುದು. ಹೇಗೆಂದರೆ ಎಲ್ಲವೂ ಭೂಮಿಯಲ್ಲಿ ಹುಟ್ಟುವುದು. ಹಾಗೆ ಹುಟ್ಟಿದಂತಹ ಜೀವಿಗಳು ನೀರಿನಿಂದ ಅಭಿವೃದ್ಧಿ ಹೊಂದುವುವು.

**ಆರ್ದ್ಯತೇ ತೇಜಸಾ ಸರ್ವಂ ವಾಯುನಾ ಚಾಪನೀಯತೇ ।**
**ವ್ಯೋಮ್ನಾನುಗೃಹ್ಯತೇ ಸರ್ವಂ ಜ್ಞೇಯಮೇವಂ ಹಿ ಸೂರಿಭಿಃ ॥೮॥**

೮ ಅಗ್ನಿಯು ನಾಶಪಡಿಸುವುದು. ವಾಯುವು ತೆಗೆದು ಹಾಕುವುದು (ಕಿತ್ತು ಹಾಕುವುದು) ಆಕಾಶದಲ್ಲಿ ಎಲ್ಲವೂ ಅನುಗೃಹ ಹೊಂದುತ್ತದೆ. ಈ ರೀತಿಯಾಗಿ ಬುದ್ಧಿವಂತರು ತಿಳಿಯುತ್ತಾರೆ.

**ಪಂಚಕೃತ್ಯಮಿದಂ ವೋಢುಂ ಮಮಾಸ್ತಿ ಮುಖಪಂಚಕಂ ।**
**ಚತುರ್ದಿಕ್ಷು ಚತುರ್ವಕ್ತ್ರಂ ತನ್ಮಧ್ಯೇ ಪಂಚಮಂ ಮುಖಂ ॥೯॥**

೯ ಈ ಮೇಲೆ ತಿಳಿಸಿದಂತಹ ಐದು ಕೃತ್ಯಗಳನ್ನು ನೆರವೇರಿಸಲು ನನಗೆ ಐದು ಮುಖಗಳಿರುವುವು. ನಾಲ್ಕು ದಿಕ್ಕಿಗೆ ನಾಲ್ಕು ಮುಖಗಳೂ ಇವುಗಳ ಮಧ್ಯೆಯಲ್ಲಿ ನನ್ನ ಐದನೆಯ ಮುಖವೂ ಇರುವುದು.

**ಯುವಾಭ್ಯಾಂ ತಪಸಾ ಲಬ್ಧಮೇತತ್ಕೃತ್ಯದ್ವಯಂ ಸುತೌ ।**
**ಸೃಷ್ಟಿಸ್ಥಿತ್ಯಭಿಧಂ ಭಾಗ್ಯಂ ಮತ್ತಃ ಪ್ರೀತಾದತಿಪ್ರಿಯಂ ॥೧೦॥**

೧೦ ಎಲೈ ವತ್ಸರೇ, ನೀವುಗಳು ತಪಸ್ಸನ್ನು ಮಾಡಿ ಸೃಷ್ಟಿ, ಸ್ಥಿತಿಯೆಂಬ ಎರಡು ಕೃತ್ಯಗಳನ್ನು ಮಾಡಲು ಸಾಮರ್ಥ್ಯವನ್ನು ಪಡೆದಿರುವಿರಿ. ನಿಮ್ಮ ತಪಸ್ಸಿಗೆ ಸಂತುಷ್ಟನಾದ ನಾನು ನನಗೆ ಅತಿ ಪ್ರಿಯವಾದ ಸೃಷ್ಟಿ, ಸ್ಥಿತಿಯೆಂಬ ಎರಡು ಭಾಗ್ಯಗಳನ್ನು ನಿಮಗೆ ಅನುಗ್ರಹಿಸಿರುವೆನು.

**ತಥಾ ರುದ್ರಮಹೇಶಾಭ್ಯಾಮನ್ಯತ್ಕೃತ್ಯದ್ವಯಂ ಪರಂ ।**
**ಅನುಗ್ರಹಾಖ್ಯಂ ಕೇನಾಪಿ ಲಬ್ಧಂ ನೈವ ಹಿ ಶಕ್ಯತೇ ॥೧೧॥**

೧೧ ಹಾಗೆಯೇ ರುದ್ರ ಮತ್ತು ಮಹೇಶ್ವರರು, ಸಂಹಾರ ನಿಗ್ರಹಗಳನ್ನು ತಪಸ್ಸಿನಿಂದ ಪಡೆದುಕೊಂಡಿರುವುದು. ಅನುಗ್ರಹವೆಂಬ ಐದನೆಯ ಕೃತ್ಯವಾದರೋ ಬೇರೆ ಯಾರೂ

ಪಡೆಯಲು ಅಶಕ್ಯವು, ಎಂದರೆ ನಾನೇ ನಿರ್ವಹಿಸುವ ಕಾರ್ಯವು.

**ತತ್ಸರ್ವಂ ಪೌರ್ವಿಕಂ ಕರ್ಮ ಯುವಾಭ್ಯಾಂ ಕಾಲವಿಸ್ಮೃತಂ |**
**ನ ತದ್ರುದ್ರಮಹೇಶಾಭ್ಯಾಂ ವಿಸ್ಮೃತಂ ಕರ್ಮ ತಾದೃಶಂ ||12||**

೧೨ ಇವೆಲ್ಲವೂ ನಿಮಗೆ ಬಹಳ ಹಿಂದಿನಿಂದಲೇ ಬಂದಿರುವುದು. ಈ ನಿಮ್ಮ-ನಿಮ್ಮ ಕರ್ಮಗಳನ್ನು ಮರೆತಿರುವರಿ. ಆದರೆ ರುದ್ರ-ಮಹೇಶ್ವರರು ಅವರ ಕರ್ಮಗಳನ್ನು ಮರೆತಿಲ್ಲ.

**ರೂಪೇ ವೇಷೇ ಚ ಕೃತ್ಯೇ ಚ ವಾಹನೇ ಚಾಸನೇ ತಥಾ |**
**ಆಯುಧಾದೌ ಮತ್ಸಾಮ್ಯಮಸ್ಮಾಭಿಸ್ತಷ್ಟ್ಯತೇ ಕೃತಂ ||೧೩||**

೧೩ ಹಾಗೆಯೇ ಆ ರುದ್ರ-ಮಹೇಶ್ವರರಿಗೆ ರೂಪದಲ್ಲೂ, ವೇಷದಲ್ಲೂ, ಕಾರ್ಯದಲ್ಲೂ ಮತ್ತು ವಾಹನ ಆಸನಗಳಲ್ಲೂ, ಆಯುಧಗಳಲ್ಲೂ ನನ್ನ ಸಮಾನತೆಯನ್ನು ಕಲ್ಪಿಸಿ ಸಾಮ್ಯತೆಯನ್ನು ಅನುಗ್ರಹಿಸಿರುವೆನು.

**ಮಧ್ಯಾನವಿರಹಾದ್ವತ್ಸೌ ಮೌಢ್ಯಂ ವಾಮೇವಮಾಗತಂ |**
**ಮಜ್ಜ್ಞಾನೇ ಸತಿ ನೈವಂ ಸ್ಯಾನ್ಮಾನಂ ರೂಪಂ ಮಹೇಶವತ್ ||೧೪||**

೧೪ ನನ್ನ ಧ್ಯಾನವಿಲ್ಲದುದರಿಂದ ಎಲೈ ವತ್ಸರೇ, ನಿಮಗೆ ಈ ರೀತಿಯಾದ ಅವಿವೇಕವುಂಟಾಯಿತು. ನನ್ನ ವಿಷಯಕವಾದ ಜ್ಞಾನವಿದ್ದದ್ದೇ ಆಗಿದ್ದರೆ, ನಿಮಗೆ ಈ ರೀತಿ ಆಗುತ್ತಿರಲಿಲ್ಲ. ಅಂದರೆ ನಾನೇ ಈಶ್ವರನೆಂಬ ಅಹಂಭಾವವು ನಿಮಗೆ ಆಗುತ್ತಿರಲಿಲ್ಲ. ನನ್ನಂತೆ ನಿಮಗೆ ರೂಪವೂ, ಗೌರವವೂ ಲಭಿಸುತ್ತಿತ್ತು.

**ತಸ್ಮಾನ್ಮಜ್ಞಾನಸಿದ್ಧ್ಯರ್ಥಂ ಮಂತ್ರಮೋಂಕಾರನಾಯಕಂ |**
**ಇತಃ ಪರಂ ಪ್ರಜ್ಞಾತಂ ಮಾಮಕಂ ಮಾನಭಂಜನಂ ||೧೫||**

೧೫ ಆದ್ದರಿಂದ ಎಲೈ ಬ್ರಹ್ಮ-ವಿಷ್ಣುಗಳಿರಾ, ನನ್ನ ಜ್ಞಾನ ಉಂಟಾಗಲು ಅಂದರೆ ನನ್ನ ಸ್ವರೂಪಜ್ಞಾನಕ್ಕಾಗಿ 'ಓಂಕಾರ'ವೆಂಬ ನನ್ನ ಮಂತ್ರವನ್ನು ಜಪಿಸಿರಿ. ಇನ್ನು ಮುಂದೆ ನೀವು ಈ ರೀತಿಯಾಗಿ ಜಪಿಸಿದಲ್ಲಿ ಅಹಂಕಾರ ನಾಶವಾಗಿ ವಿವೇಕವುಂಟಾಗುವುದು.

ಉಪಾದಿಶಂ ನಿಜಂ ಮಂತ್ರಮೋಂಕಾರಮುರುಮಂಗಲಂ ।
ಓಂಕಾರೋ ಮನ್ಮುಖಾಜ್ಜಜ್ಞೇ ಪ್ರಥಮಂ ಮತ್ಪ್ರಬೋಧಕಃ ॥೧೬॥

೧೬ ನನ್ನ ಮಂತ್ರವಾದ ಈ ಓಂಕಾರವು ನನ್ನ ಮೂಲ ಮಂತ್ರವಾಗಿಯೂ ಮಂಗಳಕರವಾಗಿಯೂ ಇರುವಂತಹದ್ದಾಗಿದೆ. ಇದನ್ನು ನಿಮಗೀಗ ಉಪದೇಶ ಮಾಡುವೆನು. ಈ ಓಂಕಾರವು ನನ್ನ ಮುಖದಿಂದಲೇ ಉದ್ಭವಿಸಿರುವುದು. ಇದು ನನ್ನ ತತ್ವವನ್ನು ಬೋಧಿಸುವುದು.

ವಾಚಕೋಽಯಮಹಂ ವಾಚ್ಯೋ ಮಂತ್ರೋಽಯಂ ಹಿ ಮದಾತ್ಮಕಃ ।
ತದನುಸ್ಮರಣಂ ನಿತ್ಯಂ ಮಮಾನುಸ್ಮರಣಂ ಭವೇತ್ ॥೧೭॥

೧೭ ಈ ಓಂಕಾರವು ನನ್ನ ವಿಚಾರವನ್ನು ಹೇಳುವುದು. ಈ ಮಂತ್ರವು ನಾನೇ ಆಗಿರುವೆನು. ಇದನ್ನು ಯಾವಾಗಲೂ ಸ್ಮರಿಸಿದರೆ ನನ್ನನ್ನು ಸ್ಮರಿಸಿದಂತೆಯೇ ಆಗುವುದು. ಈ ಓಂಕಾರ ಸ್ವರೂಪವು ನನ್ನ ಸ್ವರೂಪವಾದುದಾಗಿರುವುದು.

ಅಕಾರ ಉತ್ತರಾತ್ಪೂರ್ವಮುಕಾರಃ ಪಶ್ಚಿಮಾನನಾತ್ ।
ಮಕಾರೋ ದಕ್ಷಿಣಮುಖಾದ್ಬಿಂದುಃ ಪ್ರಾಙ್ಮುಖತಸ್ತಥಾ ॥೧೮॥

೧೮ ಈ ಓಂಕಾರದಲ್ಲಿ ಅಡಗಿರುವ ಮೊದಲನೆಯ ಅಕ್ಷರವಾದ 'ಅ'ಕಾರವು ನನ್ನ ಉತ್ತರ ಮುಖದಿಂದ 'ಉ'ಕಾರವು ಪಶ್ಚಿಮ ಮುಖದಿಂದ 'ಮ'ಕಾರವು, ದಕ್ಷಿಣ ಮುಖದಿಂದ ಬಂದುವು. ಅಂದರೆ 'ಂ' ಎಂಬ (ಸೊನ್ನೆಯು) ಅನುಸ್ವಾರವು ಪೂರ್ವ ಮುಖದಿಂದಲೂ ಜನಿಸಿತು.

ನಾದೋ ಮಧ್ಯಮುಖಾದೇವಂ ಪಂಚಧಾಸೌ ವಿಜೃಂಭಿತಃ ।
ಏಕೀಭೂತಃ ಪುನಸ್ತದ್ವದೋಮಿತ್ಯೇಕಾಕ್ಷರೋ ಭವೇತ್ ॥೧೯॥

೧೯ 'ನಾದವು' ಅಂದರೆ ಓಂಕಾರದ ಕೊನೆಯ ಧ್ವನಿಯ ಅಂತ್ಯವು ಮಧ್ಯ ಮುಖದಿಂದ ಆವಿರ್ಭವಿಸಿತು. ಹೀಗೆ ಐದು ವಿಧವಾಗಿ ಉಂಟಾಗಿ ಹುಟ್ಟಿದಾಗ 'ಓಂ' ಎಂಬ ಒಂದೇ ಅಕ್ಷರವಾಗಿ ಆಗಿದೆ.

ನಾಮರೂಪಾತ್ಮಕಂ ಸರ್ವಂ ವೇದಭೂತಕುಲದ್ವಯಂ ।
ವ್ಯಾಪ್ತಮೇತೇನ ಮಂತ್ರೇಣ ಶಿವಶಕ್ತ್ಯೋಶ್ಚ ಬೋಧಕಃ ॥೨೦॥

೨೦ ನಾಮರೂಪಾತ್ಮಕವಾದ ಎಲ್ಲಾ ಪ್ರಪಂಚಗಳೂ, ಪಂಚಭೂತಗಳೂ ಈ ಓಂಕಾರದಿಂದಲೇ ವ್ಯಾಪಿಸಿ ಶಿವ ಶಕ್ತಿಯಿಂದ ತಿಳುವಳಿಕೆಯನ್ನು ಕೊಡುವಂತಹದ್ದಾಗಿದೆ.

ವಿ.ವಿ.:- 'ಅ+ಒಂ+ಮ' ಎಂಬ ಅಕ್ಷರಗಳು ಜತೆಗೆ ಅನುಸ್ವಾರಗಳು ಸೇರಿ 'ಓಂ' ಎಂದಾಗಿದೆ. ಇದನ್ನು ಮಂಗಳವೆಂದೂ ಉಪಯೋಗಿಸುತ್ತಾರೆ. ಸ್ಥಿತಿಯಲ್ಲಿ ಓಂಕಾರಕ್ಕೆ ಸಂಬಂಧಿಸಿದಂತೆ, ಅದು ಮಂಗಳವೆಂಬುದಕ್ಕೆ, ಹಾಗೂ ಪರಬ್ರಹ್ಮನಾದ ಶಿವನಿಂದ ಉತ್ಪತ್ತಿಯಾಯಿತು ಎನ್ನುವುದಕ್ಕೆ ಈ ರೀತಿ ಶ್ಲೋಕವನ್ನು ಹೇಳಿದ್ದಾರೆ.

"ಓಂಕಾರ ಶ್ಚಾಥ ಶಬ್ದಶ್ಚ ದ್ವಾವೇತೌ ಬ್ರಹ್ಮಣಃ ಪುರಾ

ಕಂಠಂ ಭಿತ್ವಾ ಪುನರ್ಯಾತ್ ತಸ್ಮಾನ್ಮಾಂಗಲಿಕಾವುಭೌ" (ಭೌ) ಎಂದು.

ಎಂದರೆ ಬಹಳ ಹಿಂದೆಯೇ 'ಓಂಕಾರ' ಹಾಗೇ ಅಥ ಶಬ್ದಗಳು ಬ್ರಹ್ಮನ ಕಂಠವನ್ನು ಭೇದಿಸಿಕೊಂಡು ಎಂದರೆ ಅನಾಯಾಸವಾಗಿ ಉತ್ಪತ್ತಿಯನ್ನು ಹೊಂದಿದವು. ಆದ್ದರಿಂದ ಇವೆರಡೂ ಮಂಗಳ ಶಬ್ದಗಳಾಗಿವೆ. ಆದ್ದರಿಂದಲೇ ವೇದ, ಶಾಸ್ತ್ರಾದಿಗಳನ್ನು ಇವೆರಡರಲ್ಲಿ ಒಂದು ಆರಂಭದಲ್ಲೇ ಇರುತ್ತದೆ. ವೇದಾರಂಭದಲ್ಲಿ ಸಹ 'ಓಂ' ಎಂದು ಪ್ರಾರಂಭಿಸುತ್ತಾರೆ.

ಇನ್ನೊಂದು ವಿಚಾರವೆಂದರೆ ಈಶ್ವರನ ಐದು ಮುಖಗಳು ಇವು ನಾಲ್ಕು ದಿಕ್ಕಿಗೆ ನಾಲ್ಕು. ಮಧ್ಯದಲ್ಲಿ ಒಂದು ಈ ರೀತಿಯಾಗಿದೆ. ಪೂರ್ವದಲ್ಲಿ 'ತತ್ಪುರುಷ', ದಕ್ಷಿಣದಲ್ಲಿ 'ಅಘೋರ', ಉತ್ತರಕ್ಕೆ ನಾಮದೇವ, ಪಶ್ಚಿಮಕ್ಕೆ ಸದ್ಯೋಜಾತ, ಮಧ್ಯಕ್ಕೆ ಈಶಾನ ಮುಖಗಳು ಇವೇ ಹೀಗಾಗಿ ಪಂಚ ವಕ್ತ್ರನು ಈಶ್ವರನು ಆಗಿದ್ದಾನೆ.

**ಅಸ್ಮಾತ್ಪಂಚಾಕ್ಷರಂ ಜಜ್ಞೇ ಬೋಧಕಂ ಸಕಲಸ್ಯ ಯತ್ ।**
**ಅಕಾರಾದಿಕ್ರಮೇಣೈವ ನಕಾರಾದಿಯಥಾಕ್ರಮಂ ॥೨೧॥**

೨೧ ಈ ಓಂಕಾರದಿಂದಲೇ ಸಕಲ ಸ್ವರೂಪವನ್ನು ಬೋಧಿಸುವ, ಪಂಚಾಕ್ಷರೀ ಮಂತ್ರವು ಕೂಡ 'ಅ'ಕಾರದಿಂದ ಕ್ರಮವಾಗಿ 'ನ'ಕಾರಾದಿಯಾಗಿ ಉತ್ಪತ್ತಿಯಾಯಿತು. ಎಂದರೆ 'ಅ'ಕಾರದಿಂದ 'ನ'ಕಾರವೂ ಜನಿಸಿತು. 'ಉ'ಕಾರದಿಂದ 'ಮ'ಕಾರವೂ, 'ಮ'ಕಾರದಿಂದ 'ಶಿ'ಕಾರವೂ, ಸೊನ್ನೆಯಿಂದ 'ವ'ಕಾರವೂ, ನಾದದಿಂದ 'ಯ'ಕಾರವೂ ಜನಿಸಿ 'ನಮಃ ಶಿವಾಯ' ಎಂಬ ಪಂಚಾಕ್ಷರೀ ಮಂತ್ರವಾಯಿತು. ಎಂದು ಅಭಿಪ್ರಾಯ.

**ಅಸ್ಮಾತ್ಪಂಚಾಕ್ಷರಾಜ್ಜಾತಾ ಮಾತೃಕಾಃ ಪಂಚಭೇದತಃ ।**
**ತಸ್ಮಾಚ್ಛಿರಶ್ಚತುರ್ವಕ್ತ್ರಾತ್ತ್ರಿಪಾದ್ಗಾಯತ್ರಿರೇವ ಚ ॥೨೨॥**

೨೨ ಈ ಪಂಚಾಕ್ಷರದಿಂದ ಐದು ವಿಧವಾದ ಮಾತೃಕೆಗಳು ಜನಿಸಿದವು. ಈ ಪಂಚಾಕ್ಷರೀ ಮಂತ್ರದಿಂದಲೇ ನಾಲ್ಕು ಮುಖವುಳ್ಳದ್ದು, ಮೂರು ಪಾದವುಳ್ಳದ್ದೂ ಆದ 'ಗಾಯತ್ರಿ'ಯು ಶಿರಸ್ಸಿನೊಡನೆ ಜನಿಸಿತು.

**ವೇದಃ ಸರ್ವಸ್ತತೋ ಜಜ್ಞೇ ತತೋ ವೈ ಮಂತ್ರಕೋಟಯಃ ।**
**ತತ್ತನ್ಮಂತ್ರೇಣ ತತ್ಸಿದ್ಧಿಃ ಸರ್ವಸಿದ್ಧಿರಿತೋ ಭವೇತ್ ॥೨೩॥**

೨೩ ಆನಂತರದಲ್ಲಿ ಈ ಪಂಚಾಕ್ಷರೀ ಮಂತ್ರದಿಂದಲೇ ವೇದಗಳೆಲ್ಲವೂ ಜನಿಸಿದುವು. ನಂತರ ಕೋಟಿ ಮಂತ್ರಗಳು ಉದ್ಭವಿಸಿದವು (ಇನ್ನೊಂದರ್ಥದಲ್ಲಿ ಮಂತ್ರ ಕೋಟಯಃ ಎಂದರೆ ಮಂತ್ರಗಳ ಸಮೂಹಗಳೆಂದೂ ಆಗುವುದು) ಆಯಾಯಾ ಮಂತ್ರಗಳ ಸಿದ್ಧಿಯಿಂದ ಆಯಾಯಾ ದೇವತೆಗಳ ಫಲ ಸಿದ್ಧವಾಗುವುದು. ಆದರೆ ಈ ಪಂಚಾಕ್ಷರೀ ಮಂತ್ರದಿಂದ ಎಲ್ಲವೂ ಸಿದ್ಧಿಸುವುದು.

**ಅನೇನ ಮಂತ್ರಕಂದೇನ ಭೋಗೋ ಮೋಕ್ಷಶ್ಚ ಸಿದ್ಧ್ಯತಿ ।**
**ಸಕಲಾ ಮಂತ್ರರಾಜಾನಃ ಸಾಕ್ಷಾದ್ಭೋಗಪ್ರದಾಃ ಶುಭಾಃ ॥೨೪॥**

೨೪ ಈ ನನ್ನ ಪಂಚಾಕ್ಷರೀ ಮೂಲಮಂತ್ರದಿಂದ ಭೋಗವೂ, ಮೋಕ್ಷವೂ ಸಿದ್ಧಿಸುವುದು. ಇನ್ನುಳಿದ ಎಲ್ಲಾ ಮಂತ್ರೋತ್ತಮಗಳೆಲ್ಲವೂ ಸಾಕ್ಷಾತ್ತಾಗಿ ಕೇವಲ ಭೋಗವನ್ನು ಮಾತ್ರ ಅನುಗ್ರಹಿಸುತ್ತವೆ.

**॥ನಂದಿಕೇಶ್ವರ ಉವಾಚ॥**
**ಪುನಸ್ತಯೋಸ್ತತ್ರ ತಿರಃ ಪಟಂ ಗುರುಃ**
**ಪ್ರಕಲ್ಪ್ಯ ಮಂತ್ರಂ ಚ ಸಮಾದಿಶತ್ಪರಂ ।**
**ನಿಧಾಯ ತಚ್ಛೀರ್ಷ್ಣಿ ಕರಾಂಬುಜಂ ಶನೈ -**
**ರುದಙ್ಮುಖಂ ಸಂಸ್ಥಿತಯೋಃ ಸಹಾಂಬಿಕಃ ॥೨೫॥**

೨೫ ನಂದಿಕೇಶ್ವರನು ಹೇಳುತ್ತಾನೆ:- ಅನಂತರ ಜಗದ್ಗುರುವಾದ ಪಾರ್ವತೀ ಸಹಿತನಾದ ಪರಮೇಶ್ವರನು ಬ್ರಹ್ಮ-ವಿಷ್ಣುಗಳಿಗೆ ಬೇರೆಯವರಿಗೆ ಕಾಣದಿರಲು ಬಟ್ಟೆಯನ್ನು ಅಡ್ಡಲಾಗಿಸಿ ಅವರುಗಳಿಗೆ ಹೊದ್ದಿಸಿದನು. ಅನಂತರ 'ಓಂ'ಕಾರ ರೂಪವಾದ ಪಂಚಾಕ್ಷರೀ ಮಂತ್ರವನ್ನು ಉತ್ತರಮುಖರಾದ ಅವರಿಬ್ಬರಿಗೆ ತನ್ನ ಕಮಲದಂತಹ ಕೈಗಳನ್ನು ಅವರುಗಳ

ತಲೆಯ ಮೇಲೆ ಇಡುವವನಾಗಿ ಉಪದೇಶಿಸಿದನು.

ತ್ರಿರುಚ್ಚಾರ್ಯಾಗ್ರಹೀನ್ಮಂತ್ರಂ ಯಂತ್ರತಂತ್ರೋಕ್ತಿಪೂರ್ವಕಂ ।
ಶಿಷ್ಯೌ ಚ ತೌ ದಕ್ಷಿಣಾಯಾಮಾತ್ಮಾನಂ ಚ ಸಮಾರ್ಪಯತ್ ॥೨೬॥

೨೬ ಆ ಬ್ರಹ್ಮ-ವಿಷ್ಣುಗಳು ಆ ಕಾಲದಲ್ಲಿ ಮೂರು ಬಾರಿ ಮಂತ್ರವನ್ನು ಉಚ್ಚರಿಸಿದರು. ಮಂತ್ರ-ಯಂತ್ರಗಳೊಡನೆ ಅವರಿಗೆ ವಿಚಾರಗಳನ್ನು ತಿಳಿಸಿದನು. ಅನಂತರ ಶಿಷ್ಯರಾದ ಅವರಿಬ್ಬರನ್ನೂ ತನ್ನ ಬಲಭಾಗದಲ್ಲಿ ಕುಳ್ಳಿರಿಸಿಕೊಂಡನು.

ಪ್ರಬದ್ಧಹಸ್ತೌ ಕಿಲ ತೌ ತದಂತಿಕೇ ।
ತಮೂಚತುರ್ದೇವವರಂ ಜಗದ್ಗುರುಂ ॥೨೭॥

೨೭ ಅನಂತರ ಆ ಬ್ರಹ್ಮ-ವಿಷ್ಣುಗಳು ಕೈ ಕಟ್ಟಿಕೊಂಡು (ಎಂದರೆ ಕೈ ಮುಗಿದುಕೊಂಡು ಎಂದು ಅರ್ಥೈಸಬಹುದು. ಪ್ರಬದ್ಧ ಹಸ್ತೌ ಎಂದಿದೆ. ಎಂದರೆ ವಿಶೇಷವಾಗಿ ಅಂಜಲಿಬದ್ಧರಾಗಿ ಎಂದರ್ಥ.) ಶಿವನ ಬಳಿಯಲ್ಲಿ ನಿಂತು ದೇವ ಶ್ರೇಷ್ಠನೂ ಜಗದ್ಗುರುವೂ ಆದ ಆತನನ್ನು ಕುರಿತು ಹೀಗೆ ಹೇಳಿದರು.

॥ಬ್ರಹ್ಮಾಚ್ಯುತಾವೂಚತುಃ॥
ನಮೋ ನಿಷ್ಕಲರೂಪಾಯ ನಮೋ ನಿಷ್ಕಲತೇಜಸೇ ॥೨೮॥

೨೮ ಬ್ರಹ್ಮ-ವಿಷ್ಣುಗಳು ಹೇಳುತ್ತಾರೆ :- ನಿರಾಕಾರ ಸ್ವರೂಪವುಳ್ಳ ಓ! ಶಿವನೇ ನಿನಗೆ ನಮಸ್ಕಾರವು. ನಿರಾಕಾರವಾದ ತೇಜಸ್ಸುಳ್ಳ ನಿನಗೆ ನಮಸ್ಕಾರವು. ಎಲ್ಲದಕ್ಕೂ ಒಡೆಯನಾದ ಈಶ್ವರ ಸ್ವರೂಪನಾದ ನಿನಗೆ ನಮಸ್ಕಾರವು.

ನಮಃ ಪ್ರಣವವಾಚ್ಯಾಯ ನಮಃ ಪ್ರಣವಲಿಂಗಿನೇ ।
ನಮಃ ಸೃಷ್ಟ್ಯಾದಿಕರ್ತ್ರೇ ಚ ನಮಃ ಪಂಚಮುಖಾಯ ತೇ ॥29॥

೨೯ ಓಂಕಾರ ವಾಚ್ಯನೂ, ಓಂಕಾರ ಅಭಿಮಾನಿಯಾದ ದೇವತೆಯೇ ನಿನಗೆ ನಮಸ್ಕಾರವು. ಸೃಷ್ಟ್ಯಾದಿ ಕರ್ತೃವಾದ ನಿನಗೆ ನಮಸ್ಕಾರವು. ಪಂಚಮುಖನಾದ ನಿನಗೆ ನಮಸ್ಕಾರವು.

**ಪಂಚಬ್ರಹ್ಮಸ್ವರೂಪಾಯ ಪಂಚಕೃತ್ಯಾಯ ತೇ ನಮಃ ।**
**ಆತ್ಮನೇ ಬ್ರಹ್ಮಣೇ ತುಭ್ಯಮನಂತಗುಣಶಕ್ತಯೇ ॥೩೦॥**

೩೦ ಪಂಚ ಬ್ರಹ್ಮ ಸ್ವರೂಪನಾದ ನಿನಗೆ ನಮಸ್ಕಾರವು. ಪಂಚಕೃತ್ಯ ಸ್ವರೂಪನಾದ ನಿನಗೆ ನಮಸ್ಕಾರವು. ಆತ್ಮಸ್ವರೂಪನೂ, ಬ್ರಹ್ಮನೂ, ಅನಂತವಾದ ಗುಣ, ಶಕ್ತಿಯೂ ಆದ ನಿನಗೆ ನಮಸ್ಕಾರವು.

ವಿ.ವಿ.:- "ಪಂಚ ಬ್ರಹ್ಮ ಸ್ವರೂಪ"ವೆಂದರೆ, (1)ಅನ್ನಮಯ, (2)ಪ್ರಾಣಮಯ, (3)ಮನೋಮಯ, (4)ವಿಜ್ಞಾನಮಯ, (5)ಆನಂತಮಯ ಬ್ರಹ್ಮನೆದು.

ಇದನ್ನೇ ತೈತ್ತರೀಯೋಪನಿಷತ್ತಿನಲ್ಲಿ (1)ಅನ್ನಂ ಬ್ರಹ್ಮೇತಿ ವ್ಯಜಾನಾತ್ ಎಂಬ ಇತ್ಯಾದಿ ಮಂತ್ರಗಳಿಂದ ಹೊಗಳಿರುವುದು.

ಶಕ್ತಿಗಳೆಂದರೆ :- ಸರ್ವಜ್ಞತ್ವ, ನಿತ್ಯತೃಪ್ತತ್ವ, ಅನಾದಿಬೋಧಶಕ್ತಿ, ಅಲುಪ್ತ ಶಕ್ತಿ, ಸ್ವತಂತ್ರ ಶಕ್ತಿ, ಅನಂತ ಶಕ್ತಿಗಳು.

**ಸಕಲಾಕಲರೂಪಾಯ ಶಂಭವೇ ಗುರವೇ ನಮಃ ।**
**ಇತಿ ಸ್ತುತ್ವಾ ಗುರುಂ ಪದ್ಯೈರ್ಬ್ರಹ್ಮಾ ವಿಷ್ಣುಶ್ಚ ನೇಮತುಃ ॥೩೧॥**

೩೧ ಸಾಕಾರ ಮತ್ತು ನಿರಾಕಾರ ರೂಪನಾದ, ಗುರುವೂ, ಶಂಭುವೂ ಆದ ನಿನಗೆ ನಮಸ್ಕಾರವು. ಈ ರೀತಿಯಾಗಿ ಬ್ರಹ್ಮ-ವಿಷ್ಣುಗಳು ಪದ್ಯಗಳಿಂದ ಸ್ತುತಿಸಿ ಶಿವನಿಗೆ ನಮಸ್ಕರಿಸ್ಸಿದರು.

**॥ಈಶ್ವರ ಉವಾಚ॥**

**ವತ್ಸಕೌ ಸರ್ವತತ್ತ್ವಂ ಚ ಕಥಿತಂ ದರ್ಶಿತಂ ಚ ವಾಂ ।**
**ಜಪತಂ ಪ್ರಣವಂ ಮಂತ್ರಂ ದೇವೀದಿಷ್ಟಂ ಮಹಾತ್ಮಕಂ ॥32॥**

೩೨ ಈಶ್ವರನು ಹೇಳುತ್ತಾನೆ. ಎಲೈ ಬ್ರಹ್ಮ-ವಿಷ್ಣುಗಳಿರಾ, ಸರ್ವತತ್ವಗಳನ್ನು ನಿಮಗೆ ತಿಳಿಸಿ ತೋರಿಸಿದ್ದೇನೆ. ದೇವಿಯು ಉಪದೇಶಿಸಿದ ನನ್ನ ಮಂತ್ರವನ್ನು ಹಾಗೂ ಓಂಕಾರವನ್ನು ಜಪಿಸಿರಿ.

ವಿ.ವಿ.:- ಇಲ್ಲಿ ದೇವಿಯು ಉಪದೇಶಿಸಿದಳು. ಎಂದರೆ ಶಕ್ತಿಯಿಂದ ಕೂಡಿದ ಶಿವನಾದ್ದರಿಂದ ಶಿವನ ಶಕ್ತಿಯೇ ಉಪದೇಶಿಸಿರುವುದು ಎಂದರ್ಥ. ಎಂದರೆ 'ಶಿವ-ಶಕ್ತಿಯರಿಗೆ ಅವಿನಾಭಾವ ಸಂಬಂಧವೆಂದು' ಅರ್ಥ, ಎಂದರೆ 'ಎಳ್ಳಿನಲ್ಲಿ ಎಣ್ಣೆ,

ಹೂವಿನಲ್ಲಿ ಸುಗಂಧದಂತೆ ಪರಸ್ಪರ ಒಬ್ಬರಿಗೊಬ್ಬರು ಆಶ್ರಯವೆಂದರ್ಥ'. ಉಪದೇಶವಾದ್ದರಿಂದ ಮಂತ್ರವು 'ವಾಗ್ರೂಪ'ವಾದುದು. ಅದೇ ಶಕ್ತಿಯು ಅದಕ್ಕೇ 'ದೇವೀಂ ವಾಚಂ ಅಜನಯಂತದೇವಾಃ' ಎಂದು ವೇದದಲ್ಲಿ ಹೇಳಿರುವುದು.

**ಜ್ಞಾನಂ ಚ ಸುಸ್ಥಿರಂ ಭಾಗ್ಯಂ ಸರ್ವಂ ಭವತಿ ಶಾಶ್ವತಂ ।**
**ಆರ್ದ್ರಾಯಾಂ ಚ ಚತುರ್ದಶ್ಯಾಂ ತಜ್ಜಾಪ್ಯಂ ತ್ವಕ್ಷಯಂ ಭವೇತ್ ॥೩೩॥**

೩೩ ಹಾಗೆ ನೀವು ಜಪಿಸಿದರೆ ಸ್ಥಿರವಾದ ಜ್ಞಾನವೂ, ಭಾಗ್ಯವೂ, ಎಲ್ಲವೂ ಶಾಶ್ವತವಾಗಿರುವುದು. ಆದ್ರಾಃ ನಕ್ಷತ್ರದಲ್ಲಿ, ಚತುರ್ದಶಿಯಲ್ಲಿ ಇದನ್ನು ಜಪಿಸಿದರೆ ಎಂದಿಗೂ ನಾಶವಾಗದ ಫಲವುಂಟಾಗುವುದು.

**ಸೂರ್ಯಗತ್ಯಾ ಮಹಾದ್ರಾರ್ಯಾಮೇಕಂ ಕೋಟಿಗುಣಂ ಭವೇತ್ ।**
**ಮೃಗಶೀರ್ಷಾಂತಿಮೋ ಭಾಗಃ ಪುನರ್ವಸ್ವಾದಿಮಸ್ತಥಾ ॥೩೪॥**

೩೪ 'ಆರ್ದ್ರಾ'ನಕ್ಷತ್ರದಲ್ಲಿ ಸೂರ್ಯನು ಸಂಚರಿಸುವ ಕಾಲದಲ್ಲಿ ಈ ಮಂತ್ರವನ್ನು ಜಪಿಸಿದರೆ ಒಂದು ಜಪವು ಒಂದು ಕೋಟಿಯಷ್ಟು ಫಲವೀಯುವುದು. ಹಾಗೆಯೇ 'ಮೃಗಶಿರಾ' ನಕ್ಷತ್ರದ ಅಂತ್ಯಭಾಗವೂ, 'ಪುನರ್ವಸು' ನಕ್ಷತ್ರದ ಆದಿಭಾಗವೂ ಸಹ ಶ್ರೇಷ್ಠ ವು.

**ಆರ್ದ್ರಾಸಮಂ ಸದಾ ಜ್ಞೇಯಂ ಪೂಜಾಹೋಮಾದಿತರ್ಪಣೇ ।**
**ದರ್ಶನಂ ತು ಪ್ರಭಾತೇ ಚ ಪ್ರಾತಃಸಂಗವಕಾಲಯೋಃ ॥೩೫॥**

೩೫ ಮೇಲೆ ಹೇಳಿದ ಪುನರ್ವಸು, ಮೃಗಶಿರಾ ನಕ್ಷತ್ರಗಳೂ ಸಹ ಆರ್ದ್ರಾ ನಕ್ಷತ್ರದಂತೆಯೇ ಈಶ್ವರನ, ಜಪ, ಪೂಜಾ, ಹೋಮ, ತರ್ಪಣ, ದರ್ಶನಗಳಿಗೆ ಶ್ರೇಷ್ಠ ವಾಗಿವೆ. ಈ ದಿನಗಳಲ್ಲಿ ಪ್ರಾತಃಕಾಲ, ಸಂಗಮ ಕಾಲಗಳು ಅತ್ಯಂತ ಶ್ರೇಷ್ಟವು.

ವಿ.ವಿ.:- ಆರ್ದ್ರಾ ನಕ್ಷತ್ರದ ವಿಶೇಷವೆಂದರೆ ಆ ನಕ್ಷತ್ರಕ್ಕೆ ದೇವತೆ ರುದ್ರನೇ ಆಗಿದ್ದಾನೆ. ಎಲ್ಲಾ ಶಾಸ್ತ್ರದಲ್ಲೂ ಆರ್ದ್ರಾನಕ್ಷತ್ರದಲ್ಲಿ ಈಶ್ವರಾರಾಧನೆಗೆ ವಿಶೇಷವೆಂದು ಹೇಳಿದ್ದಾರೆ.

**ಚತುರ್ದಶೀ ತಥಾ ಗ್ರಾಹ್ಯಾ ನಿಶೀಥವ್ಯಾಪಿನೀ ಭವೇತ್ ।**
**ಪ್ರದೋಷವ್ಯಾಪಿನೀ ಚೈವ ಪರಯುಕ್ತಾ ಪ್ರಶಸ್ಯತೇ ॥೩೬॥**

೩೬ ಚತುರ್ದಶಿಯಲ್ಲಿ ನನ್ನನ್ನು ಆರಾಧಿಸಬೇಕಾದರೆ ರಾತ್ರಿ ವ್ಯಾಪಿನಿಯಾದ ಚತುರ್ದಶಿಯು ಶ್ರೇಷ್ಠವು. ಪ್ರದೇಷಕಾಲ ವ್ಯಾಪ್ತಿಯಿದ್ದು ಮುಂದಿನ ತಿಥಿಯುಕ್ತವಾಗಿದ್ದರೆ ವಿಶೇಷ ಫಲದಾಯಕವು.

**ಲಿಂಗಂ ಬೇರಂ ಚ ಮೇ ತುಲ್ಯಂ ಯಜತಾಂ ಲಿಂಗಮುತ್ತಮಂ ।**
**ತಸ್ಮಾಲ್ಲಿಂಗಂ ಪರಂ ಪೂಜ್ಯಂ ಬೇರಾದಪಿ ಮುಮುಕ್ಷುಭಿಃ ॥೩೭॥**

೩೭ ಲಿಂಗದಲ್ಲಿ ಹಾಗೂ ವಿಗ್ರದಲ್ಲಿ ನನ್ನನ್ನು ಪೂಜಿಸುವುದು ಸಮಾನವು. ಆದರೆ ಲಿಂಗದಲ್ಲಿ ನನ್ನನ್ನು ಪೂಜಿಸುವುದು ಉತ್ತಮ. ಆದ್ದರಿಂದ ವಿಗ್ರಕ್ಕಿಂತ ಲಿಂಗದಲ್ಲಿ ಮೋಕ್ಷೇಚ್ಛಗಳು ನನ್ನನ್ನು ಪೂಜಿಸಬೇಕು.

**ಲಿಂಗಮೋಂಕಾರಮಂತ್ರೇಣ ಬೇರಂ ಪಂಚಾಕ್ಷರೇಣ ತು ।**
**ಸ್ವಯಮೇವ ಹಿ ಸದ್ದ್ರವ್ಯೈಃ ಪ್ರತಿಷ್ಠಾಪ್ಯಂ ಪರೈರಪಿ ॥೩೮॥**

೩೮ ಲಿಂಗವು ಓಂಕಾರ ರೂಪವಾದುದು. ವಿಗ್ರಹವು ಪಂಚಾಕ್ಷರೀ ರೂಪವು. ಅದಕ್ಕಾಗಿ ಲಿಂಗವನ್ನು ವಿಶೇಷವಾಗಿ ಓಂಕಾರದಿಂದಲೂ, ವಿಗ್ರಹವನ್ನು ಪಂಚಾಕ್ಷರದಿಂದಲೂ ಸಹ ತಾನೇ ಉತ್ತಮ ದ್ರವ್ಯಗಳಿಂದಲೂ ಪ್ರತಿಷ್ಠಾಪಿಸಬೇಕು.

**ಪೂಜಯೇದುಪಚಾರೈಶ್ಚ ಮತ್ಪದಂ ಸುಲಭಂ ಭವೇತ್ ।**
**ಇತಿ ಶಾಸ್ಯ ತಥಾ ಶಿಷ್ಯೌತತ್ರೈವಾಂತರ್ಹಿತಃ ಶಿವಃ ॥39॥**

೩೯ ಬಳಿಕ ಸಕಲ ಉಪಚಾರಗಳಿಂದಲೂ ನನ್ನನ್ನು ಪೂಜಿಸಬೇಕು. ಹೀಗೆ ಮಾಡುವುದರಿಂದ ನನ್ನ ಸ್ಥಾನವು ಸುಲಭವಾಗಿ ಲಭಿಸುವುದು, ಎಂದು ಶಿಷ್ಯರಾದ ಬ್ರಹ್ಮ-ವಿಷ್ಣುಗಳಿಗೆ ಉಪದೇಶಿಸಿ ಈಶ್ವರನು ಅಲ್ಲಿಯೇ ಅಂತರ್ಧಾನನಾದನು.

**ಇತಿ ಶ್ರೀ ಶಿವಮಹಾಪುರಾಣೇ ವಿದ್ಯೇಶ್ವರಸಂಹಿತಾಯಾಂ ದಶಮೋಽಧ್ಯಾಯಃ**
**ಇಲ್ಲಿಗೆ ಶ್ರೀ ಶಿವಪುರಾಣದಲ್ಲಿ ವಿದ್ಯೇಶ್ವರ ಸಂಹಿತೆಯಲ್ಲಿ**
**ಹತ್ತನೇ ಅಧ್ಯಾಯವು ಮುಗಿದುದು.**

||ಶ್ರೀಃ||
||ಓಂ ನಮಃ ಶಿವಾಯ||
ಅಥ ಶ್ರೀ ಶಿವಮಹಾಪುರಾಣೇ
ವಿದ್ಯೇಶ್ವರಸಂಹಿತಾಯಾಂ

# ಏಕಾದಶೋಽಧ್ಯಾಯಃ

||ಋಷಯ ಊಚುಃ||
ಕಥಂ ಲಿಂಗಂ ಪ್ರತಿಷ್ಠಾಪ್ಯಂ ಕಥಂ ವಾ ತಸ್ಯ ಲಕ್ಷಣಂ |
ಕಥಂ ವಾ ತತ್ಸಮಭ್ಯರ್ಚ್ಯಂ ದೇಶೇ ಕಾಲೇ ಚ ಕೇನ ಹಿ ||೧||

೧ ಋಷಿಗಳು ಸೂತ ಮಹಾಮುನಿಯನ್ನು ಕುರಿತು ಪ್ರಶ್ನಿಸಿದರು. ಎಲೈ ಸೂತ ಮಹಾಮುನಿಯೇ ಹೇಗೆ ಲಿಂಗವನ್ನು ಪ್ರತಿಷ್ಠಾಪಿಸಬೇಕು ? ಅದರ ಲಕ್ಷಣವೇನು ? ಅದನ್ನು ಹೇಗೆ ಪೂಜಿಸಬೇಕು ? ಅದಕ್ಕೆ ದೇಶ, ಕಾಲಗಳು ಹೇಗೆ ? ಯಾರು ಪೂಜಿಸಬೇಕು ಎಂದು ಪ್ರಶ್ನಿಸಿದರು.

||ಸೂತ ಉವಾಚ||
ಯುಷ್ಮದರ್ಥಂ ಪ್ರವಕ್ಷ್ಯಾಮಿ ಬುಧ್ಯತಾಮವಧಾನತಃ |
ಅನುಕೂಲೇ ಶುಭೇ ಕಾಲೇ ಪುಣ್ಯೇ ತೀರ್ಥೇ ತಟೇ ತಥಾ ||೨||

೨ ಸೂತರು ಹೇಳುತ್ತಾರೆ. ಎಲೈ ಋಷಿಗಳಿರಾ ! ನಿಮಗಾಗಿ ಈ ವಿಷಯವನ್ನು ಹೇಳುವೆನು. ಸಾವಧಾನದಿಂದ ಕೇಳಿ. ಅನುಕೂಲಕರವಾದ ಶುಭಕಾಲದಲ್ಲಿ ಪುಣ್ಯಕರವಾದ ತೀರ್ಥ, ನದೀ ದಡಗಳಲ್ಲಿ ಹಾಗೆಯೇ,

ಯಥೇಷ್ಟಂ ಲಿಂಗಮಾರೋಪ್ಯಂ ಯತ್ರ ಸ್ಯಾನ್ನಿತ್ಯಮರ್ಚನಂ |
ಪಾರ್ಥಿವೇನ ತಥಾಪ್ಯೇನಂ ತೈಜಸೇನ ಯಥಾರುಚಿ ||3||

೩ ಎಲ್ಲಿ ಇಷ್ಟಬರುವುದೋ ಅಲ್ಲಿ ಲಿಂಗವನ್ನು ಪ್ರತಿಷ್ಠಾಪಿಸಬಹುದು. ಅಂತಹ ಪ್ರದೇಶದಲ್ಲಿ ನಿತ್ಯವೂ ಪೂಜೆಯು ನಡೆಯುವಂತಿರಬೇಕು. ಮಣ್ಣಿನಿಂದಾಗಲೀ,

ಲೋಹದಿಂದಾಗಲೀ ರಚಿಸಿದ ಲಿಂಗವನ್ನು ಅವರವರ ಇಚ್ಛೆಯಂತೆ ಪೂಜಿಸಬಹುದು.

**ಕಲ್ಪಲಕ್ಷಣಸಂಯುಕ್ತಂ ಲಿಂಗಂ ಪೂಜಾಫಲಂ ಲಭೇತ್ ।**
**ಸರ್ವಲಕ್ಷಣಸಂಯುಕ್ತಂ ಸದ್ಯಃ ಪೂಜಾಫಲಪ್ರದಂ ॥4॥**

೪ ಈ ರೀತಿ ಕಲ್ಪದಲ್ಲಿ ಹೇಳಿರುವಂತೆ ರಚಿಸಿ ಲಿಂಗವನ್ನು ಪೂಜಿಸಿದರೆ ಅದಕ್ಕೆ ತಕ್ಕಂತಹ ಫಲವು ಲಭಿಸುವುದು. ಕಲ್ಪದಲ್ಲಿ ಹೇಳಿರುವ ಎಲ್ಲಾ ಲಕ್ಷಣದಿಂದ ಕೂಡಿರುವ ಲಿಂಗದ ಪೂಜೆಯಿಂದ ತಕ್ಷಣವೇ ಪೂಜೆಗೆ ಫಲ ದೊರೆಕುವುದು.

**ಚರೇ ವಿಶಿಷ್ಯತೇ ಸೂಕ್ಷ್ಮಂ ಸ್ಥಾವರೇ ಸ್ಥೂಲಮೇವ ಹಿ ।**
**ಸಲಕ್ಷಣಂ ಸಪೀಠಂ ಚ ಸ್ಥಾನಯೇಚ್ಛಿವನಿರ್ಮಿತಂ ॥5॥**

೫ ಚರಲಿಂಗ (ಅಂದರೆ ಬೇಕಾದೆಡೆಯಲ್ಲಿ ತೆಗೆದುಕೊಂಡು ಹೋಗುವ ಲಿಂಗ) ಚಿಕ್ಕದಾಗಿ ಮಾಡಬೇಕು. ಸ್ಥಿರಲಿಂಗವೆಂದರೆ ದೇವಾಲಯಗಳಲ್ಲಿ ಒಂದೆಡೆ ಸ್ಥಾಪಿಸಿ ಪೂಜಿಸುವ ಲಿಂಗವನ್ನು ದೊಡ್ಡದಾಗಿ ಮಾಡಿಸಬಹುದು. ಎರಡೂ ಲಿಂಗಗಳನ್ನು ಲಕ್ಷಣಯುಕ್ತವಾಗಿ ಪೀಠ ಸಹಿತವಾಗಿ ಪ್ರತಿಷ್ಠಾಪಿಸಬೇಕು.

**ಮಂಡಲಂ ಚತುರಸ್ರಂ ವಾ ತ್ರಿಕೋಣಮಥವಾ ತಥಾ ।**
**ಖಟ್ವಾಂಗವನ್ಮಧ್ಯಸೂಕ್ಷ್ಮಂ ಲಿಂಗಪೀಠಂ ಮಹಾಫಲಂ ॥೬॥**

೬ ಚಚ್ಚೌಕವಾದ ಅಥವಾ ತ್ರಿಕೋಣವುಳ್ಳ, ಮಂಡಲವನ್ನು ನಿರ್ಮಿಸಬೇಕು. ಲಿಂಗದ ಪೀಠವು ಮಂಚದ ಕಾಲಿನಂತೆ ಮಧ್ಯದಲ್ಲಿ ಸಣ್ಣದಾಗಿರಬೇಕು. ಅಂತಹ ಪೀಠವು ಮಹಾ ಫಲವುಳ್ಳದ್ದಾಗಿರುವುದು.

**ಪ್ರಥಮಂ ಮೃಚ್ಛಿಲಾದಿಭ್ಯೋ ಲಿಂಗಂ ಲೋಹಾದಿಭಿಃ ಕೃತಂ ।**
**ಯೇನ ಲಿಂಗಂ ತೇನ ಪೀಠಂ ಸ್ಥಾವರೇ ಹಿ ವಿಶಿಷ್ಯತೇ ॥೭॥**

೭ ಮೊದಲು ಲಿಂಗವನ್ನು ಮಣ್ಣು, ಕಲ್ಲು ಮೊದಲಾದ ಯಾವ ವಸ್ತುವಿನಿಂದ ನಿರ್ಮಿಸಿರುತ್ತಾರೋ ಅದೇ ವಸ್ತುವಿನಿಂದ ಆ ಲಿಂಗಕ್ಕೆ ಪೀಠವನ್ನು ರಚಿಸಬೇಕು. ಲೋಹದಿಂದ ರಚಿಸಿದ್ದರೆ ಅದರಿಂದಲೇ ಪೀಠವನ್ನು ಮಾಡಿಸಬೇಕು.

ಲಿಂಗಂ ಪೀಠಂ ಚರೇ ತ್ವೇಕಂ ಲಿಂಗಂ ಬಾಣಕೃತಂ ವಿನಾ ।
ಲಿಂಗಪ್ರಮಾಣಂ ಕರ್ತ್ರೂಣಾಂ ದ್ವಾದಶಾಂಗುಲಮುತ್ತಮಂ ॥೮॥

೮ ಚರಲಿಂಗದಲ್ಲಿ ಬಾಣಲಿಂಗವನ್ನು ಬಿಟ್ಟು ಉಳಿದಂತಹ ಲಿಂಗಗಳಲ್ಲಿ ಲಿಂಗ ಪೀಠಗಳು ಸೇರಿರಬೇಕು. ಲಿಂಗಪ್ರಮಾಣವು ಕರ್ತೃವಿನ ಬೆರಳ ಅಳತೆಯಂತೆ ಹನ್ನೆರಡು ಅಂಗುಲವಿರುವುದು ಉತ್ತಮವು.

ನ್ಯೂನಂ ಚೇತ್ಫಲಮಲ್ಪಂ ಸ್ಯಾದಧಿಕಂ ನೈವ ದುಷ್ಯತೇ ।
ಕರ್ತುರೇಕಾಂಗುಲನ್ಯೂನಂ ಚರೇಽಪಿ ಚ ತಥೈವ ಹಿ ॥೯॥

೯ ಲಿಂಗವು ಚಿಕ್ಕದಾದರೆ ಸ್ವಲ್ಪ ಫಲಲಭಿಸುವುದು. ದೊಡ್ಡದಾದರೆ ದೋಷವಿಲ್ಲ. ಉತ್ತಮವು, ಚರಲಿಂಗಗಳಲ್ಲಿ ಕರ್ತೃವಿನ ಅಂಗುಲದಷ್ಟು ಚಿಕ್ಕದಾದ ಲಿಂಗವು ಉತ್ತಮವು.

ಆದೌ ವಿಮಾನಂ ಶಿಲ್ಪೇನ ಕಾರ್ಯಂ ದೇವಗಣೈರ್ಯುತಂ ।
ತತ್ರ ಗರ್ಭಗೃಹೇ ರಮ್ಯೇ ದೃಢೇ ದರ್ಪಣಸನ್ನಿಭೇ ॥೧೦॥

೧೦ ಮೊದಲು ಲಿಂಗಸ್ಥಾಪನೆಗಾಗಿ ಕನ್ನಡಿಯಂತೆ ನಿರ್ಮಲವಾದ, ಸುಂದರವಾದ ಗರ್ಭಗೃಹವನ್ನು ರಚಿಸಬೇಕು. ನಂತರ ಅದರ ಮೇಲ್ಭಾಗದಲ್ಲಿ ದೇವತೆಗಳಿಂದ ಕೂಡಿದ ಶಿಲ್ಪಸಹಿತವಾದ ವಿಮಾನವನ್ನು ಮಾಡಿಸಬೇಕು.

ವಿ.ವಿ.:- "ವಿಮಾನ"ವೆಂದರೆ 'ವಿಮಾನ ಗೋಪುರ' ಎಂದು ಅರ್ಥ. 'ಗರ್ಭಕೃಹದ ಮೇಲ್ಭಾಗದಲ್ಲಿರುವ ಚಿಕ್ಕ ಗೋಪುರಕ್ಕೆ ವಿಮಾನ'ವೆಂದು ಆಗಮ ಶಾಸ್ತ್ರಗಳಲ್ಲಿ ಹೇಳಿದ್ದಾರೆ. ಇದಕ್ಕೆ 'ಸ್ಥೂಲಲಿಂಗ'ವೆಂತಲೂ ಹೇಳಿದ್ದಾರೆ.

"ಸ್ಥೂಲಲಿಂಗಂ ವಿಮಾನಂಸ್ಯಾತ್ ಸೂಕ್ಷ್ಮಲಿಂಗಂ ಸದಾಶಿವ।
ಬಲಿಪೀಠಂ ಭದ್ರಲಿಂಗಂ ಲಿಂಗತ್ರಯಮಿತೀರಿತಂ ॥" ಎಂದು

ಅಂದರೆ 'ವಿಮಾನವು ಸ್ಥೂಲಲಿಂಗ', ಗರ್ಭಗೃಹದಲ್ಲಿ ಸ್ಥಾಪಿಸಿರುವ ಶಿವಲಿಂಗವು ಸೂಕ್ಷ್ಮ ಲಿಂಗ ಬಲಿಪೀಠವೇ ಭದ್ರಲಿಂಗ ಎಂದು ಮೂರು ವಿಧವಾದ ಲಿಂಗಗಳು. ಸಾಮಾನ್ಯವಾಗಿ ಶೈವಾಗಮಶಾಸ್ತ್ರೋಕ್ತವಾದ ದೇವಾಲಯಗಳಲ್ಲಿ ಈ ರೀತಿ ಇರುವುದು. ಮೂರೂ ಲಿಂಗಗಳ ದರ್ಶನವು ಸಮಾನವಾದುದು.

ಭೂಷಿತೇ ನವರತ್ನೈಶ್ಚ ದಿಗ್ದ್ವಾರೇ ಚ ಪ್ರಧಾನಕೇ ।
ನೀಲಂ ರಕ್ತಂ ಚ ವೈಢೂರ್ಯಂ ಶ್ಯಾಮಂ ಮರಕತಂ ತಥಾ ॥೧೧॥

೧೧ ಪ್ರಧಾನವಾದ ದಿಗ್ದ್ವಾರವು ನವರತ್ನಗಳಿಂದ ಅಲಂಕರಿಸಲ್ಪಟ್ಟು ಅತ್ಯಂತ ಸುಂದರವಾಗಿರಬೇಕು. ಆ ನವರತ್ನಗಳಾವುವೆಂದರೆ, ನೀಲ, ಕೆಂಪು (ಮಾಣಿಕ್ಯ) ವೈಢೂರ್ಯ, (ಪುಷ್ಯರಾಗ) ಶ್ಯಾಮ, ಮರಕತ (ಪಚ್ಚೆ), ಮುತ್ತು, ಹವಳ, ಗೋಮೇದಕ, ವಜ್ರ.

ಮುಕ್ತಾಪ್ರವಾಳಗೋಮೇದವಜ್ರಾಣಿ ನವರತ್ನಕಂ ।
ಮಧ್ಯೇ ಲಿಂಗಂ ಮಹದ್ದ್ರವ್ಯಂ ನಿಃಕ್ಷಿಪೇತ್ಸವೈದಿಕೇ ॥೧೨॥

೧೨ ಗರ್ಭಗೃಹದ ಮಧ್ಯದಲ್ಲಿ ಲಿಂಗವನ್ನು ದ್ರವ್ಯಗಳಿಂದೊಡಗೂಡಿ ವೇದೋಕ್ತವಾಗಿ ಸ್ಥಾಪಿಸಬೇಕು.

ಪಂಪೂಜ್ಯ ಲಿಂಗಂ ಸದ್ಯಾದ್ಯೈಃ ಪಂಚಸ್ಥಾನೇ ಯಥಾಕ್ರಮಂ ।
ಅಗ್ನೌ ಚ ಹುತ್ವಾ ಬಹುಧಾ ಹವಿಷಾ ಸಕುಲಂ ಚ ಮಾಂ ॥೧೩॥

೧೩ ಕ್ರಮವಾಗಿ ಸದ್ಯೋಜಾತಾದಿ ಐದು ಮಂತ್ರಗಳಿಂದ ಐದು ಸ್ಥಾನಗಳಲ್ಲಿ ಪೂಜಿಸಿ ಅಗ್ನಿ ಪ್ರತಿಷ್ಠೆಯನ್ನು ಮಾಡಿ ಆ ಅಗ್ನಿಯಲ್ಲಿ ಸಪರಿವಾರವಾದ ನನ್ನನ್ನು ಹೋಮಗಳಿಂದ ತೃಪ್ತಿಪಡಿಸಬೇಕು.

ಅಭ್ಯರ್ಚ್ಯ ಗುರುಮಾಚಾರ್ಯಮರ್ಥೈಃ ಕಾಮೈಶ್ಚ ಬಾಂಧವಂ ।
ದದ್ಯಾದೈಶ್ವರ್ಯಮರ್ಥಿಭ್ಯೋ ಜಡಮಪ್ಯಜಡಂ ತಥಾ ॥೧೪॥

೧೪ ನಂತರ ಆಚಾರ್ಯನನ್ನೂ ಶಿಲ್ಪಿಯನ್ನೂ ಸಹ ಪೂಜಿಸಿ ಸತ್ಕರಿಸಬೇಕು. ಹಾಗೇ ಬಂಧು ಬಾಂಧವರನ್ನೂ ಸಹ ತೃಪ್ತಿ ಪಡಿಸಿ, ನಂತರ ಬೇಡುವವರಿಗೆ ಐಶ್ವರ್ಯಾದಿಗಳಿಂದತೃಪ್ತಿಪಡಿಸಿ ಚೇತನವಾದ ಗೋವು ಮೊದಲಾದುವನ್ನು ಅಚೇತನವಾದ ದ್ರವ್ಯಾದಿಗಳನ್ನು ದಾನ ಮಾಡಬೇಕು.

ಸ್ಥಾವರಂ ಜಂಗಮಂ ಜೀವಂ ಸರ್ವಂ ಸಂತೋಷ್ಯ ಯತ್ನತಃ ।
ಸುವರ್ಣಪೂರಿತೇ ಶ್ವಭ್ರೇ ನವರತ್ನೈಶ್ಚ ಪೂರಿತೇ ॥೧೫॥

೧೫ ಚರ, ಸ್ಥಿರ, ಪ್ರಾಣಿಗಳನ್ನು ಪ್ರಯತ್ನಪೂರ್ವಕ ತೃಪ್ತಿಪಡಿಸಿ, ಸುವರ್ಣ, ನವರತ್ನಗಳಿಂದತುಂಬಿರುವ ಗರ್ತದಲ್ಲಿ (ಲಿಂಗ ಸ್ಥಾಪಿಸುವ ಹಳ್ಳದಲ್ಲಿ),

ಸದ್ಯಾದಿ ಬ್ರಹ್ಮ ಚೋಚ್ಚಾರ್ಯ ಧ್ಯಾತ್ವಾ ದೇವಂ ಪರಂ ಶುಭಂ ।
ಉದೀರ್ಯ ಚ ಮಹಾಮಂತ್ರಮೋಂಕಾರಂ ನಾದಘೋಷಿತಂ ॥೧೬॥

೧೬ ಸದ್ಯೋಜಾತಾದಿ ಪಂಚಬ್ರಹ್ಮ ಮಂತ್ರವನ್ನುಚ್ಚರಿಸುತ್ತಾ, ಶ್ರೇಷ್ಠನೂ, ಶುಭಕರನೂ ಆದ ದೇವನಾದ ಈಶ್ವರನನ್ನು ಧ್ಯಾನಿಸುತ್ತಾ ಹಾಗೇ ಓಂಕಾರವನ್ನು ನಾದ ಪೂರ್ವಕಪಠಿಸುತ್ತಾ,

ಲಿಂಗಂ ತತ್ರ ಪ್ರತಿಷ್ಠಾಪ್ಯ ಲಿಂಗಂ ಪೀಠೇನ ಯೋಜಯೇತ್ ।
ಲಿಂಗಂ ಸಪೀಠಂ ನಿಕ್ಷಿಪ್ಯ ನಿತ್ಯಲೇಪೇನ ಬಂಧಯೇತ್ ॥೧೭॥

೧೭ ಲಿಂಗವನ್ನು ಪೀಠದ ಗರ್ತದಲ್ಲಿ ಸ್ಥಾಪಿಸಿ ಪೀಠದೊಡನೆ ಲಿಂಗವನ್ನು ಸೇರಿಸಬೇಕು. ಹಾಗೆ ಸೇರಿಸುವಾಗ ಲಿಂಗ ಮತ್ತು ಪೀಠವನ್ನು ಅಷ್ಟಬಂಧನಗಳಿಂದ ಗಟ್ಟಿಯಾಗಿ ಬಂಧಿಸಬೇಕು.

ಏವಂ ಬೇರಂ ಚ ಸಂಸ್ಥಾಪ್ಯಂ ತತ್ರೈವ ಪರಮಂ ಶುಭಂ ।
ಪಂಚಾಕ್ಷರೇಣ ಬೇರಂ ತು ಉತ್ಸವಾರ್ಥಂ ಬಹಿಸ್ತಥಾ ॥೧೮॥

೧೮ ಈ ರೀತಿಯಾಗಿ ಲಿಂಗಸ್ಥಾಪನೆಯಾದ ಮೇಲೆ ಶಿವನ ಉತ್ಸವಕ್ಕಾಗಿ ಉತ್ಸವಮೂರ್ತಿಯನ್ನೂ ಸಹ ಪಂಚಾಕ್ಷರೀ ಮಂತ್ರದಿಂದ ಪ್ರತಿಷ್ಠಾಪಿಸಬೇಕು.

ಬೇರಂ ಗುರುಭ್ಯೋ ಗೃಹ್ಣೀಯಾತ್ಸಾಧುಭಿಃ ಪೂಜಿತಂ ತು ವಾ ।
ಏವಂ ಲಿಂಗೇ ಚ ಬೇರೇ ಚ ಪೂಜಾ ಶಿವಪದಪ್ರದಾ ॥೧೯॥

೧೯ ಈ ರೀತಿಯಾದ ಈಶ್ವರನ ವಿಗ್ರಹವನ್ನು ಗುರುವಿನಿಂದಾಗಲಿ ಅಥವಾ ಸಾಧುಗಳಿಂದಾಗಲಿ ಪೂಜಿಸಲ್ಪಟ್ಟಿದ್ದನ್ನು ತೆಗೆದುಕೊಳ್ಳಬೇಕು. ಹೀಗೆ ಲಿಂಗದಲ್ಲಿಯೂ, ವಿಗ್ರಹದಲ್ಲಿಯೂ ಶಿವನನ್ನು ಪೂಜಿಸಿದರೆ ಶಿವಲೋಕವು ಪ್ರಾಪ್ತವಾಗುವುದು.

ಪುನಶ್ಚ ದ್ವಿವಿಧಂ ಪ್ರೋಕ್ತಂ ಸ್ಥಾವರಂ ಜಂಗಮಂ ತಥಾ ।
ಸ್ಥಾವರಂ ಲಿಂಗಮಿತ್ಯಾಹುಸ್ತರುಗುಲ್ಮಾದಿಕಂ ತಥಾ ॥೨೦॥

೨೦ ಮತ್ತೆ ಲಿಂಗವು ಎರಡು ವಿಧ. ಸ್ಥಾವರ, ಜಂಗಮ ಎಂದು. ಮರ, ಪೊದೆ ಮುಂತಾದುವು ಸ್ಥಾವರ ಲಿಂಗವೆಂತಲೂ,

ಜಂಗಮಂ ಲಿಂಗಮಿತ್ಯಾಹುಃ ಗೃಮಿಕೀಟಾದಿಕಂ ತಥಾ ।
ಸ್ಥಾವರಸ್ಯ ಶುಶ್ರೂಷಾ ಜಂಗಮಸ್ಯ ಚ ತರ್ಪಣಂ ॥೨೧॥

೨೧ ಕ್ರಿಮೀ, ಕೀಟಾದಿಗಳು ಜಂಗಮದೆಂತಲೂ ತಿಳಿಯಬೇಕು. ಸ್ಥಾವರ ಲಿಂಗವನ್ನು ಸೇವಿಸಬೇಕು. ಜಂಗಮ ಲಿಂಗವನ್ನು ಆಯಾಯಾ ಸುಖದ ಅನುರಾಗದಿಂದ ತೃಪ್ತಿಗೊಳಿಸಬೇಕು.

ತತ್ತತ್ಸುಖಾನುರಾಗೇಣ ಶಿವಪೂಜಾಂ ವಿದುರ್ಬುಧಾಃ ।
ಪೀಠಮಂಬಾಮಯಂ ಸರ್ವಂ ಶಿವಲಿಂಗಂ ಚ ಚಿನ್ಮಯಂ ॥೨೨॥

೨೨ ಆಯಾ ಲಿಂಗಕ್ಕೆ ತಕ್ಕಂತೆ ತೃಪ್ತಿಪಡಿಸುವುದೂ ಸಹ ಶಿವಪೂಜೆಯೆಂದು ವಿದ್ವಾಂಸರು ತಿಳಿಯುತ್ತಾರೆ. ಪೀಠವು ಪಾರ್ವತೀ ಸ್ವರೂಪವಾದುದು. ಶಿವಲಿಂಗವು ಜ್ಞಾನಸ್ವರೂಪನಾದ ಈಶ್ವರನೂ ಆಗಿರುವುದು.

ಯಥಾ ದೇವೀಮುಮಾಮಂಕೇ ಧೃತ್ವಾ ತಿಷ್ಠತಿ ಶಂಕರಃ ।
ತಥಾ ಲಿಂಗಮಿದಂ ಪೀಠಂ ಧೃತ್ವಾ ತಿಷ್ಠತಿ ಸಂತತಂ ॥೨೩॥

೨೩ ಹೇಗೆ ಪರಮೇಶ್ವರನು ತನ್ನ ತೊಡೆಯ ಮೇಲೆ ಪಾರ್ವತಿಯನ್ನು ಕುಳ್ಳಿರಿಸಿಕೊಂಡಿರುವನೋ ಹಾಗೆ ಈ ಶಿವಲಿಂಗವೂ ಸಹ ಪೀಠವನ್ನು ಸದಾ ಧರಿಸಿರುವುದು ಎಂದರೆ ಯಾವಾಗಲೂ ಲಿಂಗ ಪೀಠಸಹಿತವಾಗಿಯೇ ಇರಬೇಕು.

ಏವಂ ಸ್ಥಾಪ್ಯ ಮಹಾಲಿಂಗಂ ಪೂಜಯೇದುಪಚಾರಕೈಃ ।
ನಿತ್ಯಪೂಜಾ ಯಥಾಶಕ್ತಿ ಧ್ವಜಾದಿಕರಣಂ ತಥಾ ॥೨೪॥

೨೪ ಈ ರೀತಿಯಾಗಿ ಮಹಾಲಿಂಗವನ್ನು ಪ್ರತಿಷ್ಠಾಪಿಸಿ ಷೋಡಶೋಪಚಾರಗಳಿಂದ ನಿತ್ಯವೂ ಯಥಾ ಶಕ್ತಿ ಪೂಜಿಸಿಬೇಕು. ಹಾಗೆಯೇ ಧ್ವಜಾದಿಗಳನ್ನೂ ಮಾಡಬೇಕು.

ಇತಿ ಸಂಸ್ಥಾಪಯೇಲ್ಲಿಂಗಂ ಸಾಕ್ಷಾಚ್ಛಿವಪದಪ್ರದಂ ।
ಅಥ ವಾ ಚರಲಿಂಗೇ ತು ಷೋಡಶೈರುಪಚಾರಕೈಃ ॥೨೫॥

೨೫ ಈ ರೀತಿಯಾಗಿ ಸಾಕ್ಷಾತ್ತಾಗಿ ಶಿವಲೋಕವನ್ನು ಉಂಟುಮಾಡುವ ಲಿಂಗವನ್ನು ಸ್ಥಾಪಿಸಬೇಕು. ಅಥವಾ ಹಿಂದೆ ಹೇಳಿದ ಚರಲಿಂಗದಲ್ಲಿಯೇ ಷೋಡಶೋಪಚಾರಗಳಿಂದ

ಲಿಂಗವನ್ನು ನಿತ್ಯವೂ ಪೂಜಿಸಬೇಕು.

**ಪೂಜಯೇಚ್ಚ ಯಥಾನ್ಯಾಯಂ ಕ್ರಮಾಚ್ಛಿವಪದಪ್ರದಂ |**
**ಆವಾಹನಂ ಚಾಸನಂ ಚ ಅರ್ಘ್ಯಂ ಪಾದ್ಯಂ ತಥೈವ ಚ ||೨೬||**

೨೬ ಈ ರೀತಿಯಾದ ಕ್ರಮಗಳಿಂದ ಪೂಜಿಸುವಿಕೆಯಿಂದ ಶಿವಪದಪ್ರಾಪ್ತವಾಗುವುದು. (1)ಆವಾಹನ (2) ಆಸನ (3)ಅರ್ಘ್ಯ (4)ಪಾದ್ಯ (5)ಹಾಗೇ

**ತದಂಗಾಚಮನಂ ಚೈವ ಸ್ನಾನಮಭ್ಯಂಗಪೂರ್ವಕಂ |**
**ವಸ್ತ್ರಂ ಗಂಧಂ ತಥಾ ಪುಷ್ಪಂ ಧೂಪಂ ದೀಪಂ ನಿವೇದನಂ ||೨೭||**

೨೭ ಅದಕ್ಕೆ ಅಂಗವಾದ (6)ಆಚಮನ (7)ಸ್ನಾನ (ತೈಲಾಭಿಷೇಕ ಸಹಿತ) (8)ವಸ್ತ್ರ ಗಂಧ (10)ಪುಷ್ಪ (11)ಧೂಪ (12)ದೀಪ (13)ನೈವೇದ್ಯ,

**ನೀರಾಜನಂ ಚ ತಾಂಬೂಲಂ ನಮಸ್ಕಾರೋ ವಿಸರ್ಜನಂ |**
**ಅಥವಾರ್ಘ್ಯಾದಿಕಂ ಕೃತ್ವಾ ನೈವೇದ್ಯಾಂತಂ ಯಥಾವಿಧಿ ||೨೮||**

೨೮ (14)ನೀರಾಜನ (15)ತಾಂಬೂಲ (16)ನಮಸ್ಕಾರ (17)ವಿಸರ್ಜನ ಅಥವಾ ಅಅರ್ಘ್ಯಾದಿಗಳನ್ನು ಅರ್ಪಿಸಿ ನೈವೇದ್ಯಾಂತದವರೆವಿಗೆ ಮಾಡಬಹುದು.

**ಅಥಾಭಿಷೇಕಂ ನೈವೇದ್ಯಂ ನಮಸ್ಕಾರಂ ಚ ತರ್ಪಣಂ |**
**ಯಥಾಶಕ್ತಿ ಸದಾ ಕುರ್ಯಾತ್ಕ್ರಮಾಚ್ಛಿವಪದಪ್ರದಂ ||೨೯||**

೨೯ ಹಾಗೇ ಅಭಿಷೇಕ, ನೈವೇದ್ಯ, ನಮಸ್ಕಾರ, ತರ್ಪಣ ಇವುಗಳನ್ನು ಯಥಾಶಕ್ತಿಯಾಗಿ ಯಾವಾಗಲೂ ಮಾಡಬೇಕು. ಈ ರೀತಿಯಾದ ಕ್ರಮವು ಶಿವಪದಪ್ರಾಪ್ತಿ ಕಾರಣವಾಗಿರುವುದು.

**ಅಥವಾ ಮಾನುಷೇ ಲಿಂಗೇಽಪ್ಯಾರ್ಷೇ ದೈವೇ ಸ್ವಯಂಭುವಿ |**
**ಸ್ಥಾಪಿತೇಽಪೂರ್ವಕೇ ಲಿಂಗೇ ಸೋಪಚಾರಂ ಯಥಾ ತಥಾ ||೩೦||**

೩೦ ಅಥವಾ ಮನುಷ್ಯರಿಂದ ಸ್ಥಾಪಿಸಲ್ಪಟ್ಟ ಲಿಂಗದಲ್ಲಾಗಲೀ, ಋಷಿಗಳಿಂದ, ದೇವತೆಗಳಿಂದ ಸ್ಥಾಪಿಸಲ್ಪಟ್ಟ, ಸ್ವಯಂ ವ್ಯಕ್ತವಾದ ಲಿಂಗಗಳಲ್ಲಾಗಲೀ ಉಪಚಾರಗಳನ್ನು

**ಪೂಜೋಪಕರಣೇ ದತ್ತೇ ಯತ್ಕಿಂಚಿತ್ಫಲಮಶ್ನುತೇ ।**
**ಪ್ರದಕ್ಷಿಣನಮಸ್ಕಾರೈಃ ಕ್ರಮಾಚ್ಛಿವಪದಪ್ರದಂ ॥೩೧॥**

೩೧ ಅಂದರೆ ಪೂಜಾ ಸಾಮಗ್ರಿಗಳನ್ನು ಅರ್ಪಿಸುವುದು. ಅದಕ್ಕೆ ತಕ್ಕಂತಹ ಫಲವು ಲಭಿಸುವುದು. ಹಾಗೇ ಪ್ರದಕ್ಷಿಣೆ, ನಮಸ್ಕಾರಗಳಿಂದಲೂ ಶಿವಪದಪ್ರಾಪ್ತಿಯಾಗುವುದು.

**ಲಿಂಗದರ್ಶನಮಾತ್ರಂ ವಾ ನಿಯಮೇನ ಶಿವಪ್ರದಂ ।**
**ಮೃತ್ಪಿಷ್ಟಗೋಶಕೃತ್ಪುಷ್ಪೈಃ ಕರವೀರೇಣ ವಾ ಫಲೈಃ ॥೩೨॥**

೩೨ ಅಥವಾ ಕೇವಲ ಲಿಂಗದರ್ಶನವನ್ನು ನಿಯಮಿತವಾಗಿ ಮಾಡುವುದರಿಂದ ಶಿವಪದ ಪ್ರಾಪ್ತವಾಗುವುದು ಅಥವಾ, ಮಣ್ಣು, ಹಿಟ್ಟು, ಹಸುವಿನ ಸಗಣಿ ಕರವೀರ ಪುಷ್ಪ, ಫಲ,

**ಗುಡೇನ ನವನೀತೇನ ಭಸ್ಮನಾನ್ನೈರ್ಯಥಾರುಚಿ ।**
**ಲಿಂಗಂ ಯತ್ನೇನ ಕೃತ್ವಾಂತೇ ಯಜೇತ್ತದನುಸಾರತಃ ॥೩೩॥**

೩೩ ಬೆಲ್ಲ, ಬೆಣ್ಣೆ, ಭಸ್ಮ, ಅನ್ನ ಹೀಗೆ ಯಾವುದು ಇಷ್ಟವೋ ಅದರಲ್ಲೇ ಶಿವಲಿಂಗವನ್ನು ಮಾಡಿ ಅದಕ್ಕೆ ತಕ್ಕಂತೆ ಪೂಜಿಸಬಹುದು.

**ಅಂಗುಷ್ಠಾದಾವಪಿ ತಥಾ ಪೂಜಾಮಿಚ್ಛಂತಿ ಕೇಚನ ।**
**ಲಿಂಗಕರ್ಮಣಿ ಸರ್ವತ್ರ ನಿಷೇಧೋऽಸ್ತಿ ನ ಕರ್ಹಿಚಿತ್ ॥೩೪\f2**

೩೪ ಕೆಲವರು ತಮ್ಮ ಕೈಯಿನ ಅಂಗುಷ್ಟ (ಹೆಬ್ಬೆರಳು) ಮುಂತಾದುವುಗಳಲ್ಲಿಯೂ ಪೂಜೆಯನ್ನು ಸಮರ್ಪಿಸುವರು. ಲಿಂಗವನ್ನು ಮಾಡಲು ಯಾವ ವಸ್ತುವೂ ನಿಷೇಧವಲ್ಲವು. ಎಲ್ಲಾ ವಸ್ತುಗಳಲ್ಲಿ ಲಿಂಗವನ್ನು ಮಾಡಬಹುದು.

**ಸತ್ರ ಫಲದಾತಾ ಹಿ ಪ್ರಯಾಸಾನುಗುಣಂ ಶಿವಃ ।**
**ಅಥವಾ ಲಿಂಗದಾನಂ ವಾ ಲಿಂಗಮೌಲ್ಯಮಥಾಪಿ ವಾ ॥೩೫॥**

೩೫ ಎಲ್ಲಾ ಕಡೆಯಲ್ಲಿಯೂ ಅದರ ಪ್ರಯಾಸಕ್ಕೆ ಅನುಗುಣವಾಗಿ ಶಿವಪೂಜೆಗೆ ಈಶ್ವರನು ಫಲವನ್ನು ಅನುಗ್ರಹಿಸುವನು. ಅಥವಾ ಯೋಗ್ಯನಾದ ಶಿವಭಕ್ತನಿಗೆ ಲಿಂಗವನ್ನು ದಾನಮಾಡುವಿಕೆ ಅಥವಾ ಅದರ ಬೆಲೆಯ ಹಣವನ್ನು ಶ್ರದ್ಧೆಯಿಂದ ದಾನ

ಮಾಡಿದರೆ ಶಿವಪದಪ್ರಾಪ್ತಿ ಆಗುವುದು.

ಶ್ರದ್ಧಯಾ ಶಿವಭಕ್ತಾಯ ದತ್ತಂ ಶಿವಪದಪ್ರದಂ ।
ಅಥವಾ ಪ್ರಣವಂ ನಿತ್ಯಂ ಜಪೇದ್ದಶಸಹಸ್ರಕಂ ॥೩೬॥

೩೬ ಈ ರೀತಿಯಾಗಿ ಶ್ರದ್ಧೆಯಿಂದ ದಾನ ಮಾಡಬೇಕು. ಹಾಗಿಲ್ಲದಿದ್ದರೆ ಓಂಕಾರವನ್ನು ನಿತ್ಯವೂ ಹತ್ತು ಸಾವಿರ ಸಾರಿ ಜಪ ಮಾಡಬೇಕು.

ಸಂಧ್ಯಯೋಶ್ಚ ಸಹಸ್ರಂ ವಾ ಜ್ಞೇಯಂ ಶಿವಪದಪ್ರದಂ ।
ಜಪಕಾಲೇ ಮಕಾರಾಂತಂ ಮನಶ್ಶುದ್ಧಿಕರಂ ಭವೇತ್ ॥೩೭॥

೩೭ ಇಲ್ಲದಿದ್ದರೆ ಸಂಧ್ಯಾಕಾಲಗಳಲ್ಲಿ ಸಾವಿರ ಸಾವಿರ ಸಾರಿ ಜಪ ಮಾಡುವಿಕೆಯಿಂದ ಶಿವಪದಪ್ರಾಪ್ತವಾಗುವುದು. ಜಪ ಕಾಲದಲ್ಲಿ ಓಂ ಎಂದು ಮಕಾರಾಂತವಾಗಿ ಜಪಿಸುವುದರಿಂದ ಮನಶ್ಶುದ್ಧಿಯಾಗುವುದು.

ಸಮಾಧೌ ಮಾನಸಂ ಪ್ರೋಕ್ತಮುಪಾಂಶು ಸಾರ್ವಕಾಲಿಕಂ ।
ಸಮಾನಪ್ರಣವಂ ಚೇದಂ ಬಿಂದುನಾದಯಿತಂ ವಿದುಃ ॥೩೮॥

೩೮ ಸಮಾಧಿಯಲ್ಲಿ (ಅಂದರೆ ಏಕಾಗ್ರತೆಯಿಂದ ಜಪಿಸುವ ಕಾಲದಲ್ಲಿ ಮನಸ್ಸಿನಲ್ಲೇ ಜಪಿಸುವುದು) ಶ್ರೇಷ್ಠ . ಉಳಿದ ಕಾಲದಲ್ಲಿ ಕೇವಲ ತುಟಿಗಳನ್ನು ಆಡಿಸುತ್ತಾ ಬೇರೆಯವರಿಗೆ ಕೇಳದಂತೆ ಉಚ್ಚರಿಸಬೇಕು. ಬಿಂದು, ನಾದಗಳೊಡನೆ ಗಟ್ಟಿಯಾಗಿ ಓಂಕಾರವನ್ನು ಉಚ್ಚರಿಸಿದ ಫಲವೇ ದೊರಕುವುದು.

ಅಥ ಪಂಚಾಕ್ಷರಂ ನಿತ್ಯಂ ಜಪೇದಯುತಮಾದರಾತ್ ।
ಸಂಧ್ಯಯೋಶ್ಚ ಸಹಸ್ರಂ ವಾ ಜ್ಞೇಯಂ ಶಿವಪದಪ್ರದಂ ॥೩೯॥

೩೯ ಅಲ್ಲದೇ ಶಿವಪಂಚಾಕ್ಷರ ಮಂತ್ರವನ್ನು ಪ್ರತಿದಿನ ಹತ್ತು ಸಾವಿರ ಬಾರಿ ಜಪಿಸಬೇಕು. ಪ್ರಾತಃ, ಸಂಧ್ಯಾ, ಸಾಯಂ ಸಂಧ್ಯಾಕಾಲಗಳಲ್ಲಿ ಸಾವಿರ ಸಾವಿರ ಸಂಖ್ಯೆಯಿಂದ ಜಪಿಸಿದರೆ ಶಿವಪದವು ಲಬಿಸುವುದು.

ಪ್ರಣವೇನಾದಿಸಂಯುಕ್ತಂ ಬ್ರಾಹ್ಮಣಾನಾಂ ವಿಶಿಷ್ಯತೇ ।

ದೀಕ್ಷಾಯುಕ್ತಂ ಗುರೋರ್ಗ್ರಾಹ್ಯಂ ಮಂತ್ರಂ ಹ್ಯಥ ಫಲಾಪ್ತಯೇ ||೪೦||

೪೦ ಆದಿಯಲ್ಲಿ ಓಂಕಾರಯುಕ್ತವಾದ ಪಂಚಾಕ್ಷರೀ ಮಂತ್ರವು ಬ್ರಾಹ್ಮಣರಿಗೆ ಯುಕ್ತವಾದುದು. ಮಂತ್ರವನ್ನು ದೀಕ್ಷಾ ಪೂರ್ವಕವಾಗಿ ಗುರುಗಳಿಂದ ಪಡೆಯುವುದರಿಂದ ಫಲ ಪ್ರಾಪ್ತವಾಗುವುದು.

ಕುಂಭಸ್ನಾನಂ ಮಂತ್ರದೀಕ್ಷಾ ಮಾತೃಕಾನ್ಯಾಸಮೇವ ಚ |
ಬ್ರಾಹ್ಮಣಃ ಸತ್ಯಪೂತಾತ್ಮಾ ಗುರುರ್ಜ್ಞಾನೀ ವಿಶಿಷ್ಯತೇ ||೪೧||

೪೧ ಕಲಶ ಸ್ನಾನ, ಮಂತ್ರದೀಕ್ಷಾ, ಮಾತೃಕಾನ್ಯಾಸ ಇವುಗಳನ್ನೂ ಮಾಡಬೇಕು. ಇಂತಹ ಕಾರ್ಯಗಳನ್ನು ಸತ್ಯವಂತನೂ, ಪರಿಶುದ್ಧವಾದ ಮನವುಳ್ಳವನೂ, ಜ್ಞಾನಿಯೂ ಆದ ಬ್ರಾಹ್ಮಣ ಗುರುವು ಮಾಡಬೇಕು. ಅದಕ್ಕಾಗಿ ಇಂತಹ ಗುಣಗಳುಳ್ಳ ಬ್ರಾಹ್ಮಣನನ್ನೇ ಗುರುವಾಗಿ ಮಾಡಿಕೊಳ್ಳಬೇಕು.

ದೀಕ್ಷೆ ಎಂದರೆ 'ದೀಯತೇ ಜ್ಞಾನಸಂಪತ್ತಿ, ಕ್ಷೀಯತೇ ಕರ್ಮವಾಸನಾ' ಎಂದು. ಅಂದರೆ ದಿವ್ಯಜ್ಞಾನವನ್ನು ನೀಡಿ ಕರ್ಮಸಂಬಂಧವನ್ನು ನಾಶಪಡಿಸುವುದು. ಈ ರೀತಿಯಾದ ಉತ್ತಮ ಕಾರ್ಯವನ್ನು ಉತ್ತಮವಾದ ಆಚಾರ, ವಿಚಾರಗಳುಳ್ಳ ತ್ರಿಕರಣಶುದ್ಧನಾದ ಆಚಾರ್ಯನು ಮಾತ್ರ ಮಾಡಬೇಕು. ಎಂದರೆ ದೀಕ್ಷಾದಿಗಳನ್ನು ನೀಡಲು ತನ್ನಲ್ಲಿ ಇಂತಹ ಶಕ್ತಿಗಳನ್ನು ಹೆಚ್ಚಿಸಿಕೊಳ್ಳಬೇಕೆಂದು ಅಭಿಪ್ರಾಯ.

ದ್ವಿಜಾನಂ ಚ ನಮಃ ಪೂರ್ವಮನ್ಯೇಷಾಂ ಚ ನಮೋಂsತಕಂ |
ಸ್ತ್ರೀಣಾಂ ಚ ಕಚಿದಿಚ್ಛಂತಿ ನೋಂsತಂ ಚ ಯಥಾವಿಧಿ ||೪೨||

೪೨ ಬ್ರಾಹ್ಮಣರು ಪಂಚಾಕ್ಷರೀ ಮಂತ್ರವನ್ನು ನಮಃಪದಾದಿಯಾಗಿ ಉಚ್ಚರಿಸಬೇಕು. ಉಳಿದವರು ಪಂಚಾಕ್ಷರೀ ಮಂತ್ರ ಜಪದಲ್ಲಿ ಅಂತ್ಯದಲ್ಲಿ ನಮಃಕಾರವನ್ನು ಸೇವಿಸಬೇಕು. ಕೆಲವರು ಸ್ತ್ರೀಯರೂ ಸಹ ಪಂಚಾಕ್ಷರೀ ಮಂತ್ರವನ್ನು ನಮೋಂತವಾಗಿ ಜಪಿಸಬಹುದೆಂದು ಹೇಳುವರು.

ವಿಪ್ರಸ್ತ್ರೀಣಾಂ ನಮಃಪೂರ್ವಮಿದಮಿಚ್ಛಂತಿ ಕೇಚನ |
ಪಂಚಕೋಟಿಜಪಂ ಕೃತ್ವಾ ಸದಾಶಿವಸಮೋ ಭವೇತ್ ||೪೩||

೪೩ ಮತ್ತೆ ಕೆಲವರು ವಿಪ್ರರ ಸ್ತ್ರೀಯರು ನಮಃಕಾರಪೂರ್ವಕವಾಗಿ ಪಂಚಾಕ್ಷರೀ

ಮಂತ್ರವನ್ನು ಜಪಿಸಬಹುದೆಂದೂ ಅಭಿಪ್ರಾಯಪಡುತ್ತಾರೆ. ಐದು ಕೋಟಿ ಶಿವಪಂಚಾಕ್ಷರೀ ಜಪಮಾಡಿದರೆ ಸದಾಶಿವನಿಗೆ ಸಮನಾಗುವನು.

ಏಕದ್ವಿತ್ರಿಚತುಃಕೋಟ್ಯಾ ಬ್ರಹ್ಮಾದೀನಾಂ ಪದಂ ವ್ರಜೇತ್ ।
ಜಪೇದಕ್ಷರಲಕ್ಷಂ ವಾ ಅಕ್ಷರಾಣಾಂ ಪೃಥಕ್ಪೃಥಕ್ ॥೪೪॥

೪೪ ಒಂದು, ಎರಡು, ಮೂರು, ನಾಲ್ಕು ಕೋಟಿ ಜಪದಿಂದ ಬ್ರಹ್ಮ ಪದವೇ ಮೊದಲಾದ ಪದವಿಯನ್ನು ಪಡೆಯುವರು. ಅಥವಾ ಪ್ರತಿ ಅಕ್ಷರಕ್ಕೆ ಲಕ್ಷದಂತೆ ಬೇರೆ ಬೇರೆಯಾಗಿ ಜಪಿಸಬಹುದು.

ಅಥವಾಕ್ಷರಲಕ್ಷಂ ವಾ ಜ್ಞೇಯಂ ಶಿವಪದಪ್ರದಂ ।
ಸಹಸ್ರಂ ತುಸಹಸ್ರಾಣಾಂ ಸಹಸ್ರೇಣ ದಿನೇನ ಹಿ ॥೪೫॥

೪೫ ಅಥವಾ ಅಕ್ಷರಕ್ಕೊಂದು ಲಕ್ಷದಂತೆ ಜಪಿಸಿದರೆ ಶಿವಪದ ಪ್ರಾಪ್ತಿಯಾಗುವುದು. ದಿನಕ್ಕೆ ಸಾವಿರದಂತೆ ಸಾವಿರ ದಿನಗಳು ಜಪಮಾಡಿದರೆ.

ಜಪೇನ್ಮಂತ್ರಾದಿಷ್ಟಸಿದ್ಧಿರ್ನಿತ್ಯಂ ಬ್ರಾಹ್ಮಣಭೋಜನಾತ್ ।
ಅಷ್ಟೋತ್ತರಸಹಸ್ರಂ ವೈ ಗಾಯತ್ರೀಂ ಪ್ರಾತರೇವ ಚ ॥೪೬॥

೪೬ ಈ ರೀತಿ ಜಪ ಮಾಡಿ ಬ್ರಾಹ್ಮಣ ಭೋಜನ ಮಾಡಿಸಿದರೆ ಇಷ್ಟಾರ್ಥ ಸಿದ್ಧಿಯಾಗುವುದು. ಸಾವಿರದ ನೂರೆಂಟು ಶಿವಗಾಯತ್ರಿಯನಲು ಪ್ರತಿದಿನ ಪ್ರಾತಃ ಕಾಲದಲ್ಲಿ ಜಪಿಸಬೇಕು.

೪೫ನೇ ಶ್ಲೋಕದಲ್ಲಿ ಹೇಳುವ ಹಾಗೂ ೪೪ನೇ ಶ್ಲೋಕದಲ್ಲಿ ಹೇಳಿರುವ ಅಕ್ಷರ ಲಕ್ಷಕ್ಕೆ ಒಂದೇ ಅರ್ಥ. ಆದರೆ ೪೫ನೇ ಶ್ಲೋಕದಲ್ಲಿ ಹೇಳಿರುವುದಕ್ಕೆ ಅಕ್ಷರ ಲಕ್ಷಂ ಎಂಬಲ್ಲಿ ಆಯಾ ಅಕ್ಷರ ಸಂಖ್ಯೆ ಎಂದಾಗ ಮೊದಲನೇ ಅಕ್ಷರಕ್ಕೆ ಒಂದು ಸಾವಿರ, ಎರಡನೇ ಅಕ್ಷರಕ್ಕೆ ಎರಡು ಸಾವಿರ, ಈ ಅರ್ಥ ಮಾಡಬೇಕೇ ವಿಚಾರಮಾಡಬೇಕಾಗುವುದು. ಹಾಗಾ ಪಕ್ಷದಲ್ಲಿ ೧೫ ಕೋಟಿ ಸಂಖ್ಯೆ ಆಗುವುದು.

ಬ್ರಾಹ್ಮಣಸ್ತು ಜಪೇನ್ನಿತ್ಯಂ ಕ್ರಮಾಚ್ಛಿವಪದಪ್ರದಾಂ ।
ವೇದಮಂತ್ರಾಂಶ್ಚ ಸೂಕ್ತಾನಿ ಜಪೇನ್ನಿಯಮಮಾಸ್ಥಿತಃ ॥೪೭॥

೪೭ ಬ್ರಾಹ್ಮಣನು ಈ ರೀತಿ ಶಿವಗಾಯತ್ರಿಯನ್ನು ಜಪಿಸಿದರೆ ಕ್ರಮವಾಗಿ ಶಿವಪದ

ಪ್ರಾಪ್ತವಾಗುವುದು. ಹಾಗೇ ವೇದ ಮಂತ್ರಗಳನ್ನೂ, ಸೂಕ್ತಗಳನ್ನೂ ನಿಯಮಪುರಸ್ಸರವಾಗಿ ಜಪಿಸಬೇಕು.

ಏಕಂ ದಶಾರ್ಣಮಂತ್ರಂ ಚ ಶತೋನಂ ಚ ತದೂರ್ಧ್ವಕಂ ।
ಆಯುತಂ ಚ ಸಹಸ್ರಂ ಚ ಶತಮೇಕಂ ವಿನಾ ಭವೇತ್ ॥೪೮॥

೪೮ ದಶಾರ್ಣ ಮಂತ್ರವನ್ನು ತೊಂಭತ್ತೊಂಭತ್ತು ಸಾರಿ ಅಥವಾ ಅದಕ್ಕಿಂತಲೂ ಹೆಚ್ಚಾಗಿ ಹತ್ತು ಸಾವಿರ, ಸಾವಿರ ಸಾರಿಯಾಗಲೀ ಜಪಿಸಬೇಕು.
'ಜಪಿಸುವುದು' ಎಂದರೆ ದೇಹ, ಮಾತು, ಮನಸ್ಸು ಮಂತ್ರದಲ್ಲೇ ಲೀನವಾಗಿ ಒಂದೇ ಮನಸ್ಸಿನಿಂದ ಮಂತ್ರಾರ್ಥವನ್ನು ಮನನ ಮಾಡುತ್ತಾ ಶಿವಸ್ವರೂಪವನ್ನು ಕಾಣುತ್ತಾ ಮಾನಸಿಕವಾಗಿ ಜಪಿಸುವುದು ಅತ್ಯಂತ ಶ್ರೇಷ್ಠವಾದುದು.

ವೇದಪಾರಾಯಣಂ ಚೈವ ಜ್ಞೇಯಂ ಶಿವಪದಪ್ರದಂ ।
ಅನ್ಯಾನ್ ಬಹುತರಾನ್ಮಂತ್ರಾನ್ ಜಪೇದಕ್ಷರಲಕ್ಷತಃ ॥೪೯॥

೪೯ ಹಾಗೆಯೇ ನಿತ್ಯದಲ್ಲಿಯೂ ವೇದಪಾರಾಯಣ ಮಾಡುವಿಕೆಯಿಂದ ಶಿವಪದ ಪ್ರಾಪ್ತಿಯಾಗುವುದು. ಹೀಗೆಯೇ ಅನೇಕ ವಿಧವಾದ ಮಂತ್ರಗಳನ್ನು ಅಕ್ಷರ ಒಂದಕ್ಕೆ ಲಕ್ಷದಂತೆ ಜಪಿಸಬೇಕು.

ಏಕಾಕ್ಷರಾಂಸ್ತಥಾ ಮಂತ್ರಾನ್ ಜಪೇದಕ್ಷರಕೋಟಿತಃ ।
ತತಃ ಪರಂ ಜಪೇಚ್ಚೈವ ಸಹಸ್ರಂ ಭಕ್ತಿಪೂರ್ವಕಂ ॥೫೦॥

೫೦ ಒಂದಕ್ಷರದ ಮಂತ್ರಗಳನ್ನು ಹಾಗೆಯೇ ಉಳಿದ ಮಂತ್ರಗಳನ್ನು ಕೋಟಿ, ಅಕ್ಷರಕ್ಕೊಂದು ಕೋಟಿಯಂತೆ ಜಪಿಸಬೇಕು. ಅದಕ್ಕಿಂತಲೂ ಹೆಚ್ಚಿಗೆ ಜಪಿಸಬಹುದು. ಸಾವಿರವೂ ಆಗಬಹುದು.

ಏವಂ ಕುರ್ಯಾದ್ಯಥಾಶಕ್ತಿ ಕ್ರಮಾಚ್ಛಿವಪದಂ ಲಭೇತ್ ।
ನಿತ್ಯಂ ರುಚಿಕರಂ ತ್ವೇಕಂ ಮಂತ್ರಮಾಮರಣಾಂತಿಕಂ ॥೫೧॥

೫೧ ಈ ರೀತಿಯಾಗಿ ಯಥಾಶಕ್ತಿ ಜಪಿಸುವವನು ಕ್ರಮವಾಗಿ ಶಿವಪದವಿಯನ್ನು ಹೊಂದುವನು. ಅಥವಾ ತನಗೆ ಅಭಿರುಚಿಯುಳ್ಳ ಒಂದೇ ಮಂತ್ರವನ್ನಾಗಲೀ

ನಿತ್ಯದಲ್ಲಿಯೂ ಮರಣ ಕಾಲದವರೆವಿಗೂ ಜಪಿಸಿದರೆ ಶಿವಪದ ಲಭಿಸುವುದು.

ಸಹಸ್ರಮೋಮಿತಿ ಜಪೇತ್ಸರ್ವಾಭೀಷ್ಟಂ ಶಿವಾಜ್ಞಯಾ ।
ಪುಷ್ಪಾರಾಮಾದಿಕಂ ವಾಪಿ ತಥಾ ಸಮ್ಮಾರ್ಜನಾದಿಕಂ ।।೫೨।।

೫೨ ಓಂ ಎಂಬ ಓಂಕಾರವನ್ನು ಸಾವಿರ ಸಾರಿ ನಿತ್ಯವೂ ಜಪಿಸಿದರೆ ಸಕಲ ಇಷ್ಟಾರ್ಥಗಳೂ ಲಭಿಸುವುವು. ಶಿವಾಲಯದಲ್ಲಿ ಹೂ ತೋಟ ನಿರ್ಮಿಸುವುದು, ಹಾಗೇ ಶಿವನ ಆಲಯದಲ್ಲಿ ಗುಡಿಸುವಿಕೆ, ಸಾರಿಸುವಿಕೆ, ಇದರಿಂದಲೂ ಶಿವಪದ ಪ್ರಾಪ್ತಿಯಾಗುವುದು.

ಶಿವಾಯ ಶಿವಕಾರ್ಯಾರ್ಥೇ ಕೃತ್ವಾ ಶಿವಪದಂ ಲಭೇತ್ ।
ಶಿವಕ್ಷೇತ್ರೇ ತಥಾ ವಾಸಂ ನಿತ್ಯಂ ಕುರ್ಯಾಚ್ಚ ಭಕ್ತಿತಃ ।।೫೩।।

೫೩ ಈಶ್ವರನಿಗಾಗಿ, ಶಿವಕಾರ್ಯಾರ್ಥವಾಗಿ, ಶಿವಕ್ಷೇತ್ರದಲ್ಲಿ ನಿತ್ಯವೂ ವಾಸಮಾಡಿದರೆ (ಭಕ್ತಿಯೂ) ಶಿವಪದ ಪ್ರಾಪ್ತಿಯಾಗುವುದು.

ಜಡಾನಾಮಜಡಾನಾಂ ಚ ಸರ್ವೇಷಾಂ ಭುಕ್ತಿಮುಕ್ತಿದಂ ।
ತಸ್ಮಾದ್ವಾಸಂ ಶಿವಕ್ಷೇತ್ರೇ ಕುರ್ಯಾದಾಮರಣಂ ಬುಧಃ ।।೫೪।।

೫೪ ಶಿವಕ್ಷೇತ್ರವಾಸದ ತಿಳುವಳಿಕೆಯಿಲ್ಲದಿರುವವರಿಗೂ, ತಿಳುವಳಿಕೆ ಇರುವವರಿಗೂ ಎಲ್ಲರಿಗೂ ಕೊನೆಯ ಕಾಲದವರೆವಿಗಿನ ಶಿವಕ್ಷೇತ್ರವಾಸವು ಭುಕ್ತಿ-ಮುಕ್ತಿಗಳನ್ನು ನೀಡುವುದು. ಆದ್ದರಿಂದ ತಿಳಿದವರು ಆಮರಣಾಂತ ಶಿವಕ್ಷೇತ್ರದಲ್ಲಿ ವಾಸಿಸಬೇಕು.

ಲಿಂಗಾದ್ಧಸ್ತಶತಂ ಪುಣ್ಯಂ ಕ್ಷೇತ್ರೇ ಮಾನುಷಕೇ ವಿದುಃ ।
ಸಹಸ್ರಾರತ್ನಿಮಾತ್ರಂ ತು ಪುಣ್ಯಂ ಕ್ಷೇತ್ರೇ ತಥಾರ್ಷಕೇ ।।೫೫।।

೫೫ ಮಾನುಷ ಲಿಂಗವುಳ್ಳ ದೇವಾಲಯದಲ್ಲಿ, ದೇವಾಲಯದಿಂದ ನೂರ ಹಸ್ತ ಪ್ರಮಾಣದ ಸುತ್ತಳತೆಯಿರುವ ಪ್ರದೇಶವು ಪುಣ್ಯಕ್ಷೇತ್ರವಾಗಿರುವುದು. ಅದೇ ಋಷಿಗಳಿಂದ ಸ್ಥಾಪಿತವಾದ ಲಿಂಗವುಳ್ಳ ದೇವಾಲಯದಲ್ಲಿ ಸುತ್ತಲಿನ ಸಾವಿರ ಹಸ್ತ ಪ್ರಮಾಣದವರೆವಿಗೂ ಪುಣ್ಯ ಕ್ಷೇತ್ರವು.

ದೈವಲಿಂಗೇ ತಥಾ ಜ್ಞೇಯಂ ಸಹಸ್ರಾರತ್ನಿ ಮಾನತಃ ।

ಧನುಃಪ್ರಮಾಣಸಾಹಸ್ರಂ ಪುಣ್ಯಂ ಕ್ಷೇತ್ರೇ ಸ್ವಯಂಭುವಿ ||೩೬||

೩೬ ಅದೇ ರೀತಿ ದೈವ ಪ್ರತಿಷ್ಠಿತ ಲಿಂಗದಲ್ಲಿ ಸಾವಿರ ಹಸ್ತ ಪ್ರಮಾಣಕ್ಕಿಂತಲೂ ಹೆಚ್ಚಿನ ಪ್ರದೇಶವು ಪುಣ್ಯಕ್ಷೇತ್ರವು. ಸ್ವಯಂಭೂ ಲಿಂಗ ಅಂದರೆ ತಾನೇ ತಾನಾಗಿ ಉದ್ಭವಿಸಿರುವ ಲಿಂಗದ ದೇವಾಲಯದಲ್ಲಿ, ದೇವಾಲಯದ ಸುತ್ತಲೂ ಸಾವಿರ ಬಿಲ್ಲಿನ ಅಳತೆಯುಳ್ಳ ಪ್ರದೇಶವು ಪುಣ್ಯಕ್ಷೇತ್ರವು.

ವಿ.ವಿ.:- ಇಲ್ಲಿ 'ಮಾನುಷ, ಋಷಿ, ದೇವತೆ, ಸ್ವಯಂಭೂ ಲಿಂಗಗಳಿಗೆ' ಒಂದಕ್ಕಿಂತ ಒಂದಕ್ಕೆ ಹೆಚ್ಚಿನ ಫಲದಾಯಕ ಶಕ್ತಿ ಇರುವುದೆಂದು ತಿಳಯಬೇಕು. ಈ ರೀತಿ ಫಲ ತಾರತಮ್ಯವು ಎಲ್ಲಾ ವಿಧವಾದ ಸೇವೆಗಳಿಗೂ ಸಮನಾಗಿರುತ್ತದೆ.

ಹೇಗೆಂದರೆ ಶೈವಾಗಮದಲ್ಲಿ ದೇವರಿಗೆ ಮಾಡುವ ಪ್ರದಕ್ಷಿಣೆ, ನಮಸ್ಕಾರ ವಿಚರ ಪ್ರಸ್ತಾಪದಲ್ಲಿ ಈ ರೀತಿ ಮೇಲಿನ ತಾರತಮ್ಯ ಫಲವನ್ನು ನಾವು ಕಾಣಬಹುದು.

ಏವಂ ಪ್ರದಕ್ಷಿಣಫಲಂ ಪ್ರೋಕ್ತಂ ಮಾನುಷಲಿಂಗಕೇ ||
ದ್ವಿಗುಣಂ ಚಾರ್ಷ ಕೇಲಿಂಗೇ ತ್ರಿಗುಣಂದ್ಯೆವಿಕೇಸ್ಮೃತಂ ||
ಫಲಂಗಾಣೇಶ್ವರೇ ಲಿಂಗೇ ಕಚ್ಚತುಗುಣೆತಂ ಭವೇತ್ ||
ಸ್ವಯಂಭೂತೇ ಮಹಾಲಿಂಗೇ ತಥಾ ಪಂಚಗುಣಂ ಭವೇತ್ ||
ಏಕಪ್ರದಕ್ಷಿಣೇನ್ಯೆವ ಮುಚ್ಚತೇ ಬ್ರಹ್ಮಹತ್ಯಯಾಂ ||

ಇತ್ಯಾದಿ. ಅಂದರೆ ಪ್ರದಕ್ಷಿಣೆ, ನಮಸ್ಕಾರ ಫಲವು ಮಾನುಷಲಿಂಗಕ್ಕಿಂತ ಋಷಿಪ್ರೋಕ್ತವಾದ ಲಿಂಗದಲ್ಲಿ ಎರಡರಷ್ಟೂ ದೇವತೆಗಳಿಂದ ಸ್ಥಾಪಿಸಲ್ಪಟ್ಟ ಲಿಂಗದಲ್ಲಿ ಮೂರರಷ್ಟು ಗಣೇಶ್ವರ ಲಿಂಗದಲ್ಲಿ ನಾಲ್ಕರಷ್ಟು, ಉದ್ಭವಲಿಂಗಗಳಲ್ಲಿ ಐದರಷ್ಟು ಫಲವುಳ್ಳದ್ದಾಗಿರುತ್ತದೆ. ಹೀಗೆ ಎಲ್ಲಾ ಸೇವೆಗಳಲ್ಲೂ ಫಲತಾರತಮ್ಯವು ಸಮನಾಗಿರುತ್ತದೆ. 'ಧನುಃ ಪ್ರಮಾಣ' ಅಂದರೆ ಬಿಲ್ಲಿನ ಉದ್ದದಷ್ಟೆ, ಸುಮಾರು ಎಂಟು ಅಡಿ ಉದ್ದ.

ಪುಣ್ಯಕ್ಷೇತ್ರೇ ಸ್ಥಿತಾ ವಾಪೀ ಕೂಪಾದ್ಯಂ ಪುಷ್ಕರಾಣಿ ಚ |
ಶಿವಗಂಗೇತಿ ವಿಜ್ಞೇಯಂ ಶಿವಸ್ಯ ವಚನಂ ಯಥಾ ||೩೭||

೩೭ ಈ ರೀತಿ ಪುಣ್ಯ ಕ್ಷೇತ್ರದಲ್ಲಿರುವ ಬಾವಿ, ದೊಡ್ಡ ಬಾವಿ, ಕೊಳ, ಕೆರೆಗಳೂ ಸಹ ಶಿವನ ಜಟೆಯಲ್ಲಿರುವ ಗಂಗೆಗೆ ಸಮನಾದುದೆಂದು ತಿಳಿಯಬೇಕು ಎಂದು ಸಾಕ್ಷಾತ್ ಶಿವನೇ ಹೇಳಿರುವನು.

ತತ್ರ ಸ್ನಾತ್ವಾ ತಥಾ ದತ್ವಾ ಜಪಿತ್ವಾ ಚ ಶಿವಂ ವ್ರಜೇತ್ |

ಶಿವಕ್ಷೇತ್ರಂ ಸಮಾಶ್ರಿತ್ಯ ವಸೇದಾಮರಣಂ ತಥಾ ||೫೮||

೫೮ ಈ ರೀತಿ ಪವಿತ್ರತಮವಾದ ಜಲಾಶಯಾದಿಗಳಲ್ಲಿ ಸ್ನಾನ, ದಾನ, ಜಪಗಳನ್ನು ಮಾಡಿದರೆ ಶಿವನನ್ನೇ ಹೊಂದುವನು. ಹಾಗೆ ಶಿವಕ್ಷೇತ್ರವನ್ನು ಹೊಂದಿ ಮರಣಪರ್ಯಂತರ ವಾಸಿಸಿ ಯಾವಾಗಲೂ ಕ್ಷೇತ್ರವನ್ನು ಸೇವಿಸಬೇಕು.

ದಾಹಂ ದಶಾಹಂ ಮಾಸ್ಯಂ ವಾ ಸಪಿಂಡೀಕರಣಂ ತಥಾ |
ಆಬ್ದಿಕಂ ವಾ ಶಿವಕ್ಷೇತ್ರೇ ಕ್ಷೇತ್ರೇ ಪಿಂಡಮಥಾಪಿ ವಾ ||೫೯||

೫೯ ಮೃತನಾದವನನ್ನು ಸುಡುವಿಕೆ, ಹತ್ತನೇ ದಿನದ ಮರಣಾಂತಿಕ ಕ್ರಿಯೆಗಳು, ಪ್ರತಿ ತಿಂಗಳಲ್ಲಿ ಮಾಡುವ ತತ್ಸಂಬಂಧವಾದ ಶ್ರಾದ್ಧ ಕ್ರಿಯೆ, ಹನ್ನೆರಡೆಯ ದಿನ ಮಾಡುವ ಸಪಿಂಡೀಕರಣ, ವರ್ಷಾಂತಕ ಶ್ರಾದ್ಧ, ಪಿಂಡ ಪ್ರದಾನಾದಿಗಳನ್ನು ಶಿವಕ್ಷೇತ್ರದಲ್ಲಿ ಮಾಡುವುದು.

ಸರ್ವಪಾವಿನಿರ್ಮುಕ್ತಃ ಸದ್ಯಃ ಶಿವಪದಂ ಲಭೇತ್ |
ಅಥವಾ ಸಪ್ತರಾತ್ರಂ ವಾ ವಸೇದ್ವಾ ಪಂಚರಾತ್ರಕಂ ||೬೦||

೬೦ ಇಂತಹ ಕಾರ್ಯಗಳಿಂದ ಮೃತನಾದವನಿಗೆ ಸಕಲ ಪಾಪಗಳೂ ನಾಶವಾಗಿ ತಕ್ಷಣದಲ್ಲೇ ಶಿವಪದ ಪ್ರಾಪ್ತವಾಗುವುದು. ಹಾಗೆಯೇ ಕ್ಷೇತ್ರಗಳಲ್ಲಿ ಏಳು ದಿನಗಳಾಗಲೀ, ಐದು ದಿನಗಳಾಗಲೀ ವಾಸ ಮಾಡಿದ್ದೇ ಆದರೆ,

ತ್ರಿರಾತ್ರಮೇಕರಾತ್ರಂ ವಾ ಕ್ರಮಾಚ್ಛಿವಪದಂ ಲಭೇತ್ |
ಸ್ವವರ್ಣಾನುಗುಣಂ ಲೋಕೇ ಸ್ವಾಚಾರಾತ್ಪ್ರಾಪ್ನುತೇ ನರಃ ||೬೧|

೬೧ ಅಥವಾ ಮೂರು ದಿನ, ಒಂದು ದಿನವಾಗಲೀ ವಾಸ ಮಾಡಿದುದಾದರೆ ಕ್ರಮವಾಗಿ ಶಿವಪದ ಪ್ರಾಪ್ತವಾಗುವುದು. ತನ್ನ ಜಾತಿಗೆ ಅನುಗುಣವಾದ ಸದಾಚಾರದಿಂದ ಶಿವನನ್ನು ಸೇವಿಸಿದ್ದೇ ಆದರೆ ಶಿವಪದ ಪ್ರಾಪ್ತಿಯಾಗುವುದು.

ವರ್ಣೋದ್ಧಾರೇಣ ಭಕ್ತ್ಯಾ ಚ ತತ್ಫಲಾತಿಶಯಂ ನರಃ |
ಸರ್ವಂ ಕೃತಂ ಕಾಮನಯಾ ಸದ್ಯಃ ಫಲಮವಾಪ್ನುಯಾತ್ ||೬೨||

೬೨ ಹಾಗೆ ಅವನು ಮಾಡಿದ್ದೇ ಆದರೆ ತನ್ನ ಗುಲವನ್ನು ಉದ್ಧರಿಸಿ ಅಂತಹ

ಶಿವಭಕ್ತಿಯಿಂದ ಉತ್ತಮವಾದ ಫಲವನ್ನು ಪಡೆಯುವನು. ಯಾವುದಾದರೂ ಇಷ್ಟಾರ್ಥ ಪ್ರಾಪ್ತಿಗಾಗಿ ಸೇವೆ ಮಾಡಿದರೆ ಆ ಕ್ಷಣದಲ್ಲೇ ಫಲವನ್ನು ಹೊಂದುವನು.

**ಸರ್ವಂ ಕೃತಮಕಾಮೇನ ಸಾಕ್ಷಾಚ್ಛಿವಪದಪ್ರದಂ ।**
**ಪ್ರಾತರ್ಮಧ್ಯಾಹ್ನ ಸಾಯಾಹ್ನ ಮಹಸ್ತ್ರಿಷ್ವೇಕತಃ ಕ್ರಮಾತ್ ॥**

೬೩ ಎಲ್ಲಾ ಕರ್ಮಗಳನ್ನು ಯಾವ ಇಚ್ಛೆಯಿಲ್ಲದೇ ಈ ರೀತಿ ಶಿವಸೇವೆಯನ್ನು ಮಾಡಿದರೆ ಸಾಕ್ಷಾತ್ ಶಿವಪದ ಪ್ರಾಪ್ತಿಯಾಗುವುದು. ದಿನದ ಪ್ರಾತಃಕಾಲ, ಮಧ್ಯಾಹ್ನ, ಸಾಯಂಕಾಲಗಳಿಗೆ ಕರ್ಮಫಲಗಳು ಹೀಗಿವೆ.

**ಪ್ರಾತರ್ವಿಧಿಕರಂ ಜ್ಞೇಯಂ ಮಧ್ಯಾಹ್ನಂ ಕಾಮಿಕಂ ತಥಾ ।**
**ಸಾಯಾಹ್ನಂ ಶಾಂತಿಕಂ ಜ್ಞೇಯಂ ರಾತ್ರಾವಪಿ ತಥೈವ ಹಿ ॥೬೪॥**

೬೪ ಪ್ರಾತಃಕಾಲವು ನಿತ್ಯ ಕರ್ಮಗಳನ್ನೂ, ಮಾಧ್ಯಾಹ್ನಿಕ ಕಾಲವು ಕಾಮ್ಯ ಕರ್ಮಗಳನ್ನೂ ಸಾಯಂಕಾಲ ಮತ್ತು ರಾತ್ರಿ ಕಾಲಗಳು ಶಾಂತಿ ಕರ್ಮಗಳಿಗೂ ಪ್ರಶಸ್ತವಾದುದು.

**ಕಾಲೋ ನಿಶೀಥೋ ವೈ ಪ್ರೋಕ್ತೋ ಮಧ್ಯಯಾಮದ್ವಯಂ ನಿಶಿ ।**
**ಶಿವಪೂಜಾ ವಿಶೇಷೇಣ ತತ್ಕಾಲೇಽಭೀಷ್ಟಸಿದ್ಧಿದಾ ॥೬೫॥**

೬೫ ರಾತ್ರಿಯ ಮಧ್ಯದ ಎರಡು ಯಾಮಗಳಿಗೆ ನಿಶೀಥವೆಂದು ಹೆಸರು. ಆಕಾಲವು ಶಿವಪೂಜೆಗೆ ಅತ್ಯಂತ ಪ್ರಶಸ್ತವಾದುದು ಮತ್ತು ವಿಶೇಷವಾಗಿ ಇಷ್ಟಾರ್ಥ ಸಿದ್ಧಿಯಾಗುವುದು.

**ಏವಂ ಜ್ಞಾತ್ವಾ ನರಃ ಕುರ್ವನ್ಯಥೋಕ್ತಫಲಭಾಗ್ಭವೇತ್ ।**
**ಕಲೌ ಯುಗೇ ವಿಶೇಷೇಣ ಫಲಸಿದ್ಧಿಸ್ತು ಕರ್ಮಣಾ ॥೬೬॥**

೬೬ ಈ ರೀತಿಯಾಗಿರುವ ವಿಚಾರಗಳನ್ನು ತಿಳಿದು ಯಾವ ಮನುಷ್ಯನು ಶಿವಸೇವೆಯನ್ನು ಮಾಡುವನೋ ಅಂತಹವನು ಅದಕ್ಕೆ ತಕ್ಕಂತಹ ಫಲವನ್ನು ಪಡೆಯುವನು.

**ಉಕ್ತೇನ ಕೇನಚಿದಪಿ ಹ್ಯಧಿಕಾರವಿಭೇದತಃ ।**

ಸದ್ವೃತ್ತಿಃ ಪಾಪಭೀರುಶ್ಚೇತ್ತತ್ತತ್ಫಲಮವಾಪ್ನುಯಾತ್ ।67॥

೬೭ ಪಾಪ ಕರ್ಮಗಳಿಗೆ ಹೆದರುತ್ತಾ ಯಾವನು ಸದಾಚಾರವುಳ್ಳವನಾಗಿ ಹಿಂದೆ ಹೇಳಿದ ರೀತಿ ತನಗೆ ಯೋಗ್ಯವಾದ ಕರ್ಮವನ್ನು ಆಚರಿಸಿದ್ದೇ ಆದರೆ ಅದಕ್ಕೆ ತಕ್ಕಂತಹ ಫಲವನ್ನು ಪಡೆಯುವನು. ಅಂದರೆ ಅವನ ಅಧಿಕಾರಕ್ಕೆ ತಕ್ಕಂತಹ ಕರ್ಮವನ್ನು ಆಚರಿಸುವುದರಿಂದ ಎಂದು ತಾತ್ಪರ್ಯ.

॥ಋಷಯ ಊಚುಃ॥

ಅಥ ಕ್ಷೇತ್ರಾಣಿ ಪುಣ್ಯಾನಿ ಸಮಾಸಾತ್ಕಥಯಸ್ವ ನಃ ।

ಸರ್ವಾಃ ಸ್ತ್ರಿಯಶ್ಚ ಪುರುಷಾ ಯಾನ್ಯಾಶ್ರಿತ್ಯ ಪದಂ ಲಭೇತ್ ॥೬೮॥

೬೮ ಋಷಿಗಳು ಹೇಳಿದರು, ಓ! ಸೂತ ಮಹಾಮುನಿಯೇ, ಎಲ್ಲಾ ಸ್ತ್ರೀಯರೂ-ಪುರುಷರೂ ಯಾವ ಪುಣ್ಯಕ್ಷೇತ್ರವನ್ನು ಆಶ್ರಯಿಸಿದರೆ ಸದ್ಗತಿಯನ್ನು ಹೊಂದುವರೋ ಅಂತಹ ಪುಣ್ಯಕ್ಷೇತ್ರಗಳಾವುವು. ನಮಗೆ ಸಂಕ್ಷೇಪವಾಗಿ ಹೇಳು, ಹಾಗೇ ಅಂತಹ ಶಿವಕ್ಷೇತ್ರಗಳ ಉತ್ಪತ್ತಿ (ಆಗಮ)ಗಳನ್ನೂ ತಿಳಿಸು ಎಂದು ಕೇಳಿದರು.

ಸೂತ ಯೋಗಿವರಶ್ರೇಷ್ಠ ಶಿವಕ್ಷೇತ್ರಾಗಮಾಂಸ್ತಥಾ ।

॥ಸೂತ ಉವಾಚ॥

ಶೃಣುತ ಶ್ರದ್ಧಯಾ ಸರ್ವಕ್ಷೇತ್ರಾಣಿ ಚ ತತಾಗಮಾನ್ ॥69॥

೬೯ ಆಗ ಋಷಿಗಳ ಪ್ರಶ್ನೆಗೆ ಸೂತ ಮಹಾಮುನಿಗಳು ಈ ರೀತಿ ಹೇಳಿದರು. ಎಲೈ ಋಷಿಗಳಿರಾ ಕೇಳಿ ಸರ್ವಕ್ಷೇತ್ರಗಳ ವಿಚಾರಗಳನ್ನೂ ಅವುಗಳ ಆಗಮಗಳನ್ನೂ ಹೇಳುತ್ತೇನೆ. ಶ್ರದ್ಧೆಯಿಂದ ಕೇಳಿರಿ ಎಂದರು.

ಇತಿ ಶ್ರೀ ಶಿವಮಹಾಪುರಾಣೇ ವಿದ್ಯೇಶ್ವರ ಸಂಹಿತಾಯಾಂ ಏಕಾದಶೋಽಧ್ಯಾಯಃ

ಇಲ್ಲಿಗೆ ಶ್ರೀ ಶಿವಪುರಾಣದಲ್ಲಿ ವಿದ್ಯೇಶ್ವರ ಸಂಹಿತೆಯಲ್ಲಿ

ಹನ್ನೊಂದನೇ ಅಧ್ಯಾಯವು ಮುಗಿದುದು.

॥ಶ್ರೀಃ॥

||ಓಂ ನಮಃ ಶಿವಾಯ||

ಅಥ ಶ್ರೀ ಶಿವಮಹಾಪುರಾಣೇ
ವಿದ್ಯೇಶ್ವರಸಂಹಿತಾಯಾಃ

# ದ್ವಾದಶೋಽಧ್ಯಾಯ

||ಸೂತ ಉವಾಚ||

ಶೃಣುಧ್ವಮೃಷಯಃ ಪ್ರಾಜ್ಞಾಃ ಶಿವಕ್ಷೇತ್ರಂ ವಿಮುಕ್ತಿದಂ ।
ತದಾಗಮಾಂಸ್ತತೋ ವಕ್ಷ್ಯೇ ಲೋಕರಕ್ಷಾರ್ಥಮೇವ ಹಿ ||೧||

೧ ಸೂತರು ಹೇಳುತ್ತಾರೆ, ಎಲೈ ಋಷಿಗಳೇ, ಪ್ರಾಜ್ಞರೇ, ಮುಕ್ತಿಯನ್ನು ವಿಶೇಷವಾಗಿ ಕರುಣಿಸುವ ಶಿವಕ್ಷೇತ್ರಗಳ ಹಾಗೂ ಆ ಕ್ಷೇತ್ರಗಳ ಆಗಮಗಳ ವಿಚಾರಗಳನ್ನು ಲೋಕ ಕ್ಷೇಮಕ್ಕಾಗಿ ಹೇಳುವೆನು ಕೇಳಿರಿ.

ಪಂಚಾಶತ್ಕೋಟಿವಿಸ್ತೀರ್ಣಾ ಸಶೈಲವನಕಾನನಾ ।
ಶಿವಾಜ್ಞಯಾ ಹಿ ಪೃಥಿವೀ ಲೋಕಂ ಧೃತ್ವಾ ಚತಿಷ್ಟತಿ ||೨||

೨ ಐವತ್ತು ಕೋಟಿ ಯೋಜನ ವಿಸ್ತಾರವುಳ್ಳ, ಬೆಟ್ಟ, ಕಾಡುಗಳಿಂದ ಕೂಡಿರುವ ಈ ಭೂಮಿಯು ಈಶ್ವರನ ಆಜ್ಞೆಯಂತೆ ಈ ಭೂಲೋಕದಲ್ಲಿ ನಿಂತಿರುವುದು.

ತತ್ರ ತತ್ರ ಶಿವಕ್ಷೇತ್ರಂ ತತ್ರ ತತ್ರ ನಿವಾಸಿನಾಂ ।
ಮೋಕ್ಷಾರ್ಥಂ ಕೃಪಯಾ ದೇವಃ ಕ್ಷೇತ್ರಂ ಕಲ್ಪಿತವಾನ್ ಪ್ರಭುಃ ||೩||

೩ ಎಲ್ಲರಿಗೆ ಒಡೆಯನಾದ ಶಿವನು ಈ ಭೂಮಿಯಲ್ಲಿ ಅಲ್ಲಲ್ಲಿ ವಾಸಿಸುವಂತಹ ಜನರಿಗೆ ಮುಕ್ತಿಯನ್ನು ಹೊಂದುವುದಕ್ಕೋಸ್ಕರ ಜನಗಳ ಮೇಲಿನ ದಯೆಯಿಂದ ಅಲ್ಲಲ್ಲಿ ಅನೇಕ ಶಿವಕ್ಷೇತ್ರಗಳಲ್ಲಿ ಕಲ್ಪಿಸಿರುವನು.

ಪರಿಗ್ರಹಾದೃಷೀಣಾಂ ಚ ದೇವಾನಾಂ ಚ ಪರಿಗ್ರಹಾತ್ ।
ಸ್ವಯಂಭೂತಾನ್ಯಥಾನ್ಯಾನಿ ಲೋಕರಕ್ಷಾರ್ಥಮೇವ ಹಿ ||೪||

೪ ಋಷಿಗಳ ಹಾಗೂ ದೇವತೆಗಳ ಸಂಪರ್ಕದಿಂದ ಲೋಕಕ್ಷೇಮಕ್ಕೋಸ್ಕರ ಕೆಲವು ಕ್ಷೇತ್ರಗಳು ತಾನಾಗಿಯೇ ಉಂಟಾದುವು.

ತೀರ್ಥೇ ಕ್ಷೇತ್ರೇ ಸದಾ ಕಾರ್ಯಂ ಸ್ನಾನದಾನಜಪಾದಿಕಂ ।
ಅನ್ಯಥಾ ರೋಗದಾರಿದ್ರ್ಯ ಮೂಕತ್ವಾದ್ಯಾಪ್ನು ಯಾನ್ನರಃ ॥೫॥

೫ ತೀರ್ಥಕ್ಷೇತ್ರಗಳಲ್ಲಿ ಯಾವಾಗಲೂ ಸ್ನಾನ, ದಾನ, ಜಪ, ಪೂಜೆ ಮೊದಲಾದ ಪುಣ್ಯಕಾರ್ಯಗಳನ್ನು ಮಾಡುತ್ತಿರಬೇಕು. ಇಲ್ಲವಾದಲ್ಲಿ ಮಾನವರು ರೋಗ, ದಾರಿದ್ರ್ಯ, ಮೂಗತನವನ್ನು ಹೊಂದುವನು.

ಅಥಾಸ್ಮಿನ್ ಭಾರತೇ ವರ್ಷೇ ಪ್ರಾಪ್ನೋತಿ ಮರಣಂ ನರಃ ।
ಸ್ವಯಂಭೂಸ್ಥಾನವಾಸೇನ ಪುನರ್ಮಾನುಷ್ಯಮಾಪ್ನು ಯಾತ್ ।೬॥

೬ ಈ ಭಾರತ ವರ್ಷದಲ್ಲಿ ಮರಣವನ್ನು ಹೊಂದಿದ್ದೇ ಆದರೆ, ಅವನು ತಾನಾಗಿಯೇ ಉದ್ಭವಿಸಿರುವ ಶಿವಕ್ಷೇತ್ರದಲ್ಲಿ ವಾಸಿಸಿದ್ದವನೇ ಆದರೆ ಪುನಃ ಮನುಷ್ಯನಾಗಿ ಹುಟ್ಟಿದ್ದೇ ಮುಕ್ತನಾಗುವನು.

ಕ್ಷೇತ್ರೇ ಪಾಪಸ್ಯ ಕರಣಂ ದೃಢಂ ಭವತಿ ಭೂಸುರಾಃ ।
ಪುಣ್ಯಕ್ಷೇತ್ರೇ ನಿವಾಸೇ ಹಿ ಪಾಪಮಣ್ವಪಿನಾಚರೇತ್ ॥೭॥

೭ ಹಾಗೇ ಪುಣ್ಯಕ್ಷೇತ್ರದಲ್ಲಿ ಪಾಪ ಕಾರ್ಯವನ್ನು ಮಾಡಿದ್ದೆ ಆದರೆ ಆ ಪಾಪದ ಫಲವು ದೃಢವಾಗುವುದು. ಆದ್ದರಿಂದ ಪುಣ್ಯಕ್ಷೇತ್ರದಲ್ಲಿ ಸ್ವಲ್ಪವೂ ಪಾಪವನ್ನು ಆಚರಿಸಬಾರದು.

ಯೇನ ಕೇನಾಪ್ಯುಪಾಯೇನ ಪುಣ್ಯಕ್ಷೇತ್ರೇ ವಸೇನ್ನರಃ ।
ಸಿಂಧೋಃ ಶತನದೀತೀರೇ ಸಂತಿ ಕ್ಷೇತ್ರಾಣ್ಯನೇಕಶಃ ॥೮॥

೮ ಯಾವುದಾದರೂ ಉಪಾಯದಿಂದ ಮನುಷ್ಯನು ಪುಣ್ಯ ಕ್ಷೇತ್ರದಲ್ಲಿ ವಾಸಮಾಡಬೇಕು. ಸಿಂಧು, ಶತನದೀ ತೀರದಲ್ಲಿ ಅನೇಕ ಪುಣ್ಯಕ್ಷೇತ್ರಗಳಿರುವುವು.

ಸರಸ್ವತೀ ನದೀ ಪುಣ್ಯಾ ಪ್ರೋಕ್ತಾ ಷಷ್ಟಿಮುಖಾ ತಥಾ ।
ತತ್ತೀರೇ ಚ ವಸೇತ್ಪ್ರಾಜ್ಞಃ ಕ್ರಮಾದ್ಬ್ರಹ್ಮಪದಂ ಲಭೇತ್ ॥೯॥

೯ ಸರಸ್ವತೀ ಹಾಗೂ ಷಷ್ಟಿಮುಖಾ ಎಂಬ ನದಿಗಳೂ ಸಹ ಪುಣ್ಯನದಿಗ ಇವುಗಳ ತೀರದಲ್ಲಿ ವಾಸವು ಬ್ರಹ್ಮಪದವೆಂದರೆ ಬ್ರಹ್ಮಲೋಕವನ್ನು ನೀಡುವುದು.

**ಹಿಮವದ್ಗಿರಿಜಾ ಗಂಗಾ ಪುಣ್ಯಾ ಶತಮುಖಾ ನದೀ ।**

**ತತ್ತೀರೇ ಚೈವ ಕಾಶ್ಯಾದಿಪುಣ್ಯಕ್ಷೇತ್ರಾಣ್ಯನೇಕಶಃ ॥೧೦॥**

೧೦ ಹಿಮಪರ್ವತದಲ್ಲಿ ಹುಟ್ಟಿ ಅನೇಕ ಪ್ರಕಾರವಾಗಿ ಹರಿಯುವ ಗಂಗಾ ನದಿ ಪುಣ್ಯತಮವಾದುದು. ಅದರ ತೀರದಲ್ಲಿ ಕಾಶಿಯೇ ಮೊದಲಾದ ಅನೇಕ ಪು ಕ್ಷೇತ್ರಗಳಿರುವುವು.

**ತತ್ರ ತೀರಂ ಪ್ರಶಸ್ತಂ ಹಿ ಮೃಗೇ ಮೃಗಬೃಹಸ್ಪತೌ ।**

**ಶೋಣಭದ್ರೋ ದಶಮುಖಃ ಪುಣ್ಯೋಽಭೀಷ್ಟಫಲಪ್ರದಃ ॥೧೧॥**

೧೧ ಮಾರ್ಗಶಿರಮಾಸದಲ್ಲಿ ಮೃಗಶಿರಾ ನಕ್ಷತ್ರದಲ್ಲಿ ಗುರುವಿರುವಾಗ ಗಂಗಾ ನದಿಗಳು ಅತ್ಯಂತ ಪವಿತ್ರವಾದುವು. ಹತ್ತು ಕಿರೆಗೆ ಹರಿಯುವುದಾಗಿರುವ ಶೋ ಭದ್ರವೆಂಬ ನದವು ಪುಣ್ಯಪ್ರದವಾದುದು ಮತ್ತು ಇಷ್ಟಾರ್ಥ ಫಲವನ ಕೊಡುವಂತಹದ್ದಾಗಿರುವುದು.

ವಿ.ವಿ.:- ಇಲ್ಲಿ 'ನಡೆ' ಎಂದೂಗಂಗಾದಿಗಳಿಗೆ 'ನದಿ' ಎಂದೂ ಹೇಳಿದೆ. ನದಿಗಳಲ್ಲಿ ಸ ಗಂಡು, ಹೆಣ್ಣು ಭೇದವಿದೆ. ನದವೆಂದರೆ ಗಂಡು ನದಿ ಅರ್ಥಾತ್ ಪಶ್ಚಿಮಾಬಿಮುಖವಾ ವೇಗವಾಗಿ ಹರಿಯುವ ನದಿಗೆ ನದ ಎಂದು ಹೇಳುತ್ತಾರೆ.

**ತತ್ರ ಸ್ನಾನೋಪವಾಸೇನ ಪದಂ ವೈನಾಯಕಂ ಲಭೇತ್ ।**

**ಚತುರ್ವಿಂಶಮುಖಾ ಪುಣ್ಯಾ ನರ್ಮದಾ ಚ ಮಹಾನದೀ ॥೧೨॥**

೧೨ ಇಂತಹ ನದಗಳ ದಡದಲ್ಲಿ ವಾಸವು, ಸ್ನಾನ ಇತ್ಯಾದಿಗಳು ವಿನಾಯಕ ಪದವನ ಅಂದರೆ ಗಣಾಪತ್ಯ ಪದವಿಯನ್ನು ನೀಡುವುದು. ಇಪ್ಪತ್ನಾಲ್ಕು ಮುಖವಾಗಿ ಹರಿಯು ನರ್ಮದಾ ಎಂಬ ಮಹಾನದಿಯು ಪುಣ್ಯದಾಯಕವಾದುದು.

ವಿ.ವಿ.:- ಮಹಾನದಿ ಎಂದರೆ ಯಾವಾಗಲೂ ಬತ್ತದೇ ವರ್ಷಪೂರ್ತಿ ಹರಿಯು ನದಿಗಳು.

**ತಸ್ಯಾಂ ಸ್ನಾನೇನ ವಾಸೇನ ಪದಂ ವೈಷ್ಣವಮಾಪ್ನುಯಾತ್ ।**

**ತಮಸಾ ದ್ವಾದಶಮುಖಾ ರೇವಾ ದಶಮುಖಾ ನದೀ ॥೧೩॥**

೧೩ ಈ ನದಿಯ ಸ್ನಾನ ತೀರದಲ್ಲಿ ವಾಸವು ವಿಷ್ಣು ಪದವನ್ನು ನೀಡುವುದು. ಹನ್ನೆರಡು ಮುಖವಾಗಿ ಹರಿಯುವ ತಮಸಾ ನದಿಯು, ಹತ್ತು ಮುಖವಾಗಿ ಹರಿಯುವ ರೇವಾ ನದಿಯೂ ಪುಣ್ಯಕರವಾದುದು.

**ಗೋದಾವರೀ ಮಹಾಪುಣ್ಯಾ ಬ್ರಹ್ಮಗೋವಧನಾಶಿನೀ ।**
**ಏಕವಿಂಶಮುಖಾ ಪ್ರೋಕ್ತಾ ರುದ್ರಲೋಕಪ್ರದಾಯಿನೀ ॥೧೪॥**

೧೪ ಮಹಾಪುಣ್ಯತಮವಾದ ಗೋದಾವರೀ ನದಿಯು ಬ್ರಹ್ಮಹತ್ಯಾ, ಗೋಹತ್ಯಾ ಶಾಪಗಳನ್ನು ನಿವಾರಿಸುವಂತಹದ್ದಾಗಿರುವುದು. ಇದು ಇಪ್ಪತ್ತೊಂದು ಮುಖವಾಗಿ ಹರಿದು ರುದ್ರಲೋಕವನ್ನು ನೀಡುವಂತಹದ್ದಾಗಿರುವುದು.

**ಕೃಷ್ಣವೇಣೀ ಪುಣ್ಯನದೀ ಸರ್ವಪಾಪಕ್ಷಯಾವಹಾ ।**
**ಸಾಷ್ಟಾದಶಮುಖಾ ಪ್ರೋಕ್ತಾ ವಿಷ್ಣುಲೋಕಪ್ರದಾಯಿನೀ ॥೧೫॥**

೧೫ ಹದಿನೆಂಟು ಮುಖವಾಗಿ ಹರಿಯುವ ಕೃಷ್ಣವೇಣೀ ನದಿಯು ಪುಣ್ಯ ನದಿಯಾಗಿದ್ದು ಸರ್ವಪಾಪಗಳನ್ನು ನಾಶಪಡಿಸುವಂತಹದ್ದಾಗಿರುವುದು. ಈ ನದಿಯು ವಿಷ್ಣುಲೋಕವನ್ನು ನೀಡುವಂತಹದ್ದಾಗಿರುವುದು.

**ತುಂಗಭದ್ರಾ ದಶಮುಖಾ ಬ್ರಹ್ಮಲೋಕಪ್ರದಾಯಿನೀ ।**
**ಸುವರ್ಣಮುಖರೀ ಪುಣ್ಯಾ ಪ್ರೋಕ್ತಾ ನವಮುಖಾ ತಥಾ ॥೧೬॥**

೧೬ ದಶಮುಖವಾಗಿ ಹರಿಯುವ ತುಂಗಭದ್ರಾ ನದಿಯು ಬ್ರಹ್ಮ ಲೋಕಪ್ರದವಾಗಿರುವುದು. ಒಂಭತ್ತು ಮುಖವಾಗಿ ಹರಿಯುವ ಸುವರ್ಣಾಮುಖರೀ ಎಂಬ ನದಿಯು ಪುಣ್ಯತಮವಾಗಿರುವುದು.

**ತತ್ರೈವ ಸುಪ್ರತಾತೇ ಬ್ರಹ್ಮಲೋಕಚ್ಯುಸ್ತಥಾ ।**
**ಸರಸ್ವತೀ ಪಂಪಾ ಚ ಕನ್ಯಾ ಶ್ವೇತನದೀ ಶುಭಾ ॥೧೭॥**

೧೭ ಬ್ರಹ್ಮಲೋಕದಲ್ಲಿ ಪುಣ್ಯಫಲವನ್ನನುಭವಿಸಿ ಪುನಃ ಭೂಲೋಕಕ್ಕೆ ಬಂದಂಥವರು ಈ ನದಿಗಳ ದಡದಲ್ಲೇ ಜನಿಸುವರು. ಸರಸ್ವತೀ, ಪಂಪಾ, ಕನ್ಯಾ, ಶ್ವೇತ ನದೀ ಇವುಗಳೂ ಸಹ ಪುಣ್ಯಪ್ರದವಾದುದು.

**ಏತಾಸಾಂ ತೀರವಾಸೇನ ಇಂದ್ರಲೋಕಮವಾಪ್ನುಯಾತ್ ।**
**ಸಹ್ಯಾದ್ರಿಜಾ ಮಹಾಪುಣ್ಯಾ ಕಾವೇರೀತಿ ಮಹಾನದೀ ॥೧೮॥**

೧೮ ಇವುಗಳ ತೀರವಾಸದಿಂದ ಇಂದ್ರಲೋಕ ಪ್ರಾಪ್ತವಾಗುವುದು. ಸಹ್ಯಾದ್ರಿ ಎಂಬ ಬೆಟ್ಟದಲ್ಲಿ ಜನಿಸುವ ಕಾವೇರಿ ಎಂಬ ನದಿಯು ಮಹಾಪುಣ್ಯ ಪ್ರದವಾಗಿರುವುದು.

**ಸಪ್ತವಿಂಶಮುಖಾ ಪ್ರೋಕ್ತಾ ಸರ್ವಾಭೀಷ್ಟಪ್ರದಾಯಿನೀ ।**
**ತತ್ತೀರಾಃ ಸ್ವರ್ಗದಾಶ್ಚೈವ ಬ್ರಹ್ಮವಿಷ್ಣುಪದಪ್ರದಾಃ ॥೧೯॥**

೧೯ ಇದು ಇಪ್ಪತ್ತೇಳು ಮುಖವಾಗಿ ಹರಿದು ಸಕಲ ಇಷ್ಟಾರ್ಥಗಳನ್ನು ನೀಡುವುದು. ಇದರ ತೀರವಾಸವು ಸ್ವರ್ಗವನ್ನೂ, ಬ್ರಹ್ಮ ವಿಷ್ಣು ಲೋಕವನ್ನು ಅನುಗ್ರಹಿಸುವುದು.

**ಶಿವಲೋಕಪ್ರದಾಃ ಶೈವಾಃ ತಥಾಭೀಷ್ಟಫಲಪ್ರದಾಃ ।**
**ನೈಮಿಷೇ ಬದರೇ ಸ್ನಾಯಾನ್ಮೇಷಗೇ ಚ ಗುರೌ ರವೌ ॥೨೦॥**

೨೦ ಇದರ ತೀರದಲ್ಲಿರುವ ಶಿವಕ್ಷೇತ್ರಗಳು ಶಿವಲೋಕವನ್ನು ಅನುಗ್ರಹಿಸುವುವು. ನೈಮಿಷಾರಣ್ಯದಲ್ಲಿರುವ ಬದರೀ ಕ್ಷೇತ್ರದಲ್ಲಿ ಗುರುವೂ, ಸೂರ್ಯನೂ ಮೇಷ ರಾಶಿಯಲ್ಲಿರುವಾಗ,

**ಬ್ರಹ್ಮಲೋಕಪ್ರದಂ ವಿದ್ಯಾತ್ತತಃ ಪೂಜಾದಿಕಂ ತಥಾ ।**
**ಸಿಂಧುನದ್ಯಾಂ ತಥಾ ಸ್ನಾನಂ ಸಿಹ್ಮೇ ಕರ್ಕಟಕೇ ರವೌ ॥೨೧॥**

೨೧ ಸ್ನಾನ-ಪೂಜಾದಿಗಳನ್ನು ಮಾಡಿದರೆ ಬ್ರಹ್ಮಲೋಕವನ್ನು ಹೊಂದುವರೆಂದು ತಿಳಿಯತಕ್ಕದ್ದು. ಸಿಂಹರಾಶಿ, ಕರ್ಕಾಟಕ ರಾಶಿಯಲ್ಲಿ ಸೂರ್ಯನು ಸಂಚರಿಸುವಾಗ ಸಿಂಧೂ ನದಿಯಲ್ಲಿ ಸ್ನಾನ ಮಾಡಬೇಕು. ಹೀಗೆ ಮಾಡಿದರೆ ಬ್ರಹ್ಮಲೋಕಪ್ರಾಪ್ತವಾಗುವುದು.

**ಕೇದಾರೋದಕಪಾನಂ ಚ ಸ್ನಾನಂ ಚ ಜ್ಞಾನದಂ ವಿದುಃ ।**
**ಗೋದಾವರ್ಯಾಂ ಸಿಂಹಮಾಸೇ ಸ್ನಾಯಾತ್ಸಿಂಹಬೃಹಸ್ಪತೌ ॥೨೨॥**

೨೨ ಇಂತಹ ಪುಣ್ಯತಮವಾದ ನದಿಗಳ ನೀರಿನ ಪಾನ, ಸ್ನಾನಗಳು ದಿವ್ಯಜ್ಞಾನವನ್ನು ನೀಡುವಂತಹದ್ದು. ಸಿಂಹಮಾಸದಲ್ಲಿ ಸಿಂಹರಾಶಿಯಲ್ಲಿ ಬೃಹಸ್ಪತಿ ಇರುವಾಗ ಗೋದಾವರೀ ನದಿ ಸೇವೆಯು,

**ಶಿವಲೋಕಪ್ರದಮಿತಿ ಶಿವೇನೋಕ್ತಂ ತಥಾ ಪುರಾ ।**
**ಯಮುನಾಶೋಣಯೋಃ ಸ್ನಾಯಾದ್ಗುರೌ ಕನ್ಯಾಗತೇ ರವೌ ॥೨೩॥**

೨೩ ಶಿವಲೋಕವನ್ನು ಅನುಗ್ರಹಿಸುವುದು ಎಂದು ಈ ಹಿಂದೆ ಶಿವನೇ ಹೇಳಿರುವನು. ಯಮುನಾ ಮತ್ತು ಶೋಣಾನದಿಗಳಲ್ಲಿ ಸೂರ್ಯ ಮತ್ತು ಗುರುಗಳು ಕನ್ಯಾರಾಶಿಯಲ್ಲಿರುವಾಗ ಸ್ನಾನ ಮಾಡಿದ್ದೇ ಆದರೆ,

**ಧರ್ಮಲೋಕೇ ದಂತಿಲೋಕೇ ಮಹಾಭೋಗಪ್ರದಂ ವಿದುಃ ।**
**ಕಾವೇರ್ಯಾಂ ಚ ತಥಾ ಸ್ನಾಯಾತ್ತುಲಾಗೇ ತು ರವೌ ಗತೌ ॥೨೪॥**

೨೪ ಯಮಧರ್ಮರಾಜನ ಲೋಕದಲ್ಲಿಯೂ, ವಿನಾಯಕ ಲೋಕದಲ್ಲಿಯೂ ಮಹಾಭೋಗವನ್ನು ಅನುಭವಿಸುವರು ಎಂದು ತಿಳಿಯುವುದು. ಕಾವೇರಿ ನದಿಯಲ್ಲಿ ತುಲಾರಾಶಿಯಲ್ಲಿ ಸೂರ್ಯನು ಸಂಚರಿಸುವಾಗ ಸ್ನಾನ ಮಾಡಿದ್ದೇ ಆದರೆ,

**ವಿಷ್ಣೋರ್ವಚನಮಾಹಾತ್ಮ್ಯಾತ್ಸರ್ವಾಭೀಷ್ಟಪ್ರದಂ ವಿದುಃ ।**
**ವೃಶ್ಚಿಕೇ ಮಾಸಿ ಸಂಪ್ರಾಪ್ತೇ ತಥಾರ್ಕೇ ಗುರುವೃಶ್ಚಿಕೇ ॥೨೫॥**

೨೫ ವಿಷ್ಣುವಚನ ಮಹಾತ್ಮೆಯಿಂದ ಸಕಲಾಭೀಷ್ಟಗಳೂ ಉಂಟಾಗುವುವು. ಹಾಗೇ ವೃಶ್ಚಿಕ ಮಾಸದಲ್ಲಿ ಗುರು ಹಾಗೂ ರವಿಯ ಸಂಚಾರ ಕಾಲದಲ್ಲಿ ಸಹ ಸಕಲಾಭೀಷ್ಟಗಳೂ ಲಬಿಸುವುದು ಎಂದು ವಿಷ್ಣುವಿನ ಮಾತಿನಿಂದ ತಿಳಿಯಬಹುದಾಗಿದೆ.

**ನರ್ಮದಾಯಾಂ ನದೀಸ್ನಾನಾದ್ವಿಷ್ಣುಲೋಕಮವಾಪ್ನುಯಾತ್ ।**
**ಸುವರ್ಣಮುಖರೀಸ್ನಾನಂ ಚಾಪಗೇ ಚ ಗುರೌ ರವೌ ॥೨೬॥**

೨೬ ನರ್ಮದಾ ನದಿಯಲ್ಲಿ ಸಹ ಗುರುವೃಶ್ಚಿಕ ರಾಶಿಯಲ್ಲಿ ರವಿಯೊಡನಿರುವಾಗ ಸ್ನಾನ ಮಾಡಿದರೆ ವಿಷ್ಣು ಲೋಕಪ್ರಾಪ್ತವಾಗುವುದು. ಧನುಃ ರಾಶಿಯಲ್ಲಿ ಗುರು, ರವಿಗಳಿರುವಾಗ ಸುವರ್ಣಮುಖರೀ ನದಿಯಲ್ಲಿ ಸ್ನಾನಮಾಡಿದ್ದೇ ಆದರೆ,

**ಶಿವಲೋಕಪ್ರದಮಿತಿ ಬ್ರಹ್ಮಣೋ ವಚನಂ ಯಥಾ ।**
**ಮೃಗಮಾಸಿ ತಥಾ ಸ್ನಾಯಾಜ್ಜಾಹ್ನವ್ಯಾಂ ಮೃಗಗೇ ಗುರೌ ॥೨೭॥**

೨೭ ಶಿವಲೋಕ ಪ್ರಾಪ್ತಿ ಎಂದು ಬ್ರಹ್ಮನ ವಚನವಿದೆ. ಗುರು, ಮಕರ ರಾಶಿಯಲ್ಲಿರುವಾಗ ಮಾರ್ಗಶಿರ ಮಾಸದಲ್ಲಿ ಗಂಗಾ ನದೀ ಸ್ನಾನವು,

ಶಿವಲೋಕಪ್ರದಮಿತಿ ಬ್ರಹ್ಮಣೋ ವಚನಂ ಯಥಾ ।
ಬ್ರಹ್ಮವಿಷ್ಣ್ವೋಃ ಪದೇ ಭುಕ್ತ್ವಾ ತದಂತೇ ಜ್ಞಾನಮಾಪ್ನುಯಾತ್ ॥೨೮॥

೨೮ ಶಿವಲೋಕ ಪ್ರದವೆಂದು ಬ್ರಹ್ಮನೇ ಹೇಳಿರುವನು. ಹಾಗೆಯೇ ಬ್ರಹ್ಮ ಮತ್ತು ವಿಷ್ಣು ಲೋಕದಲ್ಲಿ ಅನೇಕ ಕಾಲ ವಾಸವಾಗಿದ್ದು ಕೊನೆಗೆ ಬ್ರಹ್ಮಜ್ಞಾನವನ್ನು ಪಡೆಯುವರು.

ಗಂಗಾಯಾಂ ಮಾಘಮಾಸೇ ತು ತಥಾ ಕುಂಭಗತೇ ರವೌ ।
ಶ್ರಾದ್ಧಂ ವಾ ಪಿಂಡದಾನಂ ವಾ ತಿಲೋದಕಮಥಾಪಿ ವಾ ॥೨೯॥

೨೯ ಮಾಘ ಮಾಸದಲ್ಲಿ ಹಾಗೇ ರವಿಯು ಕಂಭ ರಾಶಿಯಲ್ಲಿರುವಾಗ ಗಂಗಾ ನದಿಯ ತೀರದಲ್ಲಿ ಶ್ರಾದ್ಧ, ಪಿಂಡದಾನ, ತರ್ಪಣ ಇವುಗಳನ್ನು ಮಾಡಿದ್ದೇ ಆದರೆ,

ವಂಶದ್ವಯಪಿತೃಣಾಂ ಚ ಕುಲಕೋಟ್ಯುದ್ಧರಂ ವಿದುಃ ।
ಕೃಷ್ಣವೇಣ್ಯಾಂ ಪ್ರಶಂಸಂತಿ ಮೀನಗೇ ಚ ಗುರೌ ರವೌ ॥೩೦॥

೩೦ ತಾಯಿಯ ಮತ್ತು ತಂದೆಯ ವಂಶಗಳೆರಡರ ಕುಲ ಕೋಟಿಗಳ ಉದ್ಧಾರವಾಗುವುದು ಕೃಷ್ಣವೇಣೀ ನದಿಯಲ್ಲಿ ಮೀನ ರಾಶಿಯಲ್ಲಿ ಗುರು, ರವಿಗಳಿರುವಾಗ ಸ್ನಾನಾದಿಗಳನ್ನು ಮಾಡಿದರೆ ಉತ್ತಮ ಫಲವೆಂದು ವಿದ್ವಾಂಸರು ಹೇಳುವರು.

ತತ್ತತ್ತೀರ್ಥೇ ಚ ತನ್ಮಾಸಿ ಸ್ನಾನಮಿಂದ್ರಪದಪ್ರದಂ ।
ಗಂಗಾಂ ವಾ ಸಹ್ಯಜಾಂ ವಾಪಿ ಸಮಾಶ್ರಿತ್ಯ ವಸೇದ್ಬುಧಃ ॥೩೧॥

೩೧ ಆಯಾ ತೀರ್ಥತೀರದಲ್ಲಿ ಆಯಾ ಮಾಸದಲ್ಲಿ ಸ್ನಾನ ಮಾಡಿದ್ದದ್ದೇ ಆದರೆ ಇಂದ್ರ ಪದವಿಯನ್ನು ಆ ತೀರ್ಥಗಳು ನೀಡುವುವು. ಆದ್ದರಿಂದ ಗಂಗೆ ಅಥವಾ ಕಾವೇರಿಯ ತೀರದಲ್ಲಿ ಬುದ್ಧಿವಂತರು ವಾಸಿಸಬೇಕು.

ತತ್ಕಾಲಕೃತಪಾಪಸ್ಯ ಕ್ಷಯೋ ಭವತಿ ನಿಶ್ಚಿತಂ ।
ರುದ್ರಲೋಕಪ್ರದಾನ್ಯೇವ ಸಂತಿ ಕ್ಷೇತ್ರಾಣ್ಯನೇಕಶಃ ॥೩೨॥

೩೨ ಹೀಗೆ ವಾಸ ಮಾಡಿದರೆ ಆಯಾ ಕಾಲದಲ್ಲಿ ಮಾಡಿದ ಪಾಪಗಳು (ಗೊತ್ತಿರದ ಪಾಪಗಳು) ನಿಶ್ಚಯವಾಗಿಯೂ ನಾಶವಾಗುವುವು. ಹೀಗೇ ಅನೇಕ ಕ್ಷೇತ್ರಗಳು ರುದ್ರಲೋಕಪ್ರದಗಳಾಗಿವೆ.

ತಾಮ್ರಪರ್ಣೀ ವೇಗವತೀ ಬ್ರಹ್ಮಲೋಕಫಲಪ್ರದೇ ।
ತಯೋಸ್ತೀರೇ ಹಿ ಸಂತ್ಯೇವ ಕ್ಷೇತ್ರಾಣಿ ಸ್ವರ್ಗದಾನಿ ಚ ॥೩೩॥

೩೩ ತಾಮ್ರಪರ್ಣಿ ವೇಗವತೀ ಈ ನದಿಗಳೂ ಬ್ರಹ್ಮಲೋಕವನ್ನು ಅನುಗ್ರಹಿಸುವಂತಹುವು. ಅವುಗಳ ತೀರದಲ್ಲೂ ಅನೇಕ ಕ್ಷೇತ್ರಗಳಿದ್ದು ಅವುಗಳು ಸ್ವರ್ಗಲೋಕಪ್ರದಗಳಾಗಿವೆ.

ಸಂತಿ ಕ್ಷೇತ್ರಾಣಿ ತನ್ಮಧ್ಯೇ ಪುಣ್ಯದಾನಿ ಚ ಭೂರಿಶಃ ।
ತತ್ರ ತತ್ರ ವಸನ್ ಪ್ರಾಜ್ಞಸ್ತಾದೃಶಂ ಚ ಫಲಂ ಲಭೇತ್ ॥೩೪॥

೩೪ ಇವುಗಳ ಮಧ್ಯದಲ್ಲಿಯೇ ಅನೇಕ ಪುಣ್ಯ ಕ್ಷೇತ್ರಗಳಿರುವುವು. ಆಯಾ ಕ್ಷೇತ್ರಗಳಲ್ಲಿ ವಾಸ ಮಾಡಿದ ಪ್ರಾಜ್ಞರಿಗೆ ಅದಕ್ಕೆ ತಕ್ಕಂತಹ ಫಲವು ಲಭಿಸುವುದು.

ಸದಾಚಾರೇಣ ಸದ್ವೃತ್ತ್ಯಾ ಸದಾ ಭಾವನಯಾಪಿ ಚ ।
ವಸೇದ್ದಯಾಲುಃ ಪ್ರಾಜ್ಞೋ ವೈ ನಾನ್ಯಥಾ ತತ್ಫಲಂ ಲಭೇತ್ ॥೩೫॥

೩೫ ಕೇವಲ ವಾಸಮಾತ್ರದಿಂದ ಮೇಲೆ ಹೇಳಿದ ಫಲಗಳು ಲಭ್ಯವಾಗುವುದೆಂದು ತಿಳಿಯಬಾರದು. ಇಂತಹ ಕ್ಷೇತ್ರಗಳಲ್ಲಿ ಒಳ್ಳೆಯ ಆಚಾರ, ಒಳ್ಳೆಯ ನಡತೆ, ಒಳ್ಳೆಯ ಭಾವನೆಗಳಿಂದ ಸಹ ದಯಾಳುವಾಗಿ ಯಾವನು ವಾಸಿಸುವನೋ ಅಂತಹವನು ಮೇಲೆ ಹೇಳಿದ ಫಲಗಳನ್ನು ಹೊಂದುವನು.

ಪುಣ್ಯಕ್ಷೇತ್ರೇ ಕೃತಂ ಪುಣ್ಯಂ ಬಹುಧಾ ಋದ್ಧಿಮೃಚ್ಛತಿ ।
ಪುಣ್ಯಕ್ಷೇತ್ರೇ ಕೃತಂ ಪಾಪಂ ಮಹದಣ್ವಪಿ ಜಾಯತೇ ॥೩೬॥

೩೬ ಪುಣ್ಯಕ್ಷೇತ್ರದಲ್ಲಿ ಮಾಡಿದ ಪುಣ್ಯವು ಅನೇಕ ಪ್ರಕಾರವಾಗಿ ವೃದ್ಧಿಯನ್ನು ಹೊಂದುವುದು. ಅದೇ ಪುಣ್ಯಕ್ಷೇತ್ರದಲ್ಲಿ ಮಾಡಿದ ಅಲ್ಪವಾದ ಪಾಪವೂ ಹೆಚ್ಚಿನದ್ದಾಗಿ ದುಷ್ಫಲವನ್ನು ನೀಡುವುದು.

ತತ್ಕಾಲಂ ಜೀವನಾರ್ಥಶ್ಚೇತ್ಪುಣ್ಯೇನ ಕ್ಷಯಮೇಷ್ಯತಿ ।
ಪುಣ್ಯಮೈಶ್ವರ್ಯದಂ ಪ್ರಾಹುಃ ಕಾಯಿಕಂ ವಾಚಿಕಂ ತಥಾ ॥೩೭॥

೩೭ ಇಂತಹ ಪುಣ್ಯಕ್ಷೇತ್ರದಲ್ಲಿ ವಾಸಿಸುವಾಗ ಜೀವನಕ್ಕೋಸ್ಕರ ವೃತ್ತಿಯನ್ನು

(ಪೌರೋಹಿತ್ಯಾದಿ) ಅವಲಂಬಿಸಿಕೊಂಡು ವಾಸಿಸಿದರೆ ಪುಣ್ಯವು ನಶಿಸಿಹೋಗುವುದ
ಪುಣ್ಯವು ಐಶ್ವರ್ಯಕ್ಕೆ ಕಾರಣವಾಗಿರುವುದು ಹಾಗೇ ದೇಹದಿಂದಾಗಲಿ
ಮಾತಿನಿಂದಾಗಲೀ,

ಮಾನಸಂ ಚ ತಥಾ ಪಾಪಂ ತಾದೃಶಂ ನಾಶಯೇದ್ದ್ವಿಜಾಃ।
ಮಾನಸಂ ವಜ್ರಲೇಪಂ ತು ಕಲ್ಪಕಲ್ಪಾನುಗಂ ತಥಾ ॥೩೮॥

೩೮ ಮನಸ್ಸಿನಿಂದಾಗಲೀ ಪಾಪಾಚರಣೆ ಮಾಡಬಾರದು. ಹಾಗೆ ಮಾಡಿದ ಪಾಪ
ದೃಢವಾದುದು. ಆದ್ದರಿಂದ ಈ ರೀತಿ ಪಾಪಾಚರಣೆಯನ್ನು ಮಾಡಬಾರದು. ಮಾನಸಿಕವಾ
ಪಾಪವು ವಜ್ರಲೇಪದಂತೆ ಗಟ್ಟಿಯಾಗಿ ನಿಲ್ಲುವುದು. ಮಾನಸಿಕ ಪಾಪವು ಕಲ್ಪ
ಕಲ್ಪಗಳವರೆವಿಗೂ ನಾಶವಾಗಲಾರದು.

ಧ್ಯಾನಾದೇವ ಹಿ ತನ್ನಶ್ಯೇನ್ನಾನ್ಯಥಾ ನಾಶಮೃಚ್ಛತಿ।
ವಾಚಿಕಂ ಜಪಜಾಲೇನ ಕಾಯಿಕಂ ಕಾಯಶೋಷಣಾತ್ ॥೩೯॥

೩೯ ಇಂತಹ ಮಾನಸಿಕ ಪಾಪವನ್ನು ಧ್ಯಾನದಿಂದಲೇ ನಾಶಪಡಿಸಿಕೊಳ್ಳಬೇಕು
ಇಲ್ಲದಿದ್ದಲ್ಲಿ ನಾಶವಾಗಲಾರದು. ಮಾತಿನಿಂದ ಮಾಡಿದ ಪಾಪವು ಜಪಗಳಿಂದಲೂ
ದೈಹಿಕವಾದ ಪಾಪವೂ ಶರೀರವನ್ನು ಉಪವಾಸಾದಿಗಳಿಂದ ದಂಡಿಸುವಿಕೆಯಿಂ
ನಾಶಪಡಿಸಿಕೊಳ್ಳಬೇಕು.

ದಾನಾದ್ಧನಕೃತಂ ನಶ್ಯೇನ್ನಾನ್ಯಥಾ ಕಲ್ಪಕೋಟಿಭಿಃ।
ಕೃಚಿತ್ಪಾಪೇನ ಪುಣ್ಯಂ ಚ ವೃದ್ಧಿಪೂರ್ವೇಣ ನಶ್ಯತಿ ॥೪೦॥

೪೦ ಧನದಿಂದ ಮಾಡಲ್ಪಟ್ಟ ಪಾಪವು ದಾನದಿಂದ ನಾಶವಾಗುವುದು. ಹಾಗಿಲ್ಲ
ಪಕ್ಷದಲ್ಲಿ ಇಂತಹ ಪಾಪವು ಕಲ್ಪ ಕೋಟಿಯಾದರೂ ನಾಶವಾಗಲಾರದು. ಸ್ವ
ಮಾತ್ರವಾದ ಪಾಪದಿಂದ ಪುಣ್ಯ ವೃದ್ಧಿಯಾಗದೇ ನಾಶ ಹೊಂದುವುದು. ಅಂದ
ಪಾಪಾಚರಣೆಯಿಂದ ಪುಣ್ಯದ ಫಲವು ನಶಿಸುವುದೆಂದು ಅರ್ಥವು.

ಬೀಜಾಂಶಶ್ಚೈವ ವೃದ್ಧ್ಯಂಶೋ ಭೋಗಾಂಶಃ ಪುಣ್ಯಪಾಪಯೋಃ।
ಜ್ಞಾನನಾಶ್ಯೋ ಹಿಬೀಜಾಂಶೋ ವೃದ್ಧಿರುಕ್ತಪ್ರಕಾರತಃ॥೪೧॥

೪೧ ಪುಣ್ಯ ಪಾಪಗಳಿಗೆ ಬೀಜಾಂಶ, ವೃದ್ಧ್ಯಂಶ, ಭೋಗಾಂಶ ಎಂದು ಮೂರು ಅಂಶಗಳಿರುವುವು. ಬೀಜಾಂಶವು ಜ್ಞಾನದಿಂದ ನಾಶವಾಗುವುದು. ವೃದ್ಧ್ಯಂಶವು ಹಿಂದೆ ಹೇಳಿದ ಧ್ಯಾನಾದಿಗಳಿಂದ ನಾಶವಾಗುವುದು.

**ಭೋಗಾಂಶೋ ಭೋಗನಾಶ್ಯಸ್ತು ನಾನ್ಯಥಾ ಪುಣ್ಯಕೋಟಿಭಿಃ |**
**ಬೀಜಪ್ರರೋಹೇ ನಷ್ಟೇ ತು ಶೇಷೋ ಭೋಗಾಯ ಕಲ್ಪತೇ ||೪೨||**

೪೨ ಭೋಗಾಂಶವು ಭೋಗ ಅಂದರೆ ಅನುಭವಿಸುವಿಕೆಯಿಂದ ನಾಶವಾಗುವುದು. ಹಾಗಿಲ್ಲದಿದ್ದರೆ ಕೋಟಿ ಪುಣ್ಯಗಳಿಂದಲೂ ನಾಶಹೊಂದಲಾರದು. ಪುಣ್ಯ ಪಾಪಗಳ ಬೀಜಾಂಶವು ಜ್ಞಾನದಿಂದ ನಾಶವಾಗಲು ಉಳಿದ ಅಂಶಗಳು ಭೋಗಕ್ಕಾಗಿ ಉಳಿಯುವುದು.

**ದೇವಾನಾಂ ಪೂಜಯಾ ಚೈವ ಬ್ರಾಹ್ಮಣಾನಾಂ ಚ ದಾನತಃ |**
**ತಪೋಧಿಕ್ಯಾಚ್ಚ ಕಾಲೇನ ಭೋಗಃ ಸಹ್ಯೋ ಭವೇನ್ನೃಣಾಂ |**
**ತಸ್ಮಾತ್ಪಾಪಮಕೃತ್ವೈವ ವಸ್ತವ್ಯಂ ಸುಖಮಿಚ್ಛತಾ ||೪೩||**

೪೩ ದೇವತೆಗಳನ್ನು ಪೂಜಿಸುವಿಕೆಯಿಂದಲೂ, ಬ್ರಾಹ್ಮಣರಿಗೆ ದಾನ ಮಾಡುವಿಕೆ ಯಿಂದಲೂ ಅಧಿಕವಾದ ತಪಸ್ಸಿನಿಂದಲೂ ಕಾಲಕ್ರಮದಲ್ಲಿ ತಾಪದ ಭೋಗವು ಮನುಷ್ಯರಿಗೆ ಸಹಿಸಲು ಸಾಧ್ಯವಾಗುವುದು. ಆದ್ದರಿಂದ ಪಾಪಕಾರ್ಯವನ್ನು ಮಾಡದೇನೇ ಸುಖವಾಗಿರಬೇಕೆಂಬುವನು. ಸತ್ಕರ್ಮಗಳನ್ನು ಆಚರಿಸುತ್ತಲೇ ಇರಬೇಕು.

**ಇತಿ ಶ್ರೀ ಶಿವಮಹಾಪುರಾಣೇ ವಿದ್ಯೇಶ್ವರಸಂಹಿತಾಯಾಂ ದ್ವಾದಶೋಽಧ್ಯಾಯಃ**
**ಇಲ್ಲಿಗೆ ಶ್ರೀ ಶಿವಪುರಾಣದಲ್ಲಿ ವಿದ್ಯೇಶ್ವರ ಸಂಹಿತೆಯಲ್ಲಿ**
**ಹನ್ನೆರಡನೇ ಅಧ್ಯಾಯವು ಮುಗಿದುದು.**

||ಶ್ರೀಃ||

||ಓಂ ನಮಃ ಶಿವಾಯ||

ಅಥ ಶ್ರೀ ಶಿವಮಹಾಪುರಾಣೇ
ವಿದ್ಯೇಶ್ವರಸಂಹಿತಾಯಾಂ

# ತ್ರಯೋದಶೋಽಧ್ಯಾಯಃ

## ಹದಿಮೂರನೇ ಅಧ್ಯಾಯವು

||ಋಷಯ ಊಚುಃ||

**ಸದಾಚಾರಂ ಶ್ರಾವಯಾತು ಯೇನ ಲೋಕಾನ್ ಜಯೇದ್ಬುಧಃ |**
**ಧರ್ಮಾಧರ್ಮಮಯಾನ್ ಬ್ರೂಹಿ ಸ್ವರ್ಗನಾರಕದಾಂಸ್ತಥಾ ||೧||**

೧ ಋಷಿಗಳು ಹೇಳುತ್ತಾರೆ, ಓ! ಸೂತ ಮುನಿಯೇ ಪುಣ್ಯಲೋಕಗಳನ್ನು ಜಯಿಸುವಂತಹ ಸದಾಚಾರಗಳಾವುವು ? ಧರ್ಮ ಮತ್ತು ಅಧರ್ಮ ಸ್ವರೂಪಿಗಳಾಗಿ ಸ್ವರ್ಗ ಮತ್ತು ನರಕಪ್ರದವಾದ ಅನಾಚಾರಗಳಾವುವು ? ಅವುಗಳನ್ನು ನಮಗೆ ತಿಳಿಸುವವನಾಗು.

||ಸೂತ ಉವಾಚ||

**ಸದಾಚಾರಯುತೋ ವಿದ್ವಾನ್ ಬ್ರಾಹ್ಮಣೋ ನಾಮ ನಾಮತಃ |**
**ವೇದಾಚಾರಯುತೋ ವಿಪ್ರೋ ಹ್ಯೇತೈರೇಕೈಕವಾನ್ ದ್ವಿಜಃ ||೨||**

೨ ಸೂತರು ಹೇಳುತ್ತಾರೆ, ಸದಾಚಾರವುಳ್ಳವನೂ, ವಿದ್ವಾಂಸನೂ ಆದವನಿಗೆ ಬ್ರಾಹ್ಮಣ ಎಂದು ಹೆಸರು. ವೇದ ಮತ್ತು ಆಚಾರಗಳಿಂದ ಕೂಡಿದವನಿಗೆ ವಿಪ್ರನೆಂದು ಹೆಸರು. ಇವುಗಳಲ್ಲಿ ಯಾವುದಾದರೊಂದರಿಂದ ಕೂಡಿದವನಿಗೆ ದ್ವಿಜನೆನ್ನುವರು.

ವಿ.ಸು.:- ಮೇಲೆ ಹೇಳಿದ ಶ್ಲೋಕದಲ್ಲಿ ಬ್ರಾಹ್ಮಣ, ವಿಪ್ರ, ದ್ವಿಜನೆಂದು ಬ್ರಾಹ್ಮಣರಲ್ಲೇ ವಿಭಾಗವು ಕಾಣುತ್ತಿದೆ. ಇಲ್ಲಿ ವಿಶೇಷವಾಗಿ ಬ್ರಾಹ್ಮಣನೆಂದರೆ, ಬ್ರಹ್ಮ ಭಾವವನ್ನು ಹೊಂದಿದವನೆಂದು ಮತ್ತು ಯಾವಾಗಲೂ ಸದಾಚಾರದಿಂದಕೂಡಿ ಸರ್ವಪ್ರಾಣಿಗಳನ್ನು

ಸಮತಾ ಭಾವದಿಂದೆಂದರೆ ತನ್ನಂತೆ ಇತರರೂ ಬಾಳಬೇಕೆಂಬ ವಿಶಾಲವಾದ ಭಾವನೆ ಉಳ್ಳವನೆಂದು ಅರ್ಥ. ಇದೇ ಅಂಶವು ಒಬ್ಬ ಕವಿಯಿಂದ ಹೀಗೇ ಹೇಳಲ್ಪಟ್ಟಿದೆ. "ಬ್ರಹ್ಮಜ್ಞಾನ ಬ್ರಾಹ್ಮಣ" ಎಂದು. ಅಂದರೆ ಬ್ರಾಹ್ಮಣನಿಗೆ ಬ್ರಹ್ಮಜ್ಞಾನವೇ ಗುರಿ. ಉಳಿದಂತೆ ಕೇವಲ ಕರ್ಮದಲ್ಲೇ ವಿಶೇಷಾಸಕ್ತಿ ಬೆಳೆಸಿಕೊಂಡವನು ವಿಪ್ರ ಎನ್ನಬಹುದು. ದ್ವಿಜ ಎಂದರೆ ಬ್ರಾಹ್ಮಣ ಮತ್ತು ಪಕ್ಷಿ ಎಂದು ಅರ್ಥವಾಗುತ್ತದೆ. ಬ್ರಾಹ್ಮಣ ಸ್ತ್ರೀಯ ಉದರದಲ್ಲಿ ಜನಿಸುವಿಕೆ ನಂತರ ಗಾಯತ್ರಿ ಉಪದೇಶಕ್ಕೆ ಮೂಲವಾದ ಉಪನಯನ ಸಂಸ್ಕಾರಗಳಿಂದ ಬ್ರಾಹ್ಮಣನಿಗೆ ದ್ವಿಜತ್ವ ಸಿದ್ಧಿಯಾಗುತ್ತದೆ. ಅಂದರೆ ಎರಡು ಸಾರಿ ಜನ್ಮವಾಗುತ್ತದೆ.

ಪಕ್ಷಿಗಳಿಗೆ ದ್ವಿಜತ್ವ ಹೇಗೆಂದರೆ ಮೊಟ್ಟೆ ತಾಯಿಂದ ಬರುವುದು ಒಂದು ಜನ್ಮ. ನಂತರ ಮೊಟ್ಟೆಯಿಂದ ಹೊರಗೆ ಇರುವುದು ಮತ್ತೊಂದು ಜನ್ಮ. ಹೀಗಾಗಿ ಪಕ್ಷಿಗಳಿಗೆ ಸಹ ದ್ವಿಜ ಎಂದು ಸಂಸ್ಕೃತದಲ್ಲಿ ಬಳಕೆ ಇದೆ.

**ಅಲ್ಪಾಚಾರೋಽಲ್ಪವೇದಶ್ಚ ಕ್ಷತ್ರಿಯೋ ರಾಜಸೇವಕಃ |**
**ಕಿಂಚಿದಾಚಾರವಾನ್ ವೈಶ್ಯಃ ಕೃಷಿವಾಣಿಜ್ಯಕೃತ್ತಥಾ ||೩||**

೩ ಸ್ವಲ್ಪ ವೇದಾಧ್ಯಯನ ಮಾಡಿ, ಸ್ವಲ್ಪವೇ ಆಚಾರವುಳ್ಳವನೂ ಆದಂತಹವನು ರಾಜಸೇವಕನಾದ ಕ್ಷತ್ರಿಯನು. ಸ್ವಲ್ಪವೇ ಆಚಾರ, ವ್ಯವಸಾಯ, ವ್ಯಾಪಾರ ಉಳ್ಳವನು ವೈಶ್ಯನು.

**ಶೂದ್ರಬ್ರಾಹ್ಮಣ ಇತ್ಯುಕ್ತಃ ಸ್ವಯಮೇವ ಹಿ ಕರ್ಷಕಃ |**
**ಅಸೂಯಾಲುಃ ಪರದ್ರೋಹೀ ಚಂಡಾಲದ್ವಿಜ ಉಚ್ಯತೇ ||೪||**

೪ ತಾನೇ ವ್ಯವಸಾಯ ಮಾಡುವವನನ್ನು ಶೂದ್ರ ಬ್ರಾಹ್ಮಣನೆನ್ನುತ್ತಾರೆ. ಅಸೂಯಾಪರನು, ಬೇರೆಯವರಿಗೆ ದ್ರೋಹ ಮಾಡುವವನು ಇಂತಹವವನನ್ನು ಚಂಡಾಲದ್ವಿಜನೆನ್ನುತ್ತಾರೆ.

**ಪೃಥಿವೀಪಾಲಕೋ ರಾಜಾ ಇತರೇ ಕ್ಷತ್ರಿಯಾ ಮತಾಃ |**
**ಧಾನ್ಯಾದಿಕ್ರಯವಾನ್ ವೈಶ್ಯ ಇತರೋ ವಣಿಗುಚ್ಯತೇ ||೫||**

೫ ಭೂಮಿಯನ್ನು ಪಾಲಿಸುವವನು ರಾಜ, ಉಳಿದವರೆಲ್ಲಾ ಕ್ಷತ್ರಿಯರು. ಧಾನ್ಯವನ್ನು ವ್ಯಾಪಾರ ಮಾಡುವವನು ವೈಶ್ಯನು. ಉಳಿದವರು ವಣಿಕ್ ಎನ್ನಿಸಿಕೊಳ್ಳುವರು.

ಬ್ರಹ್ಮಕ್ಷತ್ರಿಯವೈಶ್ಯಾನಾಂ ಶುಶ್ರೂಷುಃ ಶುದ್ರ ಉಚ್ಯತೇ ।
ಕರ್ಷಕೋ ವೃಷಲೋ ಜ್ಞೇಯ ಇತರೇ ಚೈವ ದಸ್ಯವಃ ॥೬॥

೬ ಬ್ರಾಹ್ಮಣ, ಕ್ಷತ್ರಿಯ, ವೈಶ್ಯರ ಶುಶ್ರೂಷೆ ಮಾಡುವವನು ಶುದ್ರನು ಎಂದು ಹೇಳಿದೆ. ಕೃಷಿಕನನ್ನು ವೃಷಲ ಎಂದು ಹೇಳಿದೆ. ಉಳಿದವರು ದಸ್ಯುಗಳು.

ಸರ್ವೋ ಹ್ಯುಷಃ ಪ್ರಾಙ್ಮುಖಶ್ಚ ಚಿಂತಯೇದ್ದೇವಪೂರ್ವಕಾ ।
ಧರ್ಮಾನರ್ಥಾಂಶ್ಚ ತತ್ಕ್ಲೇಶಾನಾಯಂ ಚ ವ್ಯಯಮೇವ ಚ ॥೭॥

೭ ಎಲ್ಲರೂ ಸಹ ಉಷ ಕಾಲಕ್ಕೆ ಎದ್ದು ಪೂರ್ವಾಭಿಮುಖವಾಗಿ ನಿಂತು ದೇವತೆಗಳನ್ನು ಪ್ರಾರ್ಥಿಸಿ ಧರ್ಮ, ಅರ್ಥಗಳನ್ನೂ ಅವುಗಳ ವ್ಯವಹಾರಗಳನ್ನೂ ಆದಾಯ-ಖರ್ಚುಗಳನ್ನೂ ಚಿಂತಿಸಬೇಕು.

ವಿ.ವಿ.:- ಉಷಃ ಕಾಲವೆಂದರೆ ಅರುಣೋದಯಕ್ಕೆ ಮುಂಚೆ ೩ ಮುಹೂರ್ತಗಳು ಅಂದರೆ ೯೬ ನಿಮಿಷಗಳು.

ಆಯುರ್ದ್ವೇಷಶ್ಚ ಮರಣಂ ಪಾಪಂ ಭಾಗ್ಯಂ ತಥೈವ ಚ ।
ವ್ಯಾಧಿಃ ಪುಷ್ಟಿಸ್ತಥಾ ಶಕ್ತಿಃ ಪ್ರಾತರುತ್ಥಾನದಿಕ್ಫಲಂ ॥೮॥

೮ ಪ್ರಾತಃಕಾಲದಲ್ಲಿ ಹಾಸಿಗೆಯಿಂದ ಏಳುವಾಗ ಪೂರ್ವ, ಆಗ್ನೇಯ, ದಕ್ಷಿಣ, ನೈಋುತ್ಯ, ಪಶ್ಚಿಮ, ವಾಯುವ್ಯ, ಉತ್ತರ, ಈಶಾನ್ಯ ಎಂಬ ಈ ಎಂಟು ದಿಕ್ಕುಗಳಿಗಭಿಮುಖವಾಗಿ ಎದ್ದರೆ, ಕ್ರಮವಾಗಿ ಆಯಸ್ಸು, ದ್ವೇಷ, ಮರಣ, ಪಾಪ, ಭಾಗ್ಯ, ರೋಗ, ಪುಷ್ಟಿ, ಹಾಗೇ ಶಕ್ತಿ ಎಂಬ ಫಲಗಳು ಉಂಟಾಗುವುವು.

ನಿಶಾಂತ್ಯಯಾಮೇಷಾ ಜ್ಞೇಯಾ ಯಾಮಾರ್ಧಂ ಸಂಧಿರುಚ್ಯತೇ ।
ತತ್ಕಾಲೇ ತು ಸಮುತ್ಥಾಯ ವಿಣ್ಮೂತ್ರೇ ವಿಸೃಜೇನ್ನರಃ ॥೯॥

೯ ರಾತ್ರಿಯ ಕೊನೆಯ ಯಾಮಕ್ಕೆ ಉಷಃಕಾಲವೆಂದು ಹೆಸರು. ಯಾಮದ ಅರ್ಧಭಾಗಕ್ಕೆ ಸಂಧಿ ಎಂದು ಹೆಸರು. ಆ ಸಂಧಿ ಕಾಲದಲ್ಲೆದ್ದು ಮಲ-ಮೂತ್ರಗಳನ್ನು ಮನುಷ್ಯನು ವಿಸರ್ಜಿಸಬೇಕು.

ವಿ.ವಿ.:- ಯಾಮವೆಂದರೆ ಮೂರು ಘಂಟೆಗಳ ಕಾಲ ಯಾಮಾರ್ಧವೆಂದರೆ 1 1/2 ಘಂಟೆಗಳ ಕಾಲ.

**ಗೃಹಾದ್ದೂರಂ ತತೋ ಗತ್ವಾ ಬಾಹ್ಯತಃ ಪ್ರಾವೃತಸ್ತಥಾ ।**
**ಉದಙ್ಮುಖಃ ಸಮಾವಿಶ್ಯ ಪ್ರತಿಬಂಧೇಽನ್ಯದಿಙ್ಮುಖಃ ॥೧೦॥**

೧೦ ಮನೆಯಿಂದ ದೂರಕ್ಕೆ ಹೋಗಿ ಹೊರಗಿನಿಂದ ತಲೆಗೆ ಮುಸುಕು ಹಾಕಿಕೊಂಡು ಉತ್ತರ ಮುಖವಾಗಿ ಅದಕ್ಕೆ ತೊಂದರೆ ಇದ್ದಲ್ಲಿ ಬೇರೆ ದಿಕ್ಕಿಗೆ ಅಭಿಮುಖವಾಗಿದ್ದುಕೊಂಡು ಕುಳಿತುಕೊಳ್ಳಬೇಕು.

**ಜಲಾಗ್ನಿ ಬ್ರಾಹ್ಮಣಾದೀನಾಂ ದೇವಾನಾಂ ನಾಭಿಮುಖ್ಯತಃ ।**
**ಲಿಂಗಂ ಪಿಧಾಯ ವಾಮೇನ ಮುಖಮನ್ಯೇನ ಪಾಣಿನಾ ॥೧೧॥**

೧೧ ಜಲ, ಅಗ್ನಿ, ಬ್ರಾಹ್ಮಣ ಮುಂತಾದವರು ದೇವತೆಗಳಿಗೆ (ಅಂದರೆ ದೇವಾಲಯಗಳಿಗೆ) ಅಭಿಮುಖವಾಗಿ ಮಲ, ಮೂತ್ರ ವಿಸರ್ಜಿಸಬಾರದು. ನಂತರ ಲಿಂಗವನ್ನು (ಜನನೇಂದ್ರಿಯ) ಎಡಗೈಯಿಂದ ಹಿಡಿದುಕೊಂಡು, ಬಲಗೈಯಿಂದ ಮುಖವನ್ನು ಮುಚ್ಚಿಕೊಳ್ಳಬೇಕು.

**ಮಲಮುತ್ಸೃಜ್ಯ ಚೋತ್ಥಾಯ ನಪಶ್ಯೇಚ್ಚೈವ ತನ್ಮಲಂ ।**
**ಉದ್ಧೃತೇನ ಜಲೇನೈವ ಶೌಚಂ ಕುರ್ಯಾಜ್ಜಲಾದ್ಬಹಿಃ ॥೧೨॥**

೧೨ ಮಲವನ್ನು ವಿಸರ್ಜಿಸಿ, ಎದ್ದು, ತಾನು ವಿಸರ್ಜಿಸಿದ ಮಲವನ್ನು ತಿರುಗಿ ನೋಡಬಾರದು. ನೀರನ್ನು ಬೇರೆಡೆಗೆ ತಂದು ಆ ನೀರಿನಿಂದ ಹೊರಭಾಗದಲ್ಲಿ ಶುಚಿಯನ್ನು ಮಾಡಿಕೊಳ್ಳಬೇಕು. ಜಲಾಶಯದ ನೀರಿನಲ್ಲೇ ಮಾಡಬಾರದು. ಹೊರಭಾಗದಲ್ಲಿ ಶುಚಿಯನ್ನು ಮಾಡಿಕೊಳ್ಳಬೇಕು.

**ಅಥವಾ ದೇವಪಿತ್ರೃರ್ಷಿತೀರ್ಥಾವತರಣಂ ವಿನಾ ।**
**ಸಪ್ತ ವಾ ಪಂಚ ವಾ ತಿಸ್ರೋ ಗುದಂ ಸಂಶೋಧಯೇನ್ಮೃದಾ ॥೧೩॥**

೧೩ ಅಥವಾ ದೇವತೀರ್ಥ, ಋಷಿತೀರ್ಥ, ಈ ಪ್ರದೇಶಗಳನ್ನು ಬಿಟ್ಟು ಏಳು ಸಾರಿ ಅಥವಾ ಐದು ಸಾರಿ ಮಲ ವಿಸರ್ಜನಾ ಭಾಗವನ್ನು ಮಣ್ಣು ಮತ್ತು ನೀರಿನಿಂದ ಶುಚಿಗೊಳಿಸಬೇಕು.

**ಲಿಂಗೇ ಕರ್ಕೋಟಮಾತ್ರಂ ತು ಗುದೇ ಪ್ರಸೃತಿರಿಷ್ಯತೇ ।**
**ಶತ ಉತ್ಥಾಯ ಪದ್ಧಸ್ತಶೌಚಂ ಗಂಡೂಷಮಷ್ಟಕಂ ॥೧೪॥**

೧೪ ಲಿಂಗವನ್ನು ಎಂಟು ಬಾರಿ, ಗುದ ಪ್ರದೇಶವನ್ನು ಹತ್ತು ಸಾರಿ ಮಾಡಿ ನಂತರ ಎದ್ದು, ಹಸ್ತ, ಪಾದಗಳನ್ನು ತೊಳೆದು ಎಂಟು ಸಾರಿ ಬಾಯಿ ಮುಕ್ಕಳಿಸಬೇಕು.

**ಯೇನ ಕೇನ ಚ ಪತ್ರೇಣ ಕಾಷ್ಠೇನ ಚ ಜಲಾದ್ಬಹಿಃ ।**
**ಕಾರ್ಯಂ ಸಂತ್ಯಜ್ಯ ತರ್ಜನೀಂ ದಂತಧಾವನಮೀರಿತಂ ॥೧೫॥**

೧೫ ನಂತರ ನೀರಿನ ಹೊರಭಾಗದಲ್ಲಿ ಯಾವುದಾದರೂ ಎಲೆ ಅಥವಾ ಕಡ್ಡಿಯಿಂದ ಹಲ್ಲನ್ನು ಉಜ್ಜಬೇಕು. ತರ್ಜನೀ ಎಂದರೆ ತೋರು ಬೆರಳಿನಿಂದ ಹಲ್ಲುಗಳನ್ನು ಉಜ್ಜಬಾರದು.

**ಜಲದೇವಾನ್ನಮಸ್ಕೃತ್ಯ ಮಂತ್ರೇಣ ಸ್ನಾನಮಾಚರೇತ್ ।**
**ಅಶಕ್ತಃ ಕಂಠದಘ್ನಂ ವಾ ಕಟದಘ್ನಮಥಾಪಿ ವಾ ॥೧೬॥**

೧೬ ನಂತರ ಜಲದೇವತೆಗಳನ್ನು ನಮಸ್ಕರಿಸಿ ಮಂತ್ರಪೂರ್ವಕ ಸ್ನಾನ ಮಾಡಬೇಕು. ಶಕ್ತಿ ಇಲ್ಲದವನು ಕತ್ತು ಮುಳುಗುವಷ್ಟಾಗಲೀ ಅಥವಾ ಸೊಂಟದವರೆವಿಗಾಗಲೀ ಸ್ನಾನ ಮಾಡಬೇಕು. (ಶಕ್ತನು ದೇಹಪೂರ್ತಿ ಸ್ನಾನ ಮಾಡಿ ಶುಚಿ ಹೊಂದಬೇಕು.)

**ಆಜಾನುಜಲಮಾಸಿಚ್ಯ ಮಂತ್ರಸ್ನಾನಂ ಸಮಾಚರೇತ್ ।**
**ದೇವಾದೀ‌ನ್ ತರ್ಪಯೇದ್ವಿದ್ವಾಂಸ್ತತ್ರ ತೀರ್ಥಜಲೇನ ಚ ॥೧೭॥**

೧೭ ಇದಕ್ಕೂ ಶಕ್ತಿ ಇಲ್ಲದವನು ಮೊಳಕಾಲಿನವರೆವಿಗೆ ಶುದ್ಧಿಮಾಡಿಕೊಂಡು, ಮಂತ್ರ ಸ್ನಾನವನ್ನು ಮಾಡಬೇಕು. ನಂತರ ತೀರ್ಥಜಲದಿಂದ ದೇವ, ಋಷಿ, ಪಿತೃ ತರ್ಪಣವನ್ನು ಮಾಡಬೇಕು.

**ವಿ.ವಿ. :- ಮಂತ್ರ ಸ್ನಾನ ಎಂದರೆ**
**'ಸದ್ಯೋಜಾತಾದಿಭಿರ್ಮಂತ್ರೈರಂಭೋಭಿರಭಿಷೇಚನಂ ।**
**ಸಿದ್ಧಾಂತಸಾರದಲ್ಲಿ ಮಂತ್ರಸ್ನಾನಂ ಭವೇದೇವಂ ವಾರುಣಾಗ್ನೇಯಯೋರಪಿ ॥**

ಎಂದರೆ ಸದ್ಯೋಜಾತಾದಿ ಐದು ಮಂತ್ರಗಳಿಂದ ದೇವಹಕ್ಕೆ ಪ್ರೋಕ್ಷಣೆ ಮಾಡುವಿಕೆಯು ಮಂತ್ರ ಸ್ನಾನವೆನಿಸಿಕೊಳ್ಳುತ್ತದೆ. ಬೇರಡೆಯಲ್ಲಿ ಆಪೋಹಿಷ್ಠಾದಿ ಮಂತ್ರಗಳಾದ ಪ್ರೋಕ್ಷಣೆ, ಯೋಗಯಾಜ್ಞವಲ್ಕ್ಯದಲ್ಲಿ, ಶನ್ನಃ, ಆಪಃ, ದ್ರುಪದಾ, ಆಪೋ ಹಷ್ಠಾ, ಅಘಮರ್ಷಣಾ, ಈ ಐದು ಮಂತ್ರಗಳಿಂದ ಪ್ರೋಕ್ಷಣೆ ಹೀಗೆ ಅನೇಕ ಪ್ರಕಾರವಾಗಿ

ಮಂತ್ರ ಸ್ನಾನವು ಹೇಳಲ್ಪಟ್ಟಿರುವುದರಿಂದ ಯಾವುದಾದರೊಂದು ಕ್ರಮವನ್ನು ಅನುಸರಿಸಬಹುದು.

ಸ್ನಾನ ವಿಚಾರದಲ್ಲಿ, ನದಿ, ಕೊಳ, ಕೆರೆ, ಇತ್ಯಾದಿಗಳಲ್ಲಿ ಸ್ನಾನ ಮಾಡುವಾಗ, ಸಂಕಲ್ಪ, ಸೂಕ್ತಪಠನ (ಅಘರ್ಮರ್ಣಸುಕ್ತ) ಮಾರ್ಜನ, ದೇವತಾತರ್ಪಣ, ಸ್ನಾನ ಎಂದು ಐದು ಅಂಗಗಳನ್ನು ಅನುಸರಿಸಬೇಕೆಂದು ಚಂದ್ರಜ್ಞಾನಾಗಮದಲ್ಲಿ ಹೇಳಿದ್ದಾರೆ. ದೇವತಾತರ್ಪಣ ಎಂಬಲ್ಲಿ ಮೊದಲಿಗೆ ಆ ತೀರ್ಥದ ಅಧಿ ದೈವ, ಕ್ಷೇತ್ರದ ಅಧಿತೈವಗಳನ್ನು ಪ್ರಾರ್ಥನಾದಿಗಳನ್ನು ಮಾಡಿ ತೃಪ್ತಿಪಡಿಸಬೇಕು. 'ಅತಿಕ್ರೂರ' ಇತ್ಯಾದಿ ಶ್ಲೋಕಗಳಿಂದ ಭೈರವಾನುಜ್ಞೆ ಮುಂತಾದುವನ್ನು ಮಾಡಿ ನಂತರ ಹೀಗೆ ಹೇಳಿದ ಐದು ಸ್ನಾನಾಂಗಗಳನ್ನು ಅನುಸರಿಸಿ ಸ್ನಾನ ಮಾಡಬೇಕು. ಉದಾ:- ಅನುಜ್ಞಾಂ ದೀಯತಾಂ ಮಹ್ಯಂ ಸ್ನಾನಾರ್ಥಂ ಪರಮೇಶ್ವರ, ಇತ್ಯಾದಿ.

(ಸ್ನಾನಾನಂತರ ವಿಚಾರದಲ್ಲಿ ಹೆಚ್ಚಿನ ವಿವರಣೆ ಬೇಕಾದರೆ ನೀಡಬಹುದಾಗಿದೆ)

**ಧೌತವಸ್ತ್ರಂ ಸಮಾದಾಯ ಪಂಚಕಚ್ಛೇನ ಧಾರಯೇತ್ ।**
**ಉತ್ತರೀಯಂ ಚ ಕಿಂಚೈವ ಧಾರ್ಯಂ ಸರ್ವೇಷು ಕರ್ಮಸು ॥೧೮॥**

೧೮ ನಂತರ ಒಗೆದು ಮಡಿಯಾಗಿರುವ ಬಟ್ಟೆಯನ್ನು ತೆಗೆದುಕೊಂಡು ಪಂಚಕಚ್ಛೆಯಿಂದ ಧರಿಸಬೇಕು. ಉತ್ತರೀಯವನ್ನು ಅಂದರೆ ಹೊದೆಯುವ ವಸ್ತ್ರಗಳನ್ನೂ ಸಹ ಎಲ್ಲಾ ಕರ್ಮಗಳಲ್ಲಿಯೂ ಧರಿಸಬೇಕು.

**ನದ್ಯಾದಿತೀರ್ಥಸ್ನಾನೇ ತು ಸ್ನಾನವಸ್ತ್ರಂ ನ ಶೋಧಯೇತ್ ।**
**ವಾಪೀಕೂಪಗೃಹಾದೌ ತು ಸ್ನಾನದೂರ್ಧ್ವಂ ನಯೇದ್ಬುಧಃ ॥೧೯॥**

೧೯ ನದಿ ಮೊದಲಾದ ತೀರ್ಥಗಳಲ್ಲಿ ಸ್ನಾನ ಮಾಡುವಾಗ ಸ್ನಾನ ಮಾಡಿದ ಬಟ್ಟೆಯನ್ನು ತೊಳೆಯಬಾರದು. ದೊಡ್ಡ ಭಾವಿ, ಭಾವಿಗಳಲ್ಲಿ ಅಥವಾ ಮನೆಗೆ ಹೋದಮೇಲೆ ಸ್ನಾನದ ಬಟ್ಟೆಯನ್ನು ತೆಗೆದುಕೊಂಡು ಹೋಗಿ ತೊಳೆಯಬೇಕು.

**ಶಿಲಾದಾವಾರ್ದಿಕೇ ವಾಪಿ ಜಲೇ ವಾಪಿ ಸ್ಥಲೇಽಪಿ ವಾ ।**
**ಶಂಶೋಧ್ಯ ಪೀಡಯೇದ್ವಸ್ತ್ರಂ ಪಿತೃಣಾಂ ತೃಪ್ತಯೇ ದ್ವಿಜಾಃ ॥೨೦॥**

೨೦ ನದಿಯ ತೀರ ಅಥವಾ ಇತರ ಸ್ಥಳಗಳಲ್ಲಿ ಕಲ್ಲು ಅಥವಾ ಮರದ ಮೇಲೆ

ಬಟ್ಟೆಯನ್ನು ಒಗೆದು ಮಡಿ ಮಾಡಬೇಕು. ನಂತರ ಹೀಗೆ ಒಗೆದ ಬಟ್ಟೆಯನ್ನು ಹಿಂಡಬೇಕು. ಹೀಗೆ ಮಾಡುವುದರಿಂದ ಪಿತೃಗಳು ತೃಪ್ತರಾಗುವರು.

**ಜಾಬಾಲಕೋಕ್ತಮಂತ್ರೇಣ ಭಸ್ಮನಾ ಚ ತ್ರಿಪುಂಡ್ರಕಂ ।**
**ಅನ್ಯಥಾ ಚೇಜ್ಜಲೇ ಪಾತಸ್ತತೋ ನರಕಮೃಚ್ಛತೆ ॥೨೧॥**

೨೧ ಜಾಬಾಲೋಪನಿಷತ್ತಿನಲ್ಲಿ ಹೇಳಿರುವ ಮಂತ್ರದಿಂದ ಭಸ್ಮವನ್ನು ಮೂರು ಪಟ್ಟೆಯಾಗಿ ಹಣೆಯಲ್ಲಿ ಹಚ್ಚಬೇಕು. ಇದಕ್ಕೆ ವಿಪರೀತವಾಗಿ ಆಚರಿಸಿದರೆ ಜಲದಲ್ಲಿ ಮರಣವೂ ಮುಂದೆ ನರಕವೂ ಉಂಟಾಗುವುವು.

**ಆಪೋಹಿಷ್ಠೇತಿ ಶಿರಸಿ ಪ್ರೋಕ್ಷಯೇತ್ಪಾಪಶಾಂತಯೇ ।**
**ಯಸ್ಯೇತಿ ಮಂತ್ರಂ ಪಾದೇ ತು ಸಂಧಿಪ್ರೋಕ್ಷಣಮುಚ್ಯತೇ ॥೨೨॥**

೨೨ ತದನಂತರ 'ಆಪೋಹಿಷ್ಠಾ' ಎಂಬ ಮಂತ್ರದಿಂದ ತಲೆಗೆ ಪಾಪಶಾಂತವಾಗಲು ಪ್ರೋಕ್ಷಿಸಿಕೊಳ್ಳಬೇಕು. 'ಯಸ್ಯಕ್ಷಯಾಯ'ಎಂಬ ಮಂತ್ರದಿಂದ ಕಾಲದಲ್ಲಿ ಅದರ ಸಂಧಿಗಳಲ್ಲಿ ಪ್ರೋಕ್ಷಿಸಿಕೊಳ್ಳಬೇಕು.

**ಪಾದೇ ಮೂರ್ಧ್ನಿ ಹೃದಿ ಚೈವ ಮೂರ್ಧ್ನಿ ಹೃತ್ಪಾದ ಏವ ಚ ।**
**ಹೃಅತ್ಪಾದಮೂರ್ಧ್ನಿ ಸಂಪ್ರೋಕ್ಷ್ಯ ಮಂತ್ರಸ್ನಾನಂ ವಿದುರ್ಬುಧಾಃ ॥೨೩॥**

೨೩ ಕಾಲು, ತಲೆ, ಹೃದಯ, ಪುನಃ ತಲೆ ಹೃದಯ, ಪಾದ ಮತ್ತು ಹೃದಯ, ತಲೆಗಳಿಗೆ ಪ್ರೋಕ್ಷಣೆ ಮಾಡಿಕೊಳ್ಳುವುದನ್ನು ಮಂತ್ರಸ್ನಾನ ಎನ್ನುವರು.

**ಈಷತ್ಸ್ಪರ್ಶೇ ಚ ದೌಃಸ್ವಾಸ್ಥ್ಯೇ ರಾಜರಾಷ್ಟ್ರಭಯೇಽಪಿ ಚ ।**
**ಅಗತ್ಯಾ ಗತಿಕಾಲೇ ಚ ಮಂತ್ರಸ್ನಾನಂ ಸಮಾಚರೇತ್ ॥೨೪॥**

೨೪ ಸಾಮಾನ್ಯವಾದ ಅಶುಚಿಗಾಗಿ ನೀರನ್ನು ಸ್ಪರ್ಶಮಾಡಬೇಕಾದರೆ, ದೇಹದ ಅನಾರೋಗ್ಯವಿದ್ದಾಗ, ರಾಜನ ಭಯ, ರಾಷ್ಟ್ರದಲ್ಲಿ ಇನ್ನಾವುದಾದರೂ ಭಯ ಉಂಟಾದಾಗ, ಜರೂರಾಗಿ ಬಂದ ಪ್ರಯಾಣ, ಇಂತಹ ಸಂದರ್ಭಗಳಲ್ಲಿ ಕಾಲಾವಕಾಶವಿಲ್ಲದಿರುವಾಗ ಮಂತ್ರ ಸ್ನಾನವನ್ನು ಮಾಡಬಹುದು.

ಪ್ರಾತಃಸೂರ್ಯಾನುವಾಕೇನ ಸಾಯುಮಗ್ನ್ಯನುವಾಕತಃ ।
ಆಪಃ ಪೀತ್ವಾ ತಥಾ ಮಧ್ಯೇ ಪುನಃ ಪ್ರೋಕ್ಷಣಮಾಚರೇತ್ ।।೨೫।।

೨೫ ಪ್ರಾತಃಕಾಲದಲ್ಲಿ ಸೂರ್ಯಾನು ವಾಕದಿಂದ 'ಸೂರ್ಯಶ್ಚಮಾಮನ್ಯುಶ್ಚ' ಎಂಬ ಮಂತ್ರದಿಂದ ಸಾಯಂಕಾಲದಲ್ಲಿ 'ಅಗ್ನಿಶ್ಚಮಾಮನ್ಯುಶ್ಚ' ಎಂಬ ಅಗ್ನ್ಯನುವಾಕದಿಂದ ನೀರನ್ನು ಅಭಿಮಂತ್ರಿಸಿ ಕುಡಿದು ಪುನಃ ಪ್ರೋಕ್ಷಣೆಯನ್ನು ಮಾಡಿಕೊಳ್ಳಬೇಕು.

ಗಾಯತ್ರ್ಯಾ ಜಪಮಂತ್ರಾಂತೇ ತ್ರಿರೂರ್ಧ್ವಂ ಪ್ರಾಗ್ವಿನಿಕ್ಷಿಪೇತ್ ।
ಮಂತ್ರೇಣ ಸಹ ಚೈಕಂ ವೈ ಮಧ್ಯೇಽರ್ಘ್ಯಂ ತು ರವೇರ್ದ್ವಿಜಾಃ ।।೨೬।।

೨೬ ಗಾಯತ್ರೀ ಜಪಮಂತ್ರದ ಕೊನೆಯಲ್ಲಿ ಪೂರ್ವಕ್ಕೆ ಮೂರು ಸಾರಿ ನೀರನ್ನು ಬಿಡಬೇಕು. ಮಧ್ಯೆದಲ್ಲಿ ಗಾಯತ್ರೀ ಮಂತ್ರದಿಂದಲೇ ಸೂರ್ಯನಿಗೆ ಒಂದು ಅರ್ಘ್ಯವನ್ನು ಕೊಡಬೇಕು.

ಅಥ ಜಾತೇ ಚ ಸಾಯಾಹ್ನೇ ಭುವಿ ಪಶ್ಚಿಮದಿಙ್ಮುಖಃ ।
ಉದ್ಧೃತ್ಯ ದದ್ಯಾತ್ಪ್ರಾತಸ್ತು ಮಧ್ಯಾಹ್ನೇಽಂಗುಲಿಭಿಸ್ತಥಾ ।।೨೭।।

೨೭ ಬಳಿಕ ಸಾಯಂಕಾಲದಲ್ಲಿ ಪಶ್ಚಿಮಾಭಿಮುಖವಾಗಿ ಭೂಮಿಯಲ್ಲಿ ಕೆಳಮುಖವಾಗಿ ಅರ್ಘ್ಯವನ್ನು ಕೊಡಬೇಕು. ಪ್ರಾತಃಕಾಲದಲ್ಲಿ ಮೇಲ್ಮುಖವಾಗಿಯೂ ಮಧ್ಯಾಹ್ನದಲ್ಲಿ ಬೆರಳುಗಳಿಂದಲೂ ಅರ್ಘ್ಯವನ್ನು ನೀಡಬೇಕು.

ವಿ.ವಿ.:- ಅರ್ಘ್ಯಪ್ರದಾನ:- ಎಂದರೆ ಗಾಯತ್ರೀ ಮಂತ್ರದಿಂದ ಅಭಿಮಂತ್ರಿಸಿದ ನೀರನ್ನು ಸೂರ್ಯನಿಗೆ ನೀಡುವುದು. ಕಾರಣವೇನೆಂದರೆ ಯೋಗಯಜ್ಞವಲ್ಕ್ಯದಲ್ಲಿ ಹೀಗೆ ಹೇಳಿದ್ದಾರೆ, ಮೂವತ್ತು ಕೋಟಿ ಮಂದೇಹರೆಂಬ ರಾಕ್ಷಸರು ನಿತ್ಯವೂ ಉದಯನಾಗುವ ಸೂರ್ಯನನ್ನು ಹಿಂಸಿಸುತ್ತಾರೆ. ಅದರಿಂದ ಸೂರ್ಯನಿಗೂ ಈ ರಾಕ್ಷಸರಿಗೂ ಭಯಂಕರ ಯುದ್ಧವಾಗುತ್ತದೆ. ಆದ್ದರಿಂದ ದೇವಗಣಗಳೆಲ್ಲವೂ, ತಪಸ್ವಿಗಳಾದ ಋಷಿಗಳೂ ಸಂಧ್ಯಾಕಾಲದಲ್ಲಿ ದೇವತೆಯನ್ನು ಉಪಾಸನೆ ಮಾಡುವವರಾಗಿ ಪ್ರತಿದಿನದಲ್ಲೂ ಓಂಕಾರ, ವ್ಯಾಹೃತಿಯಿಂದ ಕೂಡಿದ ಗಾಯತ್ರೀ ಮಂತ್ರದಿಂದ ಅಭಿಮಂತ್ರಿಸಿದ ನೀರನ್ನು ಅರ್ಘ್ಯರೂಪವಾಗಿ ಬಿಡುತ್ತಾರೆ. ಹಾಗೇ ಅವರುಗಳು ಬಿಟ್ಟ ಅರ್ಘ್ಯದ ನೀರು ವಜ್ರಾಯುದಕ್ಕೆ ಸಮಾನವಾಗಿ ಆ ದೈತ್ಯರು ಸುಡಲ್ಪಡುತ್ತಾರೆ. ಇದನ್ನು ತಿಳಿದು ವ್ರತವನ್ನಾಗಿ ಉಳ್ಳವರು. ಸಂಧ್ಯಾಕಾಲದಲ್ಲಿ ಉಪಾಸನೆ ಮಾಡುತ್ತಾರೆ. ಇದರಿಂದಾಗಿ ಈ ರೀತಿ ವ್ರತ ಉಳ್ಳವರು ಎಲ್ಲಾ ಪಾಪಗಳಿಂದ ಬಿಡಲ್ಪಟ್ಟವರಾಗಿ ದೀರ್ಘಾಯಸ್ಸನ್ನು ಪಡೆಯುತ್ತಾರೆ.

ಆದ್ದರಿಂದ ಈ ರೀತಿಯಾದ ಶ್ರೇಷ್ಠವಾದ ಅರ್ಘ್ಯಪ್ರದಾನವನ್ನು ಯ
ಮಾಡುವುದಿಲ್ಲವೋ ಅವರು ಸೂರ್ಯನನ್ನು ಹಿಂಸಿಸಿದಂತಾಗುತ್ತದೆ. ಅಂತಹ
ಮೋಕ್ಷದ್ವಾರವು ಹೇಗೆ ತಾನೇ ತೆರೆಯಲ್ಪಡುತ್ತದೆ. ? ಆದ್ದರಿಂದ ಬ್ರಾಹ್ಮಣನಾದ
ಮೂರು ಸಂಧ್ಯಾಕಾಲವೂ ಉಪಾಸನೆಗೆ ಯೋಗ್ಯವಾದದ್ದಾಗಿರುತ್ತದೆ. ಆದ್ದ
ಪ್ರತಿಯೊಬ್ಬ ಬ್ರಾಹ್ಮಣನೂ ಸಂಧ್ಯೆಯನ್ನು ಉಪಾಸಿಸಬೇಕು. ಈ ರೀತಿ ಸಂಧ್ಯೋ
ಮಾಡದೆ ಇದನ್ನು ಮೀರುವವನು ಹೇಗೆ ತಾನೇ ಬ್ರಾಹ್ಮಣನಾಗುತ್ತಾನೆ.?

**ಅಂಗುಲೀನಾಂ ಚ ರಂಧ್ರೇಣ ಲಂಬಂ ಪಶ್ಯೇದ್ದಿವಾಕರಂ ।**
**ಆತ್ಮಪ್ರದಕ್ಷಿಣಂ ಕೃತ್ವಾ ಶುದ್ಧಾಚಮನಮಾಚರೇತ್ ॥೨೮॥**

೨೮ ಬೆರಳುಗಳ ರಂಧ್ರಗಳಿಂದ ನೇರವಾಗಿ ಸೂರ್ಯನನ್ನು ನೋಡಬೇಕು.
ತನ್ನ ಪ್ರದಕ್ಷಿಣೆಯನ್ನು ಮಾಡಿ ನಂತರ ಶುದ್ಧಾಚಮನವನ್ನು ಮಾಡಬೇಕು.

**ಸಾಯಂ ಮುಹೂರ್ತಾದರ್ವಾಕ್ತು ಕೃತಾ ಸಂಧ್ಯಾ ವೃಥಾ ಭವೇತ್ ।**
**ಅಕಾಲಾತ್ಕಾಲ ಇತ್ಯುಕ್ತೋ ದಿನೇಽತೀತೇ ಯಥಾಕ್ರಮಂ ॥೨೯॥**

೨೯ ಸಾಯಂಸಂಧ್ಯಾಕಾಲದಲ್ಲಿ ಮುಹೂರ್ತಕ್ಕೆ ಮುಂಚೆ ಮಾಡಿದ ಸಂ
(ಸಂಧ್ಯಾವಂದನೆಗೆ) ಫಲವಿಲ್ಲ. ಹಗಲು ಸಂಧ್ಯೆಗೆ ಕಾಲವಲ್ಲ. ಹಗಲು ಕಳೆದ ಾ
ಕ್ರಮವಾಗಿ ಸಂಧ್ಯಾಕಾಲವು ಬರುವುದು.

**ದಿವಾತೀತೇ ಚ ಗಾಯತ್ರೀಂ ಶತಂ ನಿತ್ಯಂ ಸಮಾಚರೇತ್ ।**
**ಆದಶಾಹಾತ್ಪರಾತೀತಂ ಗಾಯತ್ರೀಂ ಲಕ್ಷಮಭ್ಯಸೇತ್ ।೩೦॥**

೩೦ ಹಗಲು ಕಳೆಯಲು ಸಂಧ್ಯಾಕಾಲದಲ್ಲಿ ಪ್ರತಿನಿತ್ಯವೂ ನೂರು ಗಾಯ
ಜಪವನ್ನು ಮಾಡಬೇಕು. ಹತ್ತು ದಿನಗಳವರೆವಿಗೆ ಸಂಧ್ಯಾವಂದನೆಯನ್ನು ಮಾಡದಿ
ಅದಕ್ಕೆ ಪ್ರಾಯಶ್ಚಿತ್ತವಾಗಿ ಗಾಯತ್ರೀ ಮಂತ್ರವನ್ನು ಒಂದು ಲಕ್ಷ ಸಾರಿ ಜಪಿಸಬೇ

**ಮಾಸಾತೀತೇ ತು ನಿತ್ಯೇ ಹಿ ಪುನಶ್ಚೋಪನಯಂ ಚರೇತ್ ।**
**ಈಶೋ ಗೌರೀ ಗುಹೋ ವಿಷ್ಣುರ್ಬ್ರಹ್ಮಾ ಚಂದ್ರಶ್ಚ ವೈ ಯಮಃ ॥೩೧॥**

೩೧ ಒಂದು ತಿಂಗಳು ಸಂಧ್ಯಾವಂದನೆ ಮಾಡದಿದ್ದರೆ ಪುನಃ ಉಪನಯನ

ಮಾಡಬೇಕು. ಈಶ್ವರ, ಪಾರ್ವತಿ, ಸುಬ್ರಹ್ಮಣ್ಯ, ವಿಷ್ಣು, ಬ್ರಹ್ಮ, ಚಂದ್ರ ಹಾಗೇ, ಯಮ,

ಏವಂ ರೂಪಾಂಶ್ಚ ವೈ ದೇವಾಸ್ತರ್ಪಯೇದರ್ಥಸಿದ್ಧಯೇ।
ಬ್ರಹ್ಮಾರ್ಪಣಂ ತತಃ ಕೃತ್ವಾ ಶುದ್ಧಾಚಮನಮಾಚರೇತ್ ॥೩೨॥

೩೨ ರೂಪರಾದ ದೇವತೆಗಳನ್ನು ಇಷ್ಟಾರ್ಥಸಿದ್ಧಿಗಾಗಿ ತರ್ಪಣದಿಂದ ತೃಪ್ತಿಪಡಿಸಬೇಕು. ಅನಂತರ ಬ್ರಹ್ಮಾರ್ಪಣಮಾಡಿ ಶುದ್ಧಾಚಮನವನ್ನು ಮಾಡಬೇಕು.

ತೀರ್ಥದಕ್ಷಿಣತಃ ಶಸ್ತೇ ಮಠೇ ಮಂತ್ರಾಲಯೇ ಬುಧಃ।
ತತ್ರ ದೇವಾಲಯೇ ವಾಪಿ ಗೃಹೇ ವಾ ನಿಯತಸ್ಥಲೇ ॥೩೩॥

೩೩ ತೀರ್ಥಗಳ ಬಲ (ದಕ್ಷಿಣ ಭಾಗ) ಭಾಗಗಳಲ್ಲಿರುವ ಪ್ರಶಸ್ತವಾದ ವಿಧ್ಯಾಭ್ಯಾಸ ಮಾಡುವ ಜಾಗ, ಮಂತ್ರಪುರಶ್ಚರಣಾಪ್ರದೇಶ, ಅಥವಾ ದೇವಾಲಯದಲ್ಲಿ, ಮನೆಯಲ್ಲಿ ಅಥವಾ ನಿಯತವಾದ ಪ್ರದೇಶದಲ್ಲಿ,

ದೇವಾನ್ ಸರ್ವಾನ್ನಮಸ್ಕೃತ್ಯ ಸ್ಥಿರಬುದ್ಧಿಃ ಸ್ಥಿರಾಸನಃ।
ಪ್ರಣವಂ ಪೂರ್ವಮಭ್ಯಸ್ಯ ಗಾಯತ್ರೀಮಭ್ಯಸೇತ್ತತಃ॥೩೪॥

೩೪ ದೇವತೆಗಳನ್ನು ನಮಸ್ಕರಿಸಿ, ಸ್ಥಿರವಾದ ಆಸನದಲ್ಲಿ ಸ್ಥಿರವಾದ ಮನಸ್ಸಿನಿಂದ ಓಂಕಾರ ಪೂರ್ವಕವಾಗಿ ಗಾಯತ್ರೀ ಮಂತ್ರವನ್ನು ಜಪಿಸಬೇಕು.

ವಿ.ವಿ.:- ಸ್ಥಿರವಾದ ಮನಸ್ಸೆಂದರೆ ಚಂಚಲವಲ್ಲದ, ತ್ರಿಕರಣಗಳೂ ಜಪಿಸುವ ದೇವತೆಯಲ್ಲೇ ಲೀನವಾಗಿ ಒಂದೇ ಮನಸ್ಸಿನಿಂದ ಅಂದರೆ ದೇಹವು ಸರಿಯಾದ ರೀತಿ ಎಂದರೆ ಪದ್ಮಾಸನದಲ್ಲಿ ನೆಟ್ಟಗೆ ಕುಳಿತುಕೊಂಡು ನಾಸಾಗ್ರದೃಷ್ಟಿಯುಳ್ಳವರಾಗಿ, ಮನಸ್ಸಿನಿಂದಲೇ ಮಂತ್ರ ಉಚ್ಚರಿಸುತ್ತಾ ಅದರ ಪರಮಾರ್ಥವನ್ನು ಚಿಂತಿಸುತ್ತ ಜಪಿಸುವುದು ಶ್ರೇಷ್ಠವು.

ಜೀವಬ್ರಹ್ಮೈಕ್ಯವಿಷಯಂ ಬುದ್ಧ್ವಾ ಪ್ರಣವಮಭ್ಯಸೇತ್।
ತ್ರೈಲೋಕ್ಯಸೃಷ್ಟಿಕರ್ತಾರಂ ಸ್ಥಿತಿಕರ್ತಾರಮಚ್ಯುತಂ ॥೩೫॥

೩೫ ಜೀವನೂ, ಬ್ರಹ್ಮನೂ ಒಂದೇ ಬೇರೆಯಲ್ಲ ಎಂದು ತಿಳಿದು ಓಂಕಾರವನ್ನು ಈ ಅರ್ಥದಿಂದ ಅನುಸಂಧಾನ ಮಾಡುತ್ತಾ ಮೂರು ಲೋಕಗಳನ್ನು ಸೃಷ್ಟಿಸುವ ಬ್ರಹ್ಮ,

ಅದನ್ನು ಪರಿಪಾಲಿಸುವವನಾದ ವಿಷ್ಣು ಮತ್ತು ಪ್ರಳಯ ಕಾಲದಲ್ಲಿ ಆ ಲೋಕ
ಸಂಹರಿಸುವವನೂ,

ಸಂಹರ್ತಾರಂ ತಥಾ ರುದ್ರಂ ಸ್ವಪ್ರಕಾಶಮುಪಾಸ್ಮಹೇ ।
ಜ್ಞಾನಕರ್ಮೇಂದ್ರಿಯಾಣಾಂ ಚ ಮನೋವೃತ್ತೀರ್ಧಿಯಸ್ತಥಾ ॥೩೬॥

೩೬ ಆದ, ಸ್ವಪ್ರಕಾಶ ಉಳ್ಳಂತಹ ರುದ್ರನನ್ನೂ ಉಪಾಸಿಸುತ್ತೇನೆ. ಜ್ಞಾನೇಂದ್ರಿಯ, ಕರ್ಮೇಂದ್ರಿಯಗಳನ್ನೂ, ಮನಸ್ಸು,ಅದರ ವೃತ್ತಿ, ಬುದ್ಧಿಗಳ ಹಾಗೆಯೇ,

ಭೋಗಮೋಕ್ಷಪ್ರದೇ ಧರ್ಮಜ್ಞಾನೇ ಚ ಪ್ರೇರಯೇತ್ಸದಾ ।
ಇತ್ಥಮರ್ಥಂ ಧಿಯಾ ಧ್ಯಾಯನ್ ಬ್ರಹ್ಮ ಪ್ರಾಪ್ನೋತಿ ನಿಶ್ಚಯಂ ॥೩೭॥

೩೭ ಭೋಗ-ಮೋಕ್ಷಗಳನ್ನು ಕೊಡುವಂತಹ, ಧರ್ಮ ಮತ್ತು ಇದರ ಸಂಬಂಧಿ ಜ್ಞಾನಗಳನ್ನು ಇವುಗಳನ್ನು ಪ್ರೇರೇರಿಸುಂತಹ ಬ್ರಹ್ಮವಸ್ತುವನ್ನು ಉಪಾಸಿಸುವೆವು ಈ ಅರ್ಥಗಳನ್ನು ಮನಸ್ಸಿನಲ್ಲಿ ಚಿಂತಿಸುತ್ತಾ ಜಪಿಸುವಂತಹವನು ಖಂಡಿತವಾಗಿ ಬ್ರಹ್ಮವಸ್ತುವನ್ನು ಪಡೆಯುವನು.

ಕೇವಲಂ ವಾ ಜಪೇನ್ನಿತ್ಯಂ ಬ್ರಾಹ್ಮಣ್ಯಸ್ಯ ಚ ಪೂರ್ತಯೇ ।
ಸಹಸ್ರಮಭ್ಯಸೇನ್ನಿತ್ಯಂ ಪ್ರಾತರ್ಬ್ರಾಹ್ಮಣಪುಂಗವಃ ॥೩೮॥

೩೮ ಈ ಮೇಲೆ ಹೇಳಿದ ಉತ್ಕೃಷ್ಟವಾದ ಅರ್ಥವನ್ನು ಮನಸ್ಸಿನಲ್ಲಿ ಚಿಂತಿಸ ಜಪಿಸಲ್ಲು ಅಶಕ್ತನಾದವನು ಬ್ರಾಹ್ಮಣ್ಯದ ರಕ್ಷಣೆಗಾಗಿ ಅರ್ಥವನ್ನು ಸ್ಮರಿಸದೇ ಸುಮ ನಿತ್ಯದಲ್ಲಿಯೂ ಜಪಿಸಬೇಕು. ಬ್ರಾಹ್ಮಣ ಶ್ರೇಷ್ಠನು ಪ್ರಾತಃಕಾಲದಲ್ಲಿ ಸಾವಿರ ಮಾಡಬೇಕು.

ಅನ್ಯೇಷಾಂ ಚ
ಯಥಾಶಕ್ತಿ ಮಧ್ಯಾಹ್ನೇ ಚ ಶತಂ ಜಪೇತ್ ।
ಸಾಯಂ ದ್ವಿದಶಕಂ ಜ್ಞೇಯಂ ಶಿಖಾಷ್ಟಕಸಮನ್ವಿತಂ ॥೩೯॥

೩೯ ಉಳಿದವರು ಯಥಾಶಕ್ತಿ ಜಪಿಸಬೇಕು. ಮಧ್ಯಾಹ್ನದಲ್ಲಿ ನೂರು ಜಪಿಸಬೇಕು. ಸಾಯಂಕಾಲದಲ್ಲಿ ಇನ್ನೂರು ಬಾರಿ ಜಪಿಸಬೇಕು. ಗಾಯತ್ರೀ ಶಿರಸ್ಸ ಎಂಟು ಬಾರಿ ಜಪಿಸಬೇಕು.

**ಮೂಲಾಧಾರಂ ಸಮಾರಭ್ಯ ದ್ವಾದಶಾಂಶಸ್ಥಿತಾಂಸ್ತಥಾ ।**
**ವಿದ್ಯೇಶಬ್ರಹ್ಮವಿಷ್ಣ್ವೀಶಜೀವಾತ್ಮಪರಮೇಶ್ವರಾನ್ ॥೪೦॥**

೪೦ ಮೂಲಪ್ರಕೃತಿಯಿಂದ ಪ್ರಾರಂಭಿಸಿ ಹನ್ನೆರಡನೇ ಅಂಶದ ಮೇಲ್ಭಾಗದಲ್ಲಿರುವ ವಿದ್ಯೇಶ, ಬ್ರಹ್ಮ, ವಿಷ್ಣು, ಈಶ್ವರ, ಜೀವಾತ್ಮ ಪರಮೇಶ್ವರರನ್ನು,

**ಬ್ರಹ್ಮಬುದ್ಧ್ಯಾತದೈಕ್ಯಂ ಚ ಸೋಹಂಭಾವನಯಾ ಜಪೇತ್ ।**
**ತಾನೇವ ಬ್ರಹ್ಮರಂಧ್ರಾದೌ ಕಾಯಾದ್ಬಾಹ್ಯೇ ಚ ಭಾವಯೇತ್ ॥೪೧॥**

೪೧ ಬ್ರಹ್ಮ ಸ್ವರೂಪವೆಂದು ತಿಳಿದು ತಾನು ಸಹ ಬ್ರಹ್ಮ ಸ್ವರೂಪವೇ ಎಂದು ತಿಳಿದು ಅದರಲ್ಲೇ ಸೇರಿ ಜಪಿಸಬೇಕು. ಅದನ್ನೇ ಅಂದರೆ ಈ ಹಿಂದೆ ಹೇಳಿದ ವಿದ್ಯೇಶ್ವರರೇ ಮುಂತಾದವರನ್ನೇ ಬ್ರಹ್ಮರಂಧ್ರದಲ್ಲೂ ದೇಹದ ಹೊರಗಿನಲ್ಲೂ ಭಾವಿಸಬೇಕು.

**ಮಹತ್ತತ್ವಂ ಸಮಾರಭ್ಯ ಶರೀರಂ ತು ಸಹಸ್ರಕಂ ।**
**ಏಕೈಕಸ್ಮಾಜ್ಜಪಾದೇಕಮತಿಕ್ರಮ್ಯ ಶನೈಃ ಶನೈಃ ॥೪೨॥**

೪೨ ಮಹತ್ತತ್ವವನ್ನು ಪ್ರಾರಂಭಿಸಿ ಒಂದೊಂದು ಜಪದಿಂದ ಒಂದೊಂದು ಶರೀರವನ್ನು ಅತಿಕ್ರಮಿಸುತ್ತಾ ಪರಬ್ರಹ್ಮ ವಸ್ತುವಿನಲ್ಲಿ ಈ ಜೀವಾತ್ಮನನ್ನು ಸೇರಿಸಬೇಕು. ಅಂದರೆ ಅದರಲ್ಲೇ ಐಕ್ಯವನ್ನು ಹೊಂದಬೇಕು ಇದೇ ಜಪದ ತತ್ವವು.

**ಪರಸ್ಮಿನ್ಯೋಜಯೇಜ್ಜೀವಂ ಜಪತತ್ತ್ವಮುದಾಹೃತಂ ।**
**ಶತದ್ವಿದಶಕಂ ದೇಹಂ ಶಿಖಾಷ್ಟಕಸಮನ್ವಿತಂ ॥೪೩॥**

೪೩ ಪರತತ್ತ್ವದಲ್ಲಿ ಜೀವನನ್ನು ಸೇರಿಸಬೇಕು. ಇದನ್ನೇ ಜಪವೆಂದು ಹೇಳುವರು. ಗಾಯತ್ರಿ ಶಿರಸ್ಸಿನ ಜಪವನ್ನು ಎಂಟು ಸಾರಿ ಸೇರಿ ನೂರಿಪ್ಪತ್ತು ಸಾರಿ ದೇಹ ಶುದ್ಧಿಗಾಗಿ ಗಾಯತ್ರಿ ಜಪವನ್ನು ಮಾಡಬೇಕು.

**ಮಂತ್ರಾಣಾಂ ಜಪ ಏವಂ ಹಿ ಜಪಮಾದಿಕ್ರಮಾದ್ವಿದುಃ ।**
**ಸಹಸ್ರಂ ಬ್ರಾಹ್ಮದಂ ವಿದ್ಯಾಚ್ಛತಮೈಂದ್ರಂ ಪದಂ ವಿದುಃ ॥೪೪॥**

೪೪ ಮಂತ್ರಗಳ ಜಪಕ್ರಮವು ಹೀಗಿದೆ. ಈ ರೀತಿ ಹಿಂದಿನಿಂದಲೂ ಕ್ರಮವಾಗಿ ಬಂದಿದೆ ಎಂದು ತಿಳಿದವರು ಹೇಳುತ್ತಾರೆ. ಸಹಸ್ರ ಗಾಯತ್ರಿ ಮಂತ್ರವನ್ನು ನಿತ್ಯವೂ

ಜಪಿಸುವುದರಿಂದ ಬ್ರಹ್ಮಲೋಕಪ್ರಾಪ್ತಿಯಾಗುವುದು. ಪ್ರತಿ ದಿನದಲ್ಲೂ ನೂರು ಗಾ
ಮಂತ್ರಜಪದಿಂದ ಇಂದ್ರ ಪದವಿಯು ಲಭಿಸುವುದು.

ಇತರತ್ಸ್ವಾತ್ಮರಕ್ಷಾರ್ಥಂ ಬ್ರಹ್ಮಯೋನಿಷು ಜಾಯತೇ ।
ದಿವಾಕರಮುಪಸ್ಥಾಯ ನಿತ್ಯಮಿತ್ಥಂ ಸಮಾಚರೇತ್ ॥೪೫॥

೪೫ ಇದಕ್ಕಿಂತ ಕಡಿಮೆಯಾದ ಜಪವು ಕೇವಲ ಬ್ರಾಹ್ಮಣತ್ವ ರಕ್ಷಣೆಗಾಗಿ ಆಗುವ ಈ ರೀತಿ ಜಪಿಸುವವನು ಬ್ರಾಹ್ಮಣಯೋನಿಯಲ್ಲಿ ಜನಿಸುವನು. ಜಪಾನಂತರ ಸೂರ್ಯೋಪಸ್ಥಾನವನ್ನು ಮಾಡಬೇಕು. ನಿತ್ಯದಲ್ಲೂ ಈ ರೀತಿ ಆಚರಿಸಬೇಕು.

ಲಕ್ಷದ್ವಾದಶಯುಕ್ತಸ್ತು ಪೂರ್ಣಬ್ರಾಹ್ಮಣ ಈರಿತಃ ।
ಗಾಯತ್ರ್ಯಾ ಲಕ್ಷಹೀನಂ ತು ವೇದಕಾರ್ಯೇ ನ ಯೋಜಯೇತ್ ॥೪೬॥

೪೬ ಹನ್ನೆರಡು ಲಕ್ಷ ಗಾಯತ್ರಿ ಜಪ ಮಾಡಿದರೆ ಬ್ರಾಹ್ಮಣತ್ವ ಪೂರ್ತಿಯಾಗುವುದು. ಹನ್ನೆರಡು ಲಕ್ಷಕ್ಕಿಂತ ಕಡಿಮೆ ಗಾಯತ್ರಿ ಜಪ ಮಾಡದಿರುವವ ವೇದೋಕ್ತ ಕಾರ್ಯದಲ್ಲಿ ಯೋಜಿಸಬಾರದು.

ಆಸಪ್ತತೇಸ್ತು ನಿಯಮಂ ಪಶ್ಚಾತ್ಪ್ರವ್ರಾಜನಂ ಚರೇತ್ ।
ಪ್ರಾತರ್ದ್ವಾದಶಸಾಹಸ್ರಂ ಪ್ರವ್ರಾಜೀ ಪ್ರಣವಂ ಜಪೇತ್ ॥೪೭॥

೪೭ ನಂತರ ಎಪ್ಪತ್ತು ವರ್ಷಗಳವರೆವಿಗೆ ಈ ರೀತಿ ನಿಯಮವನ್ನನುಸ ಸನ್ಯಾಸವನ್ನು ತೆಗೆದುಕೊಳ್ಳಬೇಕು. ಸನ್ಯಾಸಿಯಾದವನು ಪ್ರಾತಃಕಾಲದಲ್ಲಿ ಹನ್ನೆರಡು ಸಾ ಓಂಕಾರವನ್ನು ದಿನವೂ ಜಪಿಸಬೇಕು.

ದಿನೇ ದಿನೇ ತ್ವತಿಕ್ರಾಂತೇ ನಿತ್ಯಮೇವಂ ಕ್ರಮಾಜ್ಜಪೇತ್ ।
ಮಾಸಾದೌ ಕ್ರಮಶೋऽತೀತೇ ಸಾರ್ಧಲಕ್ಷಜಪೇನ ಹಿ ॥೪೮॥

೪೮ ಈ ರೀತಿ ಓಂಕಾರವನ್ನು ಜಪಿಸದೇ ಒಂದು ತಿಂಗಳಿಗೆ ಒಂದೂ ಲಕ್ಷಕ್ಕಿಂತಲೂ ಹೆಚ್ಚಾಗಿ ಜಪವುಳಿದದ್ದೇ ಆದರೆ ತಿರುಗಿ ಸನ್ಯಾಸವನ್ನು ಸ್ವೀಕ ಮಾಡಬೇಕು.

ಅತ ಊರ್ಧ್ವಮತಿಕ್ರಾಂತೇ ಪುನಃ ಪ್ರೈಷಂ ಸಮಾಚರೇತ್ ।
ಏವಂ ಕೃತ್ವಾ ದೋಷಶಾಂತಿರನ್ಯಥಾ ರೌರವಂ ವ್ರಜೇತ್ ॥೪೯॥

೪೯ ಇದಕ್ಕೂ ಮೀರಿದ್ದೇ ಆದರೆ ಪುನಃ ಸಂನ್ಯಾಸ ಸ್ವೀಕಾರ ಮಾಡಬೇಕು. ಇಲ್ಲವಾದರೆ ಕಾರವ ನರಕವನ್ನು ಹೊಂದುವನು. ಹಿಂದೆ ಹೇಳಿದ ರೀತಿ ಅನುಸರಿಸಿದರೆ ದೋಷಶಾಂತಿಯಾಗುವುದು.

ಧರ್ಮಾರ್ಥಯೋಸ್ತತೋ ಯತ್ನಂ ಕುರ್ಯಾತ್ಕಾಮೀ ನ ಚೇತರಃ।
ಬ್ರಾಹ್ಮಣೋ ಮುಕ್ತಿಕಾಮಃ ಸ್ಯಾದ್ಬ್ರಹ್ಮಜ್ಞಾನಂ ಸದಾಭ್ಯಸೇತ್ ॥೫೦॥

೫೦ ಧರ್ಮಾರ್ಥಗಳಲ್ಲಿ ಆಸಕ್ತನಾದವನು ಅಂದರೆ ಫಲಾಪೇಕ್ಷೆಯುಳ್ಳ ಗೃಹಸ್ಥನು ಪ್ರಯತ್ನಿಸಬಹುದು. ಹಾಗಿಲ್ಲದೇ ಕೇವಲ ಮುಕ್ತಿ ಕಾಮಿಯಾದ ಬ್ರಾಹ್ಮಣನು ಬ್ರಹ್ಮ ಸಂಬಂಧವಾದ ತಿಳುವಳಿಕೆಗಾಗಿ ಯತ್ನಿಸಬೇಕು.

ಧರ್ಮಾದರ್ಥೋಽರ್ಥತೋ ಭೋಗೋ ಭೋಗಾದ್ವೈರಾಗ್ಯಸಂಭವಃ।
ಧರ್ಮಾರ್ಜಿತಾರ್ಥಭೋಗೇನ ವೈರಾಗ್ಯಮುಪಜಾಯತೇ ॥೫೧॥

೫೧ ಧರ್ಮದಿಂದ ಅರ್ಥವೂ, ಅರ್ಥದಿಂದ ಭೋಗವೂ, ಭೋಗದಿಂದ ವೈರಾಗ್ಯವೂ ಲಭಿಸುವುವು. ಧರ್ಮದಿಂದ ಸಂಪಾದಿಸಿದ ಹಣವನ್ನು ಅನುಭವಿಸುವುದರಿಂದ ವೈರಾಗ್ಯವು ಜನಿಸುವುದು.

ವಿ.ವಿ.:- ಧರ್ಮ ಎಂದರೆ 'ಧಾರಣಾತ್ ಧರ್ಮಮಿತ್ಯಾಹು' ಎಂದಿದ್ದಾರೆ. ಅಂದರೆ ಈ ಪ್ರಪಂಚವೆಲ್ಲವೂ ಧರ್ಮದಿಂದಲೇ ನಿಂತಿರುವುದು. ಧರ್ಮ ಎಂದರೆ ಯಾವುದು? ಎಂದರೆ ಎಲ್ಲಾ ಸತ್ಕೃತ್ಯಗಳೂ ಧರ್ಮವೇ. ಇದನ್ನೇ ವೇದದಲ್ಲಿ ಈ ರೀತಿ ಹೇಳಿದ್ದಾರೆ. 'ಧರ್ಮೋವಿಶ್ವಸ್ಯ ಜಗತಃ ಪ್ರತಿಷ್ಠಾ, ಲೋಕೇ ಧರ್ಮಿಷ್ಠಂ ಪ್ರಜಾಉಪಸರ್ಪಂತಿ ಧರ್ಮೇಣ ಪಾಪಮಾಪನುದೀತಿ ಧರ್ಮೇ ಸರ್ವಂ ಪ್ರತಿಷ್ಠಿತಂ ತಸ್ಮಾದ್ಧರ್ಮಂ ಪರಮಂವದನ್ತಿ' ಅಂದರೆ ಜಗತ್ತು ಇರುವುದಕ್ಕೆ ಧರ್ಮವೇ ಕಾರಣ, ಲೋಕದಲ್ಲಿ ಧರ್ಮಿಷ್ಟನನ್ನು ಜನರು ಸಮೀಪಿಸುತ್ತಾರೆ. ಧರ್ಮದಿಂದ ಪಾಪನಾಶವಾಗುವುದು. ಧರ್ಮದಲ್ಲಿಯೇ ಎಲ್ಲವೂ ಇರುವುದು. ಆದ್ದರಿಂದಲೇ ಧರ್ಮವೇ ಶ್ರೇಷ್ಠವೆಂದು ಹೇಳುತ್ತಾರೆ. ಆದ್ದರಿಂದ ಧರ್ಮವು ಶ್ರೇಷ್ಠವಾದುದು.

ವಿಪರೀತಾರ್ಥಭೋಗೇನ ರಾಗ ಏವ ಪ್ರಜಾಯತೇ ।
ಧರ್ಮಶ್ಚ ದ್ವಿವಿಧಃ ಪ್ರೋಕ್ತೋ ದ್ರವ್ಯದೇಹದ್ವಯೇನ ಚ ।।೫೨।।

೫೨ ಮೇಲೆ ಹೇಳಿದ ಧರ್ಮಕ್ಕೆ ವಿರುದ್ಧವಾಗಿ ಸಂಪಾದಿಸಿದ ದ್ರವ್ಯದಿಂದ ರಾಗವೇ ಉಂಟಾಗುತ್ತದೆ. ಧರ್ಮವು ದ್ರವ್ಯಧರ್ಮ ಮತ್ತು ಶರೀರಧರ್ಮವೆಂದು ಎರಡು ವಿಧವಾಗಿರುವುದು.

ವಿ.ವಿ.:- ದ್ರವ್ಯಧರ್ಮವೆಂದರೆ ಧರ್ಮವಾಗಿ ತಾನು ಸಂಪಾದಿಸಿದ ಹಣದಲ್ಲಿ ಧರ್ಮಕಾರ್ಯಕ್ಕಾಗಿ ಸ್ವಲ್ಪಭಾಗವನ್ನು ಖರ್ಚುಮಾಡಬೇಕು. ಉದಾ:- ದೇವರ ಸೇವೆ, ಅನ್ನದಾನ, ಇತ್ಯಾದಿ ಇದು ದ್ರವ್ಯ ಧರ್ಮವಾಗುತ್ತದೆ. ಶರೀರ ಧರ್ಮವೆಂದರೆ, ಸದಾಚಾರ, ಅಹಿಂಸಾ, ಚಿತ್ತಶುದ್ಧಿಗಾಗಿ ಆಚರಿಸುವ ಉಪವಾಸ, ವ್ರತ, ಪೂಜಾ ಇತ್ಯಾದಿಗಳು ಆಗುತ್ತವೆ.

ದ್ರವ್ಯಮಿಜ್ಯಾದಿರೂಪಂ ಸ್ಯಾತ್ತೀರ್ಥಸ್ನಾನಾದಿ ದೈಹಿಕಂ ।
ಧರ್ಮೇಣ ಧನಮಾಪ್ನೋತಿ ತಪಸಾ ದಿವ್ಯರೂಪತಾಂ ।।೫೩।।

೫೩ ದ್ರವ್ಯದಿಂದಾಗುವ ಧರ್ಮಗಳು ಯಜ್ಞ ಮುಂತಾದುವು ಹಾಗೆ ಸಾರ್ವಜನಿಕರ ಉಪಯೋಗಕ್ಕಾಗಿ ಕಟ್ಟಿಸುವಂತಹ ಕೆರೆ, ಕೊಳ, ಬಾವಿ ಇತ್ಯಾದಿಗಳು. ಹಾಗೆಯೇ ಶರೀರ ಧರ್ಮಗಳೆಂದರೆ ತೀರ್ಥಸ್ನಾನ ಮುಂತಾದುವು. ದೈಹಿಕ ಶ್ರಮದಿಂದ ಕೂಡಿದ ಕಾರ್ಯಗಳಾಗುತ್ತದೆ. ಹೀಗಿರುವ ಧರ್ಮದಿಂದ ಧನವುಂಟಾಗುತ್ತದೆ. ತಪಸ್ಸಿನಿಂದ ದೇವಲೋಕಾದಿಗಳು ಲಭ್ಯವಾಗುತ್ತದೆ.

ನಿಷ್ಕಾಮಃ ಶುದ್ಧಿಮಾಪ್ನೋತಿ ಶುದ್ಧ್ಯಾಜ್ಞಾನಂ ನ ಸಂಶಯಃ ।
ಕೃತಾದೌ ಹಿ ತಪಃ ಶ್ಲಾಘ್ಯಂ ದ್ರವ್ಯಧರ್ಮಃ ಕಲೌ ಯುಗೇ ।।೫೪।।

೫೪ ಮೇಲೆ ಹೇಳಿದ ಧರ್ಮಗಳನ್ನು ಯಾವ ಫಲಾಪೇಕ್ಷೆ ಇಲ್ಲದೇ ಆಚರಿಸಿದರೆ ಮನಶ್ಶುದ್ಧಿಯಾಗುವುದು. ನಂತರ ಶುದ್ಧವಾದ ಬ್ರಹ್ಮಜ್ಞಾನವುಂಟಾಗುವುದು. ಇದರಲ್ಲಿ ಸಂಶಯವಿಲ್ಲ. ಕೃತಯುಗದಲ್ಲಿ ತಪಸ್ಸೇ ಶ್ರೇಷ್ಠವಾಗಿದ್ದಿತು. ದ್ರವ್ಯಧರ್ಮವು ಕಲಿಯುಗದಲ್ಲಿ ಶ್ರೇಷ್ಠವು.

ಕೃತೇ ಧ್ಯಾನಾಜ್ಜ್ಞಾನಸಿದ್ಧಿಸ್ತ್ರೇತಾಯಾಂ ತಪಸಾ ತಥಾ ।
ದ್ವಾಪರೇ ಯಜನಾಜ್ಜ್ಞಾನಂ ಪ್ರತಿಮಾಪೂಜಯಾ ಕಲೌ ।।೫೫।।

೫೫ ಕೃತಯುಗದಲ್ಲಿ ಧ್ಯಾನದಿಂದ ಜ್ಞಾನಸಿದ್ಧಿಯು, ತ್ರೇತಾಯುಗದಲ್ಲಿ ತಪಸ್ಸಿನಿಂದ ಸಿದ್ಧಿಯು, ದ್ವಾಪರಯುಗದಲ್ಲಿ ಯಾಗಾದಿಗಳಿಂದ ಜ್ಞಾನಪ್ರಾಪ್ತಿಯೂ, ಕಲಿಯುಗದಲ್ಲಿ ದೇವತಾ ವಿಗ್ರಹಾರಾಧನೆಯಿಂದಲೇ ಜ್ಞಾನವು ಲಭಿಸುವುದು.

ಯಾದೃಶಂ ಪುಣ್ಯಪಾಪಂ ವಾ ತಾದೃಶಂ ಫಲಮೇವ ಹಿ ।
ದ್ರವ್ಯದೇಹಾಂಗಭೇದೇನ ನ್ಯೂನವೃದ್ಧಿಕ್ಷಯಾದಿಕಂ ॥೫೬॥

೫೬ ದ್ರವ್ಯ ಮತ್ತು ದೇಹವೆಂಬ ಬೇಧದಿಂದ ಮಾಡುವ ಕರ್ಮದ ಫಲವು ಜಾಗ್ರತೆ ಕ್ಷಯಿಸುವುದು. ಯಾವ ರೀತಿಯಾದ ಪುಣ್ಯ-ಪಾಪಗಳು ಸಂಗ್ರಹಿಸಲ್ಪಟ್ಟಿವೆಯೋ ಆ ರೀತಿಯಾದ ಕರ್ಮಗಳಿಗೆ ಅನುಗುಣವಾಗಿಯೇ ಫಲವು ಲಭಿಸುವುದು.

ಅಧರ್ಮೋ ಹಿಂಸಕಾರೂಪೋ ಧರ್ಮಸ್ತು ಸುಖರೂಪಕಃ ।
ಅಧರ್ಮಾದ್ದುಃಖಮಾಪ್ನೋತಿ ಧರ್ಮಾದ್ವೈ ಸುಖಮೇಧತೇ ॥೫೭॥

೫೭ ಅಧರ್ಮ ಹಿಂಸಾರೂಪವಾದುದು. ಧರ್ಮವು ಸುಖರೂಪವಾದುದು. ಅಧರ್ಮದಿಂದ ದುಃಖಪ್ರಾಪ್ತಿ, ಧರ್ಮದಿಂದ ಸುಖಪ್ರಾಪ್ತಿಯಾಗುವುದು.

ವಿದ್ಯಾದ್ದುರ್ವೃತ್ತಿತೋ ದುಃಖಂ ಸುಖಂ ವಿದ್ಯಾತ್ಸುವೃತ್ತಿತಃ ।
ಧರ್ಮಾರ್ಜನಮತಃ ಕುರ್ಯಾದ್ಭೋಗಮೋಕ್ಷಪ್ರಸಿದ್ಧಯೇ ॥೫೮॥

೫೮ ದುರಾಚಾರದಿಂದ ದುಃಖವುಂಟಾಗುವುದು ಸದಾಚಾರದಿಂದ ಸುಖವು ಲಭಿಸುವುದು. ಭೋಗ-ಮೋಕ್ಷಗಳು ಲಭಿಸಬೇಕಾದರೆ ಧರ್ಮವನ್ನೇ ಸಂಪಾದಿಸಬೇಕು.

ಸಕುಟುಂಬಸ್ಯ ವಿಪ್ರಸ್ಯ ಚತುರ್ಜನಯುತಸ್ಯ ಚ ।
ಶತವರ್ಷಸ್ಯ ವೃತ್ತಿಂ ತು ದತ್ವಾತ್ತದ್ಬ್ರಹ್ಮಲೋಕದಂ ॥೫೯॥

೫೯ ಕುಟುಂಬದಿಂದ ಕೂಡಿದ್ದ ನಾಲ್ಕು ಜನರೊಂದಿಗೆ ಇರುವಂತಹ ಮತ್ತು ಸದಾಚಾರಿಯಿಂದ ಬ್ರಾಹ್ಮಣನಿಗೆ ನೂರು ವರ್ಷ ಪರ್ಯಂತ ಜೀವನವನ್ನು ಕಲ್ಪಿಸಿದರೆ ಬ್ರಹ್ಮಲೋಕವು ಲಭಿಸುವುದು.

ಚಾಂದ್ರಾಯಣಸಹಸ್ರಂ ತು ಬ್ರಹ್ಮಲೋಕಪ್ರದಂ ವಿದುಃ ।
ಸಹಸ್ರಸ್ಯ ಕುಟುಂಬಸ್ಯ ಪ್ರತಿಷ್ಠಾಂ ಕ್ಷತ್ರಿಯಶ್ಚರೇತ್ ॥೬೦॥

೬೦ ಸಹಸ್ರ ಚಾಂದ್ರಾಯಣವ್ರತದಿಂದ ಬ್ರಹ್ಮಲೋಕಪ್ರಾಪ್ತವಾಗುವುದು. ಕ್ಷತ್ರಿಯ ಸಾವಿರ ಸಂಸಾರಗಳಿಗೆ ಜೀವನವನ್ನು ಕಲ್ಪಿಸಬೇಕು. ಹಾಗೆ ಮಾಡಿದರೆ ಇಂದ್ರಲೋಕ ಸಿಕ್ಕುವುದು.

ಇಂದ್ರಲೋಕಪ್ರದಂ ವಿದ್ಯಾದಯುತಂ ಬ್ರಹ್ಮಲೋಕದಂ ।
ಯಾಂ ದೇವತಾಂ ಪುರಸ್ಕೃತ್ಯ ದಾನಮಾಚರತೇ ನರಃ ॥೬೧॥

೬೧ ಹತ್ತು ಸಾವಿರ ಕುಟುಂಬವನ್ನು ಪೋಷಿಸಿದರೆ ಬ್ರಹ್ಮಲೋಕಪ್ರಾಪ್ತವಾಗುವುದ ಯಾವದೇವತೆಯನ್ನು ಪೂಜಿಸಿ (ಪುರಸ್ಕರಿಸಿ) ಮನುಷ್ಯನು ದಾನ ಮಾಡುವನೋ,

ತತ್ತಲ್ಲೋಕಮವಾಪ್ನೋತಿ ಇತಿ ವೇದವಿದೋ ವಿದುಃ ।
ಅರ್ಥಹೀನಃ ಸದಾ ಕುರ್ಯಾತ್ತಪಸಾಮರ್ಜನಂ ತಥಾ ॥೬೨॥

೬೨ ಆ ದೇವತಾ ಸಂಬಂಧವಾದ ಲೋಕವನ್ನೇ ಹೊಂದುವರು ಎಂದು ವೇದವಿತ್ತುಗ ಹೇಳಿರುವರು. ರುದ್ರವ್ಯಹೀನರು ಯಾವಾಗಲೂ ತಪಸ್ಸನ್ನು ಆಚರಿಸಬೇಕು.

ತೀರ್ಥಾಚ್ಚ ತಪಸಾ ಪ್ರಾಪ್ಯಂ ಸುಖಮಕ್ಷಯ್ಯಮಶ್ನುತೇ ।
ಅರ್ಥಾರ್ಜನಮಥೋ ವಕ್ಷ್ಯೇ ನ್ಯಾಯತಃ ಸುಸಮಾಹಿತಃ ॥೬೩॥

೬೩ ತೀರ್ಥಯಾತ್ರೆಗಿಂತಲೂ ತಪಸ್ಸಿಗೆ ಸಿಗುವ ಫಲವು ಶಾಶ್ವತ ಸುಖವಾಗಿರುವುದ ಇನ್ನು ನ್ಯಾಯವಾಗಿ ಮಾಡುವ ಧನಸಂಪಾದನೆಯ ಕ್ರಮವನ್ನು ಹೇಳುವೆ ಏಕಾಗ್ರತೆಯಿಂದ ಕೇಳು.

ಕೃತಾತ್ಪ್ರತಿಗ್ರಹಾಚ್ಚೈವ ಯಾಜನಾಚ್ಚ ವಿಶುದ್ಧತಃ ।
ಅದೈನ್ಯಾದನತಿಕ್ಲೇಶಾದ್ಬ್ರಾಹ್ಮಣೋ ಧನಮರ್ಜಯೇತ್ ॥೬೪॥

೬೪ ದಾನವನ್ನು ತೆಗೆದುಕೊಳ್ಳುವುದರಿಂದಲೂ ಶುದ್ಧವಾದ ಪೌರೋಹಿತ್ಯದಿಂದಲ (ಪೂಜಾಯಾಗ ಇತ್ಯಾದಿಗಳಿಂದ) ಯಾರನ್ನೂ ದೈನ್ಯದಿಂದ ಬೇಡದೇ, ಹೆಚ್ಚಿಗೆ ಕ್ಲೇಶವನ ಪಡೆಯದೇ ಬ್ರಾಹ್ಮಣನು ಧನವನ್ನು ಸಂಪಾದಿಸಬೇಕು.

ವಿ.ವಿ.:- 'ಹೆಚ್ಚಿಗೇ ಕ್ಲೇಶಪಡದೇ' (ಅನತಿಕ್ಲೇಶಾತ್) ಎಂಬ ಪದಕ್ಕೆ ಸೋಮಾರಿಯಾ ಅಥವಾ ಹೆಚ್ಚು ಶ್ರಮಿಸದೇ ಎಂಬರ್ಥವಲ್ಲ. ಅದರ ಅಂತರಾರ್ಥವೇನೆಂದ

ಧನಾರ್ಜನೆಯೇ ಬ್ರಾಹ್ಮಣನ ಮುಖ್ಯ ಉದ್ದೇಶವಲ್ಲ. ಅದಕ್ಕಾಗಿ ಪಡಬಾರದ ಪಾಡು ಪಡಬಾರದು ಎಂದರ್ಥ.

**ಕ್ಷತ್ರಿಯೋ ಬಾಹುವೀರ್ಯೇಣ ಕೃಷಿಗೋರಕ್ಷಣಾದ್ವಿಶಃ ।**
**ನ್ಯಾಯಾರ್ಜಿತಸ್ಯ ವಿನಾಶ್ಯ ದಾನಾತ್ರಿದ್ಧಿಂ ಸಮಶ್ನುತೇ ॥೬೫॥**

೬೫ ಕ್ಷತ್ರಿಯನು ಬಾಹು ಬಲದಿಂದಲೂ, ವೈಶ್ಯನು ವ್ಯವಸಾಯ, ಗೋಸಂರಕ್ಷಣೆಗಳಿಂದ, ವ್ಯಾಪಾರಗಳಿಂದ ನ್ಯಾಯಸಮ್ಮತವಾಗಿ ಹಣ ಸಂಪಾದಿಸಬೇಕು. ನ್ಯಾಯವಾಗಿ ಸಂಪಾದಿಸಿದ ದ್ರವ್ಯದಾನದಿಂದ ಸಿದ್ಧಿಯು ಲಭಿಸುತ್ತದೆ. ಅಂದರೆ ಬ್ರಹ್ಮ ಜ್ಞಾನ ಉಂಟಾಗುತ್ತದೆ.

**ಜ್ಞಾನಸಿದ್ಧ್ಯಾ ಮೋಕ್ಷಸಿದ್ಧಿಃ ಸರ್ವೇಷಾಂ ಗುರ್ವನುಗ್ರಹಾತ್ ।**
**ಮೋಕ್ಷಾತ್ಸ್ವರೂಪಸಿದ್ಧಿಃ ಸ್ಯಾತ್ಪರಾನಂದಂ ಸಮಶ್ನುತೇ ॥೬೬॥**

೬೬ ಜ್ಞಾನಸಿದ್ಧಿಯಿಂದ ಮೋಕ್ಷಸಿದ್ಧಿಯಾಗುತ್ತದೆ. ಇದು ಗುರುವಿನ ಅನುಗ್ರಹದಿಂದ ಲಭಿಸುತ್ತದೆ. ಮೋಕ್ಷದಿಂದ ಸ್ವರೂಪ (ಬ್ರಹ್ಮ) ಸಿದ್ಧಿಯು ಲಭಿಸುವುದು. ಇದರಿಂದ ಉತ್ಕೃಷ್ಟನಾದ ಬ್ರಹ್ಮಾನಂದವು ಲಭಿಸುವುದು.

ವಿ.ವಿ.:- ಬ್ರಹ್ಮಾನಂದವು ಲಭಿಸುವುದು ಎಂದರೆ ಶಾಶ್ವತವಾದ ನಾಶರಹಿತವಾದ ಆನಂದ ಸ್ಥಿತಿ ಉಂಟಾಗುವುದು ಎಂದರ್ಥ.

**ಸತ್ಸಂಗಾತ್ಸರ್ವಮೇತದ್ವೈ ನರಾಣಾಂ ಜಾಯತೇ ದ್ವಿಜಾಃ ।**
**ಧನಧಾನ್ಯಾದಿಕಂ ಸರ್ವಂ ದೇಯಂ ವೈ ಗೃಹಮೇಧಿನಾ ॥೬೭॥**

೬೭ ಎಲೈ ವಿಪ್ರರೇ ಮೇಲೆ ಹೇಳಿದುದೆಲ್ಲಾ ಸತ್ಸಂಗದಿಂದಲೇ ಮನುಷ್ಯರಿಗೆ ದೊರಕುತ್ತದೆ. ಗೃಹಸ್ಥನಾದವನು ತನ್ನ ಶಕ್ತಿಗೆ ತಕ್ಕಂತೆ ಧನ, ಧಾನ್ಯ ಮುಂತಾದುವನ್ನೆಲ್ಲಾ ದಾನಮಾಡಬೇಕು.

**ಯದ್ಯತ್ಕಾಲೇ ವಸ್ತುಜಾತಂ ಫಲಂ ವಾ ಧಾನ್ಯಮೇವ ಚ ।**
**ತತ್ತತ್ಸರ್ವಂ ಬ್ರಾಹ್ಮಣೇಭ್ಯೋ ದೇಯಂ ವೈ ಹಿತಮಿಚ್ಛತಾ ॥೬೮॥**

೬೮ ಯಾರು ತನಗೆ ಒಳ್ಳೆಯದಾಗಬೇಕೆಂದು ಬಯಸುವನೋ ಅಂತಹವನು ಯಾವ

ಕಾಲದಲ್ಲಿ ಯಾವ ಹಣ್ಣು, ಧಾನ್ಯ ದೊರಕುವುದೋ ಅಂತಹ ವಸ್ತುಗಳೆಲ್ಲವ
ಬ್ರಾಹ್ಮಣರಿಗೆ ದಾನ ಮಾಡಬೇಕು.

ಜಲಂ ಚೈವ ಸದಾ ದೇಯಮನ್ನಂ ಕ್ಷುದ್ವ್ಯಾಧಿಶಾಂತಯೇ ।
ಕ್ಷೇತ್ರಂ ಧಾನ್ಯಂ ತಥಾಽಽಮಾನ್ನಮನ್ನಮೇವ ಚತುರ್ವಿಧಂ ॥೧೯॥

೧೯ ಹಸಿವು, ಬಾಯಾರಿಕೆಗಳ ಉಪಶಾಂತ್ಯರ್ಥವಾಗಿ ಎಲ್ಲಾ ಪ್ರಾಣಿಗಳಿಗೂ ನಿ
ಮತ್ತು ಅನ್ನಗಳನ್ನು ಕೊಡಬೇಕು. ಅನ್ನವು ಕ್ಷೇತ್ರಂ, ಧಾನ್ಯ, ಆಮ (ಹಸಿಯ ಹಿ
ಅನ್ನವೆಂದು, ನಾಲ್ಕು ವಿಧವಾಗಿದೆ.

ಯಾವತ್ಕಾಲಂ ಯದನ್ನಂ ವೈ ಭುಕ್ತ್ವಾ ಶ್ರವಣಮೇಧತೇ ।
ತಾವತ್ಕೃತಸ್ಯ ಪುಣ್ಯಸ್ಯ ತ್ವರ್ಧಂ ದಾತುರ್ನ ಸಂಶಯಃ ॥೨೦॥

೨೦ ಅನ್ನವನ್ನು ದಾನವಾಗಿ ತೆಗೆದುಕೊಂಡವನು ಯಾವ ಕಾಲದವರೆ
ಬದುಕಿರುವನೋ, ಅಲ್ಲಿಯವರೆವಿಗೆ ಅವನು ಮಾಡಿದ ಪುಣ್ಯದಲ್ಲಿ ಅದ
ಅನ್ನದಾತೃವಿಗೆ ಲಭಿಸುವುದು, ಇದರಲ್ಲಿ ಸಂಶಯವಿಲ್ಲ.

ಗೃಹೀತಾ ಹಿ ಗೃಹೀತಸ್ಯ ದಾನಾದ್ವೈ ತಪಸಾ ತಥಾ ।
ಪಾಪಸಂಶೋಧನಂ ಕುರ್ಯಾದನ್ಯಥಾ ರೌರವಂ ವ್ರಜೇತ್ ॥೨೧॥

೨೧ ದಾನ ತೆಗೆದುಕೊಂಡವನು ತೆಗೆದುಕೊಂಡ ದಾನಶುದ್ಧಿಗಾಗಿ ತಪಸ್ಸ
ಆಚರಿಸಬೇಕು. ಹಾಗೇ ದಾನವನ್ನು ಸಹ ಮಾಡಬೇಕು. ಹೀಗೆ ಮಾಡಿ ಪಾಪ
ಕಳೆದುಕೊಳ್ಳಬೇಕು. ಇಲ್ಲದಿದ್ದಲ್ಲಿ ರೌರವ ನರಕವನ್ನು ಹೊಂದುವನು.

ಆತ್ಮವಿತ್ತಂ ತ್ರಿಧಾ ಕುರ್ಯಾದ್ಧರ್ಮವೃದ್ಧ್ಯಾತ್ಮಭೋಗತಃ ।
ನಿತ್ಯಂ ನೈಮಿತ್ತಕಂ ಕಾಮ್ಯಂ ಕರ್ಮ ಕುರ್ಯಾತ್ತು ಧರ್ಮತಃ ॥೨೨॥

೨೨ ತನ್ನ ಸಂಪಾದನೆಯ ಹಣದಲ್ಲಿ ಮೂರು ಭಾಗ ಮಾಡಬೇಕು. ಅದು ಒ
ಭಾಗ ಧರ್ಮಕ್ಕಾಗಿ ಇನ್ನೊಂದು ಭಾಗವನ್ನು ಅಭಿವೃದ್ಧಿಗಾಗಿ, ಮತ್ತೊಂದು ಭಾಗ
ತನ್ನ ಜೀವನಕ್ಕಾಗಿಟ್ಟು ವಿಂಗಡಿಸಿಕೊಂಡು ಧರ್ಮಕ್ಕನುಸಾರವಾಗಿ ನಿತ್ಯ ನೈಮಿ
ಕಾಮ್ಯಕರ್ಮಗಳನ್ನು ಮಾಡಬೇಕು.

ವಿತ್ತಸ್ಯ ವರ್ಧನಂ ಕುರ್ಯಾದ್ವೃದ್ಧ್ಯಂಶೇನ ಹಿ ಸಾಧಕಃ |
ಹಿತೇನ ಮಿತಮೇಧ್ಯೇನ ಭೋಗಂ ಭೋಗಾಂಶತಶ್ಚರೇತ್ ||೭೩||

೭೩ ವೃದ್ಧಿಗಾಗಿಟ್ಟ ಒಂದಂಶದ ಹಣದಿಂದ ಧನವನ್ನು ಅಭಿವೃದ್ಧಿಪಡಿಸಿಕೊಳ್ಳಬೇಕು. ತನ್ನ ಜೀವನಕ್ಕಾಗಿಟ್ಟ ಹಣವನ್ನು ಹಿತ, ಮಿತವಾಗಿ, ಪರಿಶುದ್ಧವಾಗಿರುವ ವಸ್ತುವನ್ನು ಸೇವಿಸಬೇಕು.

ಕೃಷ್ಯರ್ಜಿತೇ ದಶಾಂಶಂ ಹಿ ದೇಯಂ ಪಾಪಸ್ಯ ಶುದ್ಧಯೇ |
ಶೇಷೇಣ ಕುರ್ಯಾದ್ಧರ್ಮಾದಿ ಅನ್ಯಥಾ ರೌರವಂ ವ್ರಜೇತ್ ||೭೪||

೭೪ ವ್ಯವಸಾಯದಿಂದ ಸಂಪಾದಿಸಿದ ಹಣದಲ್ಲಿ ಹತ್ತನೇ ಒಂದು ಭಾಗವನ್ನು ಪಾಪಶುದ್ಧಿಗಾಗಿ ದಾನಮಾಡಬೇಕು. ಮಿಕ್ಕ ಭಾಗವನ್ನು ಧರ್ಮಾದಿಗಳನ್ನು ಅಂದರೆ ಮೇಲೆ ಹೇಳಿದ ಅಬಿವೃದ್ಧಿ, ಜೀವನಗಳನ್ನು ಮಾಡಬೇಕು.

ಅಥವಾ ಪಾಪವೃದ್ಧಿಃ ಸ್ಯಾತ್ಸಸ್ಯಂ ವಾ ಕ್ಷಯಮೇಷ್ಯತಿ |
ವೃದ್ಧಿವಾಣಿಜ್ಯಕೇ ದೇಯಂ ಷಡಂಶಂ ಹಿ ವಿಚಕ್ಷಣೈಃ ||೭೫||

೭೫ ಇಲ್ಲವಾದಲ್ಲಿ ಪಾಪವೃದ್ಧಿಯಾಗುತ್ತದೆ. ಹಾಗೆ ಅವನು ಸಂಪಾದಿಸಿದ್ದು ಅನ್ಯಾಯವಾಗಿ ನಾಶಹೊಂದುತ್ತದೆ. ವೈಶ್ಯನು ವ್ಯಾಪಾರದಿಂದ ಸಂಪಾದಿಸಿದ ಧನದಲ್ಲಿ ಆರನೇ ಒಂದು ಭಾಗವನ್ನು ದಾನಮಾಡಬೇಕು.

ಶುದ್ಧಪ್ರತಿಗ್ರಹೇ ದೇಯಂ ಚತುರ್ಥಾಂಶಂ ದ್ವಿಜೋತ್ತಮೈಃ |
ಅಕಸ್ಮಾದುತ್ಥಿತೇಽರ್ಥೇ ಹಿ ದೇಯಮರ್ಧಂ ದ್ವಿಜೋತ್ತಮೈಃ ||೭೬||

೭೬ ನ್ಯಾಯವಾಗಿ ದಾನ ತೆಗೆದುಕೊಂಡಿದ್ದರಲ್ಲಿ ನಾಲ್ಕನೇ ಒಂದಂಶವನ್ನು ಬ್ರಾಹ್ಮಣನು ದಾನ ಮಾಡಬೇಕು. ಅಕಸ್ಮಾತ್ತಾಗಿ ಬಂದ ಹಣದಲ್ಲಿ ಅರ್ಧಭಾಗವನ್ನು ದಾನ ಮಾಡಬೇಕು.

ಅಸತ್ಪ್ರತಿಗ್ರಹೇ ಸರ್ವಂ ದುರ್ದಾನಂ ಸಾಗರೇ ಕ್ಷಿಪೇತ್ |
ಆಹೂಯ ದಾನಂ ಕರ್ತವ್ಯಮಾತ್ಮಭೋಗಸಮೃದ್ಧಯೇ ||೭೭||

೭೭ ದುಷ್ಟವಾದ ದಾನವನ್ನು ತೆಗೆದುಕೊಂಡರೆ ಅದರ ಲಾಭವನ್ನೆಲ್ಲವನ್ನೂ

ಸಮುದ್ರದಲ್ಲೆಸೆಯಬೇಕು. ತನ್ನ ಭೋಗದ ಅಭಿವೃದ್ಧಿಗಾಗಿ ಕರೆದು ದಾನ ಮಾಡಬೇಕ

ಪೃಷ್ಟಂ ಸರ್ವಂ ಸದಾ ದೇಯಮಾತ್ಮಶಕ್ತ್ಯನುಸಾರತಃ ।
ಜನ್ಮಾಂತರೇ ಋಣೀ ಹಿ ಸ್ಯಾದದತ್ತೇ ಪೃಷ್ಟವಸ್ತುನಿ ॥೭೮॥

೭೮ ಯಾವನಾದರೂ ದರಿದ್ರನು ಏನಾದರೂ ವಸ್ತುವನ್ನು ದಾನವಾಗಿ ಕೇಳಿದರೆ ತನ ಶಕ್ತ್ಯನುಸಾರವಾಗಿ ಅವನು ಕೇಳಿದ್ದೆಲ್ಲವನ್ನು ದಾನಮಾಡಬೇಕು. ಹಾಗೆ ಕೇಳಿದ್ದನ್ನು ಕೊಡದಿದ್ದವನು ಮುಂದಿನ ಜನ್ಮದಲ್ಲಿ ಸಾಲಗಾರನಾಗುವನು.

ಪರೇಷಾಂ ಚ ತಥಾ ದೋಷಂ ನ ಪ್ರಶಂಸೇದ್ವಿಚಕ್ಷಣಃ ।
ವಿದ್ವೇಷೇಣ ತಥಾ ಬ್ರಹ್ಮನ್ ಶೃತಂ ದೃಷ್ಟಂ ಚ ನೋ ವದೇತ್ ॥೭೯॥

೭೯ ತಿಳುವಳಿಕೆಯುಳ್ಳವನು ಇನ್ನೊಬ್ಬರ ದೋಷವನ್ನು ಎತ್ತಿ ಆಡಬಾರದು ವಿಶೇಷವಾಗಿ ನೋಡಿದ, ಕೇಳಿದ ವಿಚಾರಗಳನ್ನು ಇನ್ನೊಬ್ಬರ ಜತೆ ವಿವರಿಸಬಾರದು.

ನವದೇತ್ಸರ್ವಜಂತೂನಾಂ ಹೃದಿ ರೋಷಕರಂ ಬುಧಃ ।
ಸಂಧ್ಯಯೋರಗ್ನಿಕಾರ್ಯಂಚ ಕುರ್ಯಾದೈಶ್ವರ್ಯಸಿದ್ಧಯೇ ॥೮೦॥

೮೦ ಸರ್ವ ಪ್ರಾಣಿಗಳಿಗೂ ಕೋಪ ಬರುವಂತಹ ಮಾತುಗಳನ್ನಾಡಬಾರದು. ಎರಡೂ ಸಂಧ್ಯಗಳಲ್ಲೂ ಐಶ್ವರ್ಯಸಿದ್ಧಿಗಾಗಿ ಅಗ್ನಿಕಾರ್ಯವನ್ನು ಮಾಡಬೇಕು.

ಅಶಕ್ತಸ್ತ್ವೇಕಕಾಲೇ ವಾ ಸೂರ್ಯಾಗ್ನೀ ಚ ಯಥಾವಿಧಿ ।
ತಂಡುಲಂ ಧಾನ್ಯಮಾಜ್ಯಂ ವಾ ಫಲಂ ಕಂದಂ ಹವಿಸ್ತಥಾ ॥೮೧॥

೮೧ ಅಶಕ್ತನಾದವನು ಒಂದು ಕಾಲದಲ್ಲಿಯಾದರೂ ಸೂರ್ಯ, ಅಗ್ನಿಯರನ್ನು ತೃಪ್ತಿಪಡಿಸಬೇಕು. ಅಕ್ಕಿ, ಧಾನ್ಯ, ತುಪ್ಪ ಅಥವಾ ಹಣ್ಣು, ಗೆಡ್ಡೆ ಗೆಣಸು, ಹವಿಸ್ಸನ್ನಾಗಲೀ,

ಸ್ಥಾಲೀಪಾಕಂ ತಥಾ ಕುರ್ಯಾದ್ಯಥಾನ್ಯಾಯಂ ಯಥಾವಿಧಿ ।
ಪ್ರಧಾನಹೋಮಮಾತ್ರಂ ವಾ ಹವ್ಯಾಭಾವೇ ಸಮಾಚರೇತ್ ॥೮೨॥

೮೨ ಸೂರ್ಯಾಗ್ನಿಗಳಿಗೆ ಅಗ್ನಿಯ ಮೂಲಕ ಹವಿಸ್ಸಾಗಿ ಅರ್ಪಿಸಬೇಕು. ವಿಧಿವತ್ತಾಗಿ ಸ್ಥಾಲೀಪಾಕವನ್ನು ಮಾಡಬೇಕು. ಹವಿಸ್ಸು ಅಭವಾದರೆ ಪ್ರಧಾನ ಹೋಮ ಮಾಡಬೇಕು.

**ನಿತ್ಯಸಂಧಾನಮಿತ್ಯುಕ್ತಂ ತಮಜಸ್ರಂ ವಿದುರ್ಬುಧಾಃ ।**
**ಅಥವಾ ಜಪಮಾತ್ರಂ ವಾ ಸೂರ್ಯವಂದನಮೇವ ಚ ॥೮೩॥**

೮೩ ಇದಕ್ಕೆ ನಿತ್ಯಕರ್ಮವೆಂದು ಹೆಸರು. ಇದನ್ನು ನಿತ್ಯವೂ ಮಾಡಬೇಕು ಎಂದೂ ತಿಳಿದವರು ಹೇಳುತ್ತಾರೆ. ಅಥವಾ ಸಂಧ್ಯಾಕಾಲಗಳಲ್ಲಿ ಸೂರ್ಯವಂದನೆ ಜಪಗಳನ್ನಾದರೂ ಮಾಡಬೇಕು.

**ಏವಮಾತ್ಮಾರ್ಥಿನಃ ಕುರ್ಯುರಥಾರ್ಥೀ ಚ ಯಥಾವಿಧಿ ।**
**ಬ್ರಹ್ಮಯಜ್ಞರತಾ ನಿತ್ಯಂ ದೇವಪೂಜರತಾಸ್ತಥಾ ॥೮೪॥**

೮೪ ಈ ರೀತಿಯಾಗಿ ಆತ್ಮಸ್ವರೂಪವನ್ನೆಪೇಕ್ಷಿಸುವ ಮುಮುಕ್ಷುಗಳು, ಧನಾರ್ಥಿಗಳಾದ ಸಂಸಾರಿಗಳೂ ಸಹ ಶಾಸ್ತ್ರೋಕ್ತ ರೀತಿಯಾಗಿ ನಿತ್ಯ ಕರ್ಮಗಳನ್ನು ಮಾಡಬೇಕು. ಹಾಗೇ ಬ್ರಹ್ಮಯಜ್ಞವನ್ನೂ ದೇವತಾರ್ಚನೆಯನ್ನೂ ದಿನವೂ ಆಚರಿಸಬೇಕು.

**ಅಗ್ನಿ ಪೂಜಾಪರಾ ನಿತ್ಯಂ ಗುರುಪೂಜಾರತಾಸ್ತಥಾ ।**
**ಬ್ರಾಹ್ಮಣಾನಾಂ ತೃಪ್ತಿಕರಾಃ ಸರ್ವೇ ಸ್ವರ್ಗಸ್ಯ ಭಾಗಿನಃ ॥೮೫॥**

೮೫ ಪ್ರತಿನಿತ್ಯದಲ್ಲಿಯೂ ಅಗ್ನಿಯನ್ನು ಪೂಜಿಸಬೇಕು. ಹಾಗೆಯೇ ನಿತ್ಯವೂ ಗುರು ಪೂಜೆಯನ್ನು ಮಾಡುತ್ತಾ ಬ್ರಾಹ್ಮಣರನ್ನು ತೃಪ್ತಿಪಡಿಸುತ್ತಿದ್ದರೆ ಅಂತಹವರೆಲ್ಲರೂ ಸ್ವರ್ಗವನ್ನು ಹೊಂದುವರು.

**ಇತಿ ಶ್ರೀ ಶಿವಮಹಾಪುರಾಣೇ ವಿದ್ಯೇಶ್ವರಸಂಹಿತಾಯಾಂ ತ್ರಯೋದಶೋಽಧ್ಯಾಯಃ**
**ಇಲ್ಲಿಗೆ ಶ್ರೀ ಶಿವಪುರಾಣದ ವಿದ್ಯೇಶ್ವರ ಸಂಹಿತೆಯ**
**ಹದಿಮೂರನೆಯ ಅಧ್ಯಾಯವು ಮುಗಿದುದು.**

||ಶ್ರೀಃ||

||ಓಂ ನಮಃ ಶಿವಾಯ||

ಅಥ ಶ್ರೀ ಶಿವಮಹಾಪುರಾಣೇ
ವಿದ್ಯೇಶ್ವರಸಂಹಿತಾಯಾಂ

# ಚತುರ್ದಶೋಽಧ್ಯಾಯಃ

## ಹದಿನಾಲ್ಕನೇ ಅಧ್ಯಾಯವು

||ಋಷಯ ಊಚುಃ||

**ಅಗ್ನಿಯಜ್ಞಂ ದೇವಯಜ್ಞಂ ಬ್ರಹ್ಮಯಜ್ಞಂ ತಥೈವ ಚ ।**
**ಗುರುಪೂಜಾಂ ಬ್ರಹ್ಮತೃಪ್ತಿಂ ಕ್ರಮೇಣ ಬ್ರೂಹಿ ನಃ ಪ್ರಭೋ ||೧||**

೧ ಋಷಿಗಳು ಹೇಳುತ್ತಾರೆ, ಎಲೈ ಪೂಜ್ಯನೇ ಅಗ್ನಿಯಜ್ಞ, ಬ್ರಹ್ಮಯಜ್ಞ, ದೇವಯಜ್ಞ, ಗುರುಪೂಜಾ ಬ್ರಾಹ್ಮಣ ತೃಪ್ತಿ ಈ ವಿಚಾರಗಳನ್ನು ನಮಗೆ ಕ್ರಮವಾಗಿ ಹೇಳು.

||ಸೂತ ಉವಾಚ||

**ಅಗ್ನೌ ಜುಹೋತಿ ಯದ್ದ್ರವ್ಯಮಗ್ನಿಯಜ್ಞಂ ಸ ಉಚ್ಯತೇ ।**
**ಬ್ರಹ್ಮಚರ್ಯಾಶ್ರಮಸ್ಥಾನಾಂ ಸಮಿದಾಧಾನಮೇವ ಹಿ ||೨||**

೨ ಸೂತರು ಹೇಳುತ್ತಾರೆ, ಅಗ್ನಿಯಲ್ಲಿ ಯಾವ ಹೋಮದ್ರವ್ಯಗಳನ್ನು (ಹವಿಸ್ಸನ್ನು) ಹೋಮಮಾಡುತ್ತೇವೆಯೋ ಅದು ಅಗ್ನಿ ಯಜ್ಞವು, ಬ್ರಹ್ಮಚರ್ಯಾಶ್ರಮದಲ್ಲಿರುವ ಬ್ರಹ್ಮಚಾರಿಗಳಿಗೆ ಸಮಿಧಾ ದಾನವೇ ಈ ಅಗ್ನಿಯಜ್ಞವಾಗಿರುವುದು.

**ಸಮಿದಗ್ನೌ ವ್ರತಾದ್ಯಂ ಚ ವಿಶೇಷಯಜನಾದಿಕಂ ।**
**ಪ್ರಥಮಾಶ್ರಮಿಣಾಮೇವಂ ಯಾವದೌಪಾಸನಂ ದ್ವಿಜಾಃ ||೩||**

೩ ಅಗ್ನಿಯಲ್ಲಿ ಸಮಿತ್ತನ್ನರ್ಪಿಸುವುದು, ವ್ರತ ಮುಂತಾದುವುಗಳು ವಿಶೇಷವಾಗಿ ಜ್ಯೋತಿಷ್ಟೋಮಾದಿ ಯಾಗಗಳು, ಔಪಾಸನಾದಿಗಳು ಗೃಹಸ್ಥಾಶ್ರಮಿಗಳಿಗೆ ಹೇಳಿದ ಅಗ್ನಿಯಜ್ಞಗಳು,

ಆತ್ಮನ್ಯಾರೋಪಿತಾಗ್ನೀನಾಂ ವನಿನಾಂ ಯತಿನಾಂ ದ್ವಿಜಾಃ ।
ಹಿತಂ ಚ ಮಿತಮೇಧ್ಯಾನ್ನಂ ಸ್ವಕಾಲೇ ಭೋಜನಂ ಹುತಿಃ ॥೪॥

೪ ತಮ್ಮಲ್ಲೇ ಅಗ್ನಿಯನ್ನು ಆರೋಪಿಸಿಕೊಂಡಿರುವ ಅರ್ಥಾತ್ ಅಗ್ನಿ ಸ್ವರೂಪವೆಂದು ತಿಳಿದಿರುವ ವಾನಪ್ರಸ್ಥಾಶ್ರಮಿಗಳು, ಸನ್ಯಾಸಿಗಳಿಗೆ ಉತ್ತಕಾಲದಲ್ಲಿ ಹಿತ, ಮಿತವಾದ, ಪವಿತ್ರವಾದ ಅನ್ನವನ್ನು ಭೋಜನ ಮಾಡುವುದೇ ಅಗ್ನಿಯಜ್ಞವು.

ಔಪಾಸನಾಗ್ನಿಸಂಧಾನಂ ಸಮಾರಭ್ಯ ಸುರಕ್ಷಿತಂ ।
ಕುಂಡೇ ವಾಪ್ಯಥ ಭಾಂಡೇ ವಾ ತದಜಸ್ರಂ ಸಮೀರಿತಂ ॥೫॥

೫ ಗೃಹಸ್ಥನಾದವನು ಔಪಾಸನ ಮತ್ತು ಅಗ್ನಿಹೋತ್ರಗಳನ್ನು ಪ್ರಾರಂಭಿಸಿ ಕುಂಡದಲ್ಲಿಯಾಗಲೀ, ಭಾಂಡದಲ್ಲಿಯಾಗಲೀ ಯಾವಾಗಲೂ ಅಗ್ನಿಯನ್ನು ರಕ್ಷಿಸಬೇಕು.

ಅಗ್ನಿಮಾತ್ಮನ್ಯರಣ್ಯಾಂ ವಾ ರಾಜದೈವವಶಾದ್ಧ್ರುವಂ ।
ಅಗ್ನಿತ್ಯಾಗಭಯಾದುಕ್ತಂ ಸಮಾರೋಪಿತಮುಚ್ಯತೇ ॥೬॥

೬ ಅಕಸ್ಮಾತ್ತಾಗಿ ರಾಜ ಅಥವಾ ದೈವದಿಂದಾಗಲೀ ಅಗ್ನಿನಾಶವಾಗುವಂತಹ ಸಂದರ್ಭ ಉಂಟಾದರೆ ಅಲ್ಲಿರುವ ಅಗ್ನಿಯನ್ನು ತನ್ನಲ್ಲಿ (ಆತ್ಮ ಸ್ವರೂಪದಲ್ಲಿ) ಅಥವಾ ಅಗ್ನಿ ಜನನ ಮಾಡುವ ಅರಣಿ ಎಂದರೆ ಬನ್ನಿ ಮರದ ಕಾಷ್ಠದಲ್ಲಿ ಅಗ್ನಿಯನ್ನು ಆರೋಪಿಸಬೇಕು ಎಂದರೆ ಆ ಅಗ್ನಿಯನ್ನು ಬನ್ನಿಕಾಷ್ಠದಲ್ಲಿ ಅವಾಹಿಸಿಕೊಳ್ಳಬೇಕು.

ಸಂಪತ್ಕರೀ ತಥಾ ಜ್ಞೇಯಾ ಸಾಯಮಗ್ನ್ಯಾಹುತಿರ್ದ್ವಿಜಾಃ ।
ಆಯುಷ್ಕರೀತಿ ವಿಜ್ಞೇಯಾ ಪ್ರಾತಃ ಸೂರ್ಯಾಹುತಿಸ್ತಥಾ ॥೭॥

೭ ಸಾಯಂಕಾಲದಲ್ಲಿ ಅಗ್ನಿಯಲ್ಲಿ ಸಮರ್ಪಿಸಿದ ಆಹುತಿಯು ಸಂಪತ್ತನ್ನುಂಟುಮಾಡುತ್ತದೆ. ಪ್ರಾತಃಕಾಲದಲ್ಲಿ ಅಗ್ನಿಯಲ್ಲಿ ಸೂರ್ಯನಿಗೆ ಅರ್ಪಿಸಿದ ಆಹುತಿಯಿಂದ ಆಯಸ್ಸು ಉಂಟಾಗುತ್ತದೆ.

ಅಗ್ನಿಯಜ್ಞೋ ಹ್ಯಯಂ ಪ್ರೋಕ್ತೋ ದಿವಾ ಸೂರ್ಯನಿವೇಶನಾತ್ ।
ಇಂದ್ರಾದೀನ್ ಸಕಲಾನ್ ದೇವಾನುದ್ದಿಶ್ಯಾಗ್ನೌ ಜುಹೋತಿ ಯತ್ ॥೮॥

೮ ಹಗಲಿನಲ್ಲಿ ಸೂರ್ಯನಿರುವುದರಿಂದ ಅವನನ್ನುದ್ದೇಶಿಸಿ ಅಗ್ನಿಯಲ್ಲಿ

ಹವಿಸ್ಸರ್ಪಿಸಿದರೇ ಅದೇ ಅಗ್ನಿಯಲ್ಲಿ ಇಂದ್ರಾದಿ ದೇವತೆಗಳನ್ನುದ್ದೇಶಿಸಿ (ಎಲ್ಲಾ ಅಗ್ನಿಯಲ್ಲಿ ಹೋಮ ಮಾಡುವುದು.

ವಿ.ವಿ.:- ಈವರೆವಿಗೆ ಹೇಳಿದ ಅಗ್ನಿಯಜ್ಞವು ವಿಶೇಷವಾಗಿ ಬ್ರಾಹ್ಮಣನಿ ಹೇಳಿರುವುದಾಗಿದೆ. ಅಗ್ನಿ ಯಜ್ಞವೆಂದರೆ ಒಟ್ಟಾರೆ ಹೇಳುವುದಾದರೆ ಅಗ್ನಿಯ ಮೂಲಕ ಅಗ್ನಿಯಲ್ಲಿ ನಮ್ಮ ಜೀವನಯಾಪನೆಗೆ ಮುಖ್ಯ ಕಾರಣರಾದ, ಸೂರ್ಯ, ಚಂದ್ರ ಇಂದ್ರಾದಿ ದೇವತೆಗಲಿಗೆ ಅವರ ಉದ್ದೇಶದಿಂದ ಹವಿಸ್ಸನ್ನು ಅರ್ಪಿಸುವುದ ಎಂದಾಗುತ್ತದೆ. ಇದನ್ನೇ 'ದೇವತೋದ್ದೇಶೇನ ದ್ರವ್ಯತ್ಯಾಗಯಜ್ಞಃ' ಎಂದು ಹೇಳಿದ್ದಾರೆ ಯಾವ ದೇವತೆಗೆ ಯಾವ ಹವಿಸ್ಸು ಪ್ರಿಯವೋ ಅದನ್ನು ಆ ದೇವತೆಗೆ ಸೇರಲೆಂದ ಅಗ್ನಿಯ ಮೂಲಕ ದೇವತೆಗೆ ಸಮರ್ಪಿಸುವುದು. ನಮಗೆ ಮತ್ತು ದೇವತೆಗಳಿ 'ಮಧ್ಯಂತರವರ್ತಿಯಾಗಿ' (ಮೀಡಿಯೇಟರ್) ಅಗ್ನಿ. ಉದಾಹರಣೆಗೆ ಹೇಳುವುದಾದರೆ ನಾವ ಯಾರಿಗಾದರೂ ಯಾವ ವಿಚಾರ ತಿಳಿಸಬೇಕಾದರೆ ಅಂಚೆ-ತಂತಿಯ ಮೂಲಕ ವಿಚಾ ವಿನಿಮಯ ಮಾಡುವುದಿಲ್ಲವೇ, ಹಾಗೇ ಅಗ್ನಿಯು ಅಂಚೆ ತಲುಪಿಸುವ ದೇವತೆ. ಮೊದಲಿನಲ್ಲಿ ಕೊನೆಯಲ್ಲಿ (ಹೋಮಗಳಲ್ಲಿ) ಅಗ್ನಿಗೆ ಆರಾಧನೆ ಆಹುತಿ ಅದಕ್ಕಾಗಿಯೇ ನಡೆಯುವುದು. ಕೊನೆಗೆ ಅಗ್ನಿಗೇ ಪ್ರಾರ್ಥನೆ ಸಲ್ಲಿಸುವುದು. "ಯತ್ತೇಅಗ್ನೋ' ಇತ್ಯಾದಿ. ಮಂತ್ರಿಗಳಿಂದ ಇದೇ ರೀತಿ ಕೆಲವು ಸಂಪ್ರದಾಯದಲ್ಲಿ ಈಶಾವಾಸ್ಯೋಪನಿಷತ್ತಿನ ಕೊನೆಯ ಮಂತ್ರವನ್ನು ಪಠಿಸುತ್ತಾರೆ. ಅದೇ "ಅಗ್ನೇ ನಂಯ ಸುಪಥಾರಾಯೇ" ಎಂಬ ಮಂತ್ರ. ಈ ಮಂತ್ರಾರ್ಥವು ಹೀಗೆದೆ. "ಎಲೈ ಅಗ್ನಿಯೇ ಕರ್ಮ ಭೋಗಕ್ಕಾಗಿ ನಮ್ಮನ್ನು ಒಳ್ಳೆಯ ಮಾರ್ಗದಲ್ಲಿ ನಡೆಸು. ಎಲೈ ದೇವನೇ ಎಲ್ಲ ಕರ್ಮಗಳನ್ನು ತಿಳಿದಿರುವವನು ನೀನು ನಮ್ಮ ಕುಟಿಲವಾದ ಪಾಪಗಳನ್ನು ನಾಶಪಡಿಸು. ನಿನಗೆ ಮತ್ತೆ ಮತ್ತೆ ನಮಸ್ಕಾರಗಳನ್ನು ಅರ್ಪಿಸುತ್ತೇನೆ." ಎಂದರೆ ಈ 'ಅಗ್ನಿಯಜ್ಞ'ದಿಂದ ನಾವು ಸನ್ಮಾರ್ಗಗಾಮಿಗಳಾಗಿ ಇಲ್ಲಿ ಈ ಲೋಕದ ಭೋಗಗಳನ್ನು ಅನುಭವಿಸಿ ಕಡೆಗೆ ಮೋಕ್ಷವನ್ನು ಹೊಂದುತ್ತೇವೆಂದು ತಾತ್ಪರ್ಯ. ಇದೇ ವಿಚಾರದಲ್ಲಿ ಶ್ರೀಭಗವದ್ಗೀತೆಯಲ್ಲಿ ಸಹ ಶ್ರೀ ಕೃಷ್ಣನು "ಪರಸ್ಪರಂ ಭಾವಯಂತಃ ಶ್ರೇಯಃ ಪರಮವಾಪ್ಸ್ಯಥ" ಎಂದು ಹೇಳಿದ್ದು. ಎಂದರೆ ನಮಗೆ ಭೂಮಿ, ನೀರು, ಗಾಳಿ, ಆಕಾಶ, ಅಗ್ನಿಗಳನ್ನು ಕರುಣಿಸಿ ನಮ್ಮ ಜೀವನಕ್ಕೆ ಉಪಕರಿಸಿರುವ ದೇವತೆಗಳಿಗೆ ನಮ್ಮ ಕೃತಜ್ಞತೆ ಅರ್ಪಿಸುವುದೇ ಈ ಯಾಗಗಳ ಉದ್ದೇಶ.

**ದೇವಯಜ್ಞಂ ಹಿ ತಂ ವಿದ್ಯಾತ್ ಸ್ಥಾಲಿಪಾಕಾದಿಕಾ ಕ್ರತೂ ।**
**ಚೌಲಾದಿಕಂ ತಥಾ ಜ್ಞೇಯಂ ಲೌಕಿಕಾಗ್ನೌ ಪ್ರತಿಷ್ಠಿತಂ ॥೯॥**

೯ ದೇವಯಜ್ಞವೆನಿಸಿಕೊಳ್ಳುತ್ತದೆ. ಈ ದೇವಯಜ್ಞದಲ್ಲಿ ಸ್ಥಾಲೀಪಾಕ ಮುಂತಾದುವೂ ಸಹ ಸೇರುತ್ತದೆ. ಚೌಲಾದಿಕರ್ಮಗಳನ್ನು ಲೌಕಿಕಾಗ್ನಿಯಲ್ಲಿ ಮಾಡಬೇಕು.

ಬ್ರಹ್ಮಯಜ್ಞಂ ದ್ವಿಜಃ ಕುರ್ಯಾದ್ದೇವಾನಾಂ ತೃಪ್ತಯೇ ಸಕೃತ್ ।
ಬ್ರಹ್ಮಯಜ್ಞ ಇತಿ ಪ್ರೋಕ್ತೋ ವೇದಸ್ಯಾಧ್ಯಯನಂ ಭವೇತ್ ॥೧೦॥

೧೦ ಪ್ರತಿದಿನದಲ್ಲೂ ಒಂದು ಬಾರಿ ದೇವತೆಗಳ ತೃಪ್ತಿಗಾಗಿ ಬ್ರಾಹ್ಮಣನು ಬ್ರಹ್ಮಯಜ್ಞನನ್ನು ಮಾಡಬೇಕು. ವೇದಾಧ್ಯಾಯನಕ್ಕೂ ಬ್ರಹ್ಮಯಜ್ಞವೆಂದು ಹೆಸರು.

ನಿತ್ಯಾನಂತರಮಾಸಾಯಂ ತತಸ್ತು ನ ವಿಧೀಯತೇ ।
ಅನಗ್ನೌ ದೇವಯಜನಂ ಶೃಣುತ ಶ್ರದ್ಧಯಾದರಾತ್ ॥೧೧॥

೧೧ ಹಾಗೆ ವೇದಾಧ್ಯಯನವನ್ನು ಸಾಯಂಕಾಲದವರೆವಿಗೆ ಮಾಡಬೇಕು. ಸಾಯಂಕಾಲಾ ನಂತರ ವೇದಾಧ್ಯಯನವನ್ನು ಮಾಡಬಾರದು. ಅಗ್ನಿಯಲ್ಲಲ್ಲದೇ ಬೇರೆಯಾಗಿ ಮಾಡುವ ದೇವ ಪೂಜೆಯನ್ನು ಹೇಳುವೆನು. ಶ್ರದ್ಧೆಯಿಂದ ಅದನ್ನು ಕೇಳರಿ.

ಆದಿಸೃಷ್ಟೌ ಮಹಾದೇವಃ ಸರ್ವಜ್ಞಃ ಕರುಣಾಕರಃ ।
ಸರ್ವಲೋಕೋಪಕಾರಾರ್ಥಂ ವಾರಾನ್ ಕಲ್ಪಿತವಾನ್ ಪ್ರಭುಃ ॥೧೨॥

೧೨ ಸರ್ವಜ್ಞನೂ, ದಯಾಶಾಲಿಯೂ ಆದ ಮಹಾದೇವನು ಸೃಷ್ಟಿಯ ಆದಿಯಲ್ಲಿ ಲೋಕಕ್ಕೆ ಉಪಕಾರ ಮಾಡುವ ದೃಷ್ಟಿಯಿಂದ ವಾರಗಳನ್ನು ಸೃಷ್ಟಿಸಿದನು.

ಸಂಸಾರವೈದ್ಯಃ ಸರ್ವಜ್ಞಃ ಸರ್ವಭೇಷಜಭೇಷಜಂ ।
ಆದಾವಾರೋಗ್ಯದಂ ವಾರಂ ಸ್ವವಾರಂ ಕೃತವಾನ್ ಪ್ರಭುಃ ॥೧೩॥

೧೩ ಸಂಸಾರ (ರೋಗವನ್ನು) ಬಂಧವನ್ನು ಹೋಗಲಾಡಿಸುವ ಮಹಾವೈದ್ಯನೂ, ಸರ್ವಜ್ಞನೂ, ಆದ ಪರಮೇಶ್ವರನು 'ಸಕಲ ಔಷಧಿಗಳಿಗೂ ಔಷಧಿಯಾದುದೂ' ಆದ 'ಆರೋಗ್ಯಪ್ರದವಾದ ಭಾನುವಾರ'ವನ್ನು ಮಾಡಿದನು.

ಸಂಪತ್ಕರಂ ಸ್ವಮಾಯಾಯಾ ವಾರಂ ಚ ಕೃತವಾಂಸ್ತತಃ ।
ಜನನೇ ದುರ್ಗತಿಕ್ರಾಂತೇ ಕುಮಾರಸ್ಯ ತತಃ ಪರಂ ॥೧೪॥

೧೪ ಆಮೇಲೆ 'ಸಂಪತ್ಕರವೂ ಸೃಷ್ಟಿಗನುಕುಲವೂ ಆದ, ಸೋಮವಾರ'ವನ್ನು ತನ್ನ ಮಾಯೆಯಿಂದ ಸೃಷ್ಟಿಸಿದನು. ಬಳಿಕ 'ಆಲಸ್ಯ, ಪಾಪಗಳನ್ನು ಹೋಗಲಾಡಿಸುವಂತಹ ಷಣ್ಮ್ಮೆಜನ ವಾರ'ವನ್ನು ಎಂದರೆ ಮಂಗಳವಾದವನ್ನು ಸೃಷ್ಟಿಸಿದನು.

ಆಲಸ್ಯದುರಿತಕ್ರಾಂತ್ಯೈ ವಾರಂ ಕಲ್ಪಿತವಾನ್ ಪ್ರಭುಃ ।
ರಕ್ಷಕಸ್ಯ ತಥಾ ವಿಷ್ಣೋರ್ಲೋಕಾನಾಂ ಹಿತಕಾಮ್ಯಯಾ ॥೧೫॥

೧೫ ನಂತರ 'ಜಗತ್ತನ್ನು ರಕ್ಷಿಸುವ ಹಾಗೂ ಲೋಕಹಿತಕ್ಕಾಗಿ' ವಿಷ್ಣು ಸಂಬಂಧವಾದ (ಬುಧವಾರವನ್ನು) ಕಲ್ಪಿಸಿದನು.

ಪುಷ್ಟ್ಯರ್ಥಂ ಚೈವ ರಕ್ಷಾರ್ಥಂ ವಾರಂ ಕಲ್ಪಿತವಾನ್ ಪ್ರಭುಃ ।
ಆಯುಷ್ಕರಂ ತತೋ ವಾರಮಾಯುಷಾಂ ಕರ್ತುರೇವ ಚ ॥೧೬॥

೧೬ ಈ ವಾರವನ್ನು ಲೋಕದ ಸೃಷ್ಟಿ, ರಕ್ಷೆಗಾಗಿ ಉಂಟುಮಾಡಿದನು. ಹಾಗೆಯೇ ಆಯಸ್ಸನ್ನು,

ತ್ರೈಲೋಕ್ಯಸೃಷ್ಟಿಕರ್ತುರ್ಹಿ ಬ್ರಹ್ಮಣಃ ಪರಮೇಷ್ಠಿನಃ ।
ಜಗದಾಯುಷ್ಯಸಿದ್ಧ್ಯರ್ಥಂ ವಾರಂ ಕಲ್ಪಿತವಾನ್ ಪ್ರಭುಃ ॥೧೭॥

೧೭ ಉಂಟು ಮಾಡುವವನೂ, ಆದ, ಮೂರು ಲೋಕಗಳನ್ನು ಸೃಷ್ಟಿಸುವಂತಹ ಪರಮೇಷ್ಠಿಯಾದ ಬ್ರಹ್ಮನ ವಾರವಾದ ಗುರುವಾರವನ್ನು ಜಗತ್ತಿನ ಆಯಸ್ಸು ಸಿದ್ಧಿಸಲು ಕಲ್ಪಿಸದನು.

ಆದೌ ತ್ರೈಲೋಕ್ಯವೃದ್ಧ್ಯರ್ಥಂ ಪುಣ್ಯಪಾಪೇ ಪ್ರಕಲ್ಪಿತೇ ।
ತಯೋಃ ಕರ್ತ್ರೋಸ್ತತೋ ವಾರಮಿಂದ್ರಸ್ಯ ಚ ಯಮಸ್ಯ ಚ ॥೧೮॥

೧೮ ಸೃಷ್ಟ್ಯಾದಿಯಲ್ಲಿ ತ್ರೈಲೋಕ್ಯದ ಅಭಿವೃದ್ಧಿಗಾಗಿ ಪುಣ್ಯ, ಪಾಪಗಳು ಕಲ್ಪಿಸಲ್ಪಟ್ಟವು. ಅಂತಹ ಪುಣ್ಯ, ಪಾಪಗಳಿಗೆ ಕರ್ತೃಗಳಾದ ಇಂದ್ರ, ಯಮರ ವಾರಗಳಾದ ಅಂದರೆ ಶುಕ್ರ, ಶನಿವಾರಗಳನ್ನು ಸೃಷ್ಟಿಸಿದನು.

ಭೋಗಪ್ರದಂ ಮೃತ್ಯುಹರಂ ಲೋಕಾನಾಂ ಚ ಪ್ರಕಲ್ಪಿತಂ ।
ಆದಿತ್ಯಾದೀನ್ ಸ್ವಸ್ವರೂಪಾನ್ ಸುಖದುಃಖಸ್ಯ ಸೂಚಕಾನ್ ॥೧೯॥

೧೯ ಅನಂತರ ಶಿವನು ತನ್ನ ಸ್ವರೂಪರಾದಂತಹ ಆದಿತ್ಯನೇ ಮೊದಲಾದವರನ್ನು ಜನಗಳ ಸುಖದುಃಖಗಳನ್ನು ಸೂಚಿಸುವ, ಭೋಗಗಳನ್ನು ಕೊಡುವಂತಹ, ಮೃತ್ಯುಹರರಾದಂತಹವರನ್ನಾಗಿ,

**ವಾರೇಶಾನ್ ಕಲ್ಪಯಿತ್ವಾದೌ ಜ್ಯೋತಿಶ್ಚಕ್ರೇ ಪ್ರತಿಷ್ಠಿತಾನ್ ।**
**ಸ್ವಸ್ವವಾರೇ ತು ತೇಷಾಂ ತು ಪೂಜಾ ಸ್ವಸ್ವಫಲಪ್ರದಾ ॥೨೦॥**

೨೦ ಸೃಷ್ಟಿಸಿ ವಾರೇಶರನ್ನಾಗಿ ಮಾಡಿ ಗ್ರಹಮಂಡಲದಲ್ಲಿ ಇರುವಂತೆ ಮಾಡಿದನು. ಅವರವರ ವಾರಗಳಲ್ಲಿ ಅವರವರನ್ನು ಪೂಜಿಸಿದರೆ ಆಯಾಗ್ರಹಗಳಿಂದ ಉಂಟಾಗುವ ಫಲವು ದೊರಕುವುದು.

**ಆರೋಗ್ಯಂ ಸಂಪದಶ್ಚೈವ ವ್ಯಾಧೀನಾಂ ಶಾಂತಿರೇವ ಚ ।**
**ಪುಷ್ಟಿರಾಯುಸ್ತಥಾ ಭೋಗೋ ಮೃತೇರ್ಹಾನಿರ್ಯಥಾಕ್ರಮಂ ॥೨೧॥**

೨೧ ಆದಿತ್ಯಾದಿ ಗ್ರಹಗಳು ಕ್ರಮವಾಗಿ ಆರೋಗ್ಯ, ಸಂಪತ್ತು, ರೋಗನಿವೃತ್ತಿ, ಪುಷ್ಟಿ (ದೇಹಪುಷ್ಟಿ) ಆಯಸ್ಸು, ಭೋಗ, ಮೃತ್ಯುನಾಶ ಎಂಬ ಏಳು ಫಲಗಳನ್ನು ಏಳು ವಾರಾಧಿಪತಿಗಳು ನೀಡುವರು.

**ವಾರಕ್ರಮಫಲಂ ಪ್ರಾಹುರ್ದೇವಪ್ರೀತಿಪುರಸ್ಸರಂ ।**
**ಅನ್ಯೇಷಾಮಪಿ ದೇವಾನಾಂ ಪೂಜಾಯಾಃ ಫಲದಃ ಶಿವಃ ॥೨೨॥**

೨೨ ಈ ರೀತಿಯಾಗಿ ವಾರಗಳಿಗೆ ಕ್ರಮವಾಗಿ ಫಲವನ್ನು ಹೇಳಿದ್ದಾರೆ. ಆಯಾ ದೇವ ಪ್ರೀತಿಗಾಗಿ ಆಯ ದಿನಗಳಲ್ಲಿ ಪೂಜಿಸಬೇಕು. ಎಲ್ಲಾ ದೇವತೆಗಳ ಪೂಜೆಗೆ ಫಲವನ್ನು ಶಿವನೇ ಅನುಗ್ರಹಿಸುವನು.

**ದೇವಾನಾಂ ಪ್ರೀತಯೇ ಪೂಜಾ ಪಂಚಧೈವ ಪ್ರಕಲ್ಪಿತಾ ।**
**ತತ್ತನ್ಮಂತ್ರಜಪೋ ದಾನಂ ಹೋಮಶ್ಚೈವ ತಪಸ್ತಥಾ ॥೨೩॥**

೨೩ ದೇವತಾ ಪ್ರೀತ್ಯರ್ಥವಾಗ ಮಾಡುವ ಪೂಜೆಯು ಐದು ವಿಧವಾಗಿ ಮಾಡಲ್ಪಟ್ಟಿರುವುದು. ಆಯಾದೇವತೆಗಳ ಮಂತ್ರ ಜಪ, ದಾನ, ಹೋಮ, ತಪಸ್ಸು,

**ಸ್ಥಂಡಿಲೇ ಪ್ರತಿಮಾಯಾಂ ಚ ಹ್ಯಗ್ನೌ ಬ್ರಾಹ್ಮಣವಿಗ್ರಹೇ |**
**ಸಮಾರಾಧನಮಿತ್ಯೇವಂ ಷೋಡಶೈರುಪಚಾರಕೈಃ ||೨೪||**

೨೪ ಸ್ಥಂಡಿಲ, ವಿಗ್ರಹ, ಅಗ್ನಿ, ಬ್ರಾಹ್ಮಣನಲ್ಲಿ ಮಾಡುವ ಹದಿನಾ ಉಪಚಾರಗಳಿಂದ ದೇವತೆಯನ್ನು ತೃಪ್ತಿಪಡಿಸುವುದೇ ಪೂಜೆಯಾಗಿದೆ.

**ಉತ್ತರೋತ್ತರವೈಶಿಷ್ಟ್ಯಾತ್ಪೂರ್ವಾಭಾವೇ ತಥೋತ್ತರಂ |**
**ನೇತ್ರಯೋಃ ಶಿರಸೋ ರೋಗೇ ತಥಾ ಕುಷ್ಠಸ್ಯ ಶಾಂತಯೇ ||೨೫||**

೨೫ ಈ ಮೇಲೆ ಹೇಳಿದ ಐದು ವಿಧವಾದ ಪೂಜೆಗಳು ಮೊದಲಿನದಕ್ಕಿಂ ಮುಂದಿನದು ಹೀಗೆ ಕೊನೆಯವರೆವಿಗೆ ಶ್ರೇಷ್ಠಗಳಾಗುವುವು (ಹಿಂದಿನದಕ್ಕಿಂತ ಮುಂದಿನ ಎಂದರ್ಥ) ಕಣ್ಣಿನ ರೋಗ, ಶಿರಸ್ಸಿನ ರೋಗ, ಹಾಗೇ ಕುಷ್ಠರೋಗ ನಾಶವಾಗಲು,

**ಆದಿತ್ಯಂ ಪೂಜಯಿತ್ವಾ ತು ಬ್ರಾಹ್ಮಣಾನ್ ಭೋಜಯೇತ್ತತಃ |**
**ದಿನಂ ಮಾಸಂ ತಥಾ ವರ್ಷಂ ವರ್ಷತ್ರಯಮಥಾಪಿ ವಾ ||೨೬||**

೨೬ ಸೂರ್ಯನನ್ನು ಪೂಜಿಸಿ ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು. ಒಂ ದಿನ, ಒಂದು ತಿಂಗಳು ಹಾಗೇ ಒಂದು ವರ್ಷ, ಮೂರು ವರ್ಷವಾಗಲೀ,

**ಪ್ರಾರಬ್ಧಂ ಪ್ರಬಲಂ ಚೇತ್ಸ್ಯಾನ್ನಶ್ಯೇದ್ರೋಗಜರಾದಿಕಂ |**
**ಜಪಾದ್ಯಮಿಷ್ಟದೇವಸ್ಯ ವಾರಾದೀನಾಂ ಫಲಂ ವಿದುಃ ||೨೭||**

೨೭ ಪ್ರಾರಬ್ಧ ಕರ್ಮವು ಪ್ರಬಲವಾಗಿದ್ದರೆ ಅದಕ್ಕೆ ತಕ್ಕಂತೆ ಸೂರ್ಯನನ ಪೂಜಿಸಿದರೆ ರೋಗ (ಮುಪ್ಪು) ಮೊದಲಾದುವು ನಾಶವಾಗುವುದು. ಇಷ್ಟದೇವತೆಗ ಜಪ ಮುಂತಾದುವುಗಳನ್ನು ಆಯಾ ವಾರಗಳಲ್ಲಿ ಮಾಡಿದರೆ ಆಯಾ ವಾರದ ಹಿಂ ಹೇಳಿದ ಫಲಗಳು ಲಭ್ಯವಾಗುವುದು.

**ಪಾಪಶಾಂತಿರ್ವಿಶೇಷೇಣ ಹ್ಯಾದಿವಾರೋ ನಿವೇದಯೇತ್ |**
**ಆದಿತ್ಯಸ್ಯೈವ ದೇವಾನಾಂ ಬ್ರಾಹ್ಮಣಾನಾಂ ವಿಶಿಷ್ಟದಂ ||೨೮||**

೨೮ ಮೊದಲನೆಯದಾದ ಭಾನುವಾರವೇ ವಿಶೇಷವಾಗಿ ಪಾಪ ಶಾಂತಿಯನ್ನುಂಟುಮಾಡುವುದು. ಈ ಭಾನುವಾರವೇ ದೇವತೆಗಳಿಗೂ, ಬ್ರಾಹ್ಮಣರಿಗೂ

ವಿಶೇಷವಾಗಿ ಪ್ರಶಸ್ತವಾಗಿದೆ.

ವಿ.ವಿ.:- ಭಾನುವಾರಕ್ಕೆ ಸೂರ್ಯನು ಅಧಿಪತಿಯು. ಆಯಾ ವಾರಕ್ಕೆ ಅವರವರೇ ಅಧಿಪತಿಗಳು. ಈ ವ್ಯವಸ್ಥೆಯು ಹೇಗೆಂದರೆ, ಜ್ಯೋತಿಶ್ಶಾಸ್ತ್ರಪ್ರಕಾರವಾಗಿ ಹೇಳುವುದಾದರೆ, 'ಕಾಲಹೋರೆ'ಯಿಂದ ಅಂದರೆ ಸೂರ್ಯೋದಯ ಕಾಲದಲ್ಲಿ ಬರುವ ಗ್ರಹದ ಹೊರೆಯೇ ಆಯಾದಿನಗಳಿಗೆ ಅಧಿಪತ್ಯವನ್ನು ಸೂಚಿಸುತ್ತದೆ. ಅದು ಈ ರೀತಿ ಇದೆ

'ಅರ್ಕಶುಕ್ರಬುಧಶ್ಚಂದ್ರಮಂದೋ ಜೀವಧರಾಸುತಾಃ

ವಾರೇಶಾತ್ಷಂಚಮೊದೂರ್ಧ್ವಂಕ್ರಮಂಕ್ಷಷ್ಠಂಪುನಃ ಪುನಃ'

ಎಂಬ ಶ್ಲೋಕದ ಆಧಾರದಂತೆ ಸೂರ್ಯ, ಶುಕ್ರ, ಬುಧ, ಚಂದ್ರ, ಶನಿ, ಗುರು, ಮಂಗಳ ಗ್ರಹಗಳ ಕಾಲಹೊರೆಯು ಈ ಮೇಲಿನ ಅನುಕ್ರಮಣಿಕೆಯಂತೆ ಬರುತ್ತದೆ. ಅದು ಆಯಾ ವಾರಗಳಲ್ಲಿ ಉದಯ ಕಾಲದಲ್ಲಿ ಆಯಾ ಗ್ರಹಗಳ ಹೊರೆಗಳೇ ಬರುತ್ತದೆ. ವಾರೇಶನಿಂದ ಕ್ರಮವಾಗಿ (ಅಂದರೆ ಸೂರ್ಯ ಚಂದ್ರ, ಕುಜ, ಈ ಲೆಕ್ಕದಂತೆ) ಆರನೇ ಹೊರೆಗಳು ಅಲ್ಲಿಂದ ಆರನೇ ಹೊರೆ ಈ ಕ್ರಮವಾಗಿ ಕಾಲಹೊರೆಗಳಾಗುತ್ತವೆ.

**ಸೋಮವಾರೇ ಚ ಲಕ್ಷ್ಮ್ಯಾದೀನ್ ಸಂಪದರ್ಥಂ ಯಜೇದ್ಬುಧಃ |**
**ಆಜ್ಯಾನ್ನೇನ ತಥಾ ವಿಪ್ರಾನ್ ಸಪತ್ನೀಕಾಂಶ್ಚ ಭೋಜಯೇತ್ ||೨೯||**

೨೯ ಬುದ್ಧಿವಂತನಾದವನು ಸೋಮವಾರದಲ್ಲಿ ಸಂಪದಭಿವೃದ್ಧಿಗಾಗಿ ಲಕ್ಷ್ಮೀ ಮೊದಲಾದ ದೇವತೆಗಳನ್ನು ಪೂಜಿಸಬೇಕು ಮತ್ತು ತುಪ್ಪದ ಅನ್ನದಿಂದ ಬ್ರಾಹ್ಮಣ ದಂಪತಿಗಳನ್ನು ಭೋಜನ ಮಾಡಿಸಬೇಕು.

ವಿ.ವಿ.:- ಸ್ಕಾಂದಪುರಾಣದಲ್ಲಿ ಸೂರ್ಯನು-ಈಶ್ವರನ, ಚಂದ್ರನು-ಗೌರಿಯ, ಕುಜನು-ಸ್ಕಂದನ, ಬುಧನು-ವಿಷ್ಣುವಿನ, ಗುರುವು-ಬ್ರಹ್ಮನ, ಶುಕ್ರನು-ಇಂದ್ರನ, ಶನಿಯು-ಯಮನ, ರಾಹುವು-ಕಾಲನ, ಕೇತುವು-ಮೃತ್ಯವಿನ ಅಂಶವೆಂದು ಹೇಳಲ್ಪಟ್ಟಿದೆ. ಆದ್ದರಿಂದ ಸೋಮವಾರ ಲಕ್ಷ್ಮೀ, ಗೌರಿ, ಸರಸ್ವತಿ ಇತ್ಯಾದಿ ದೇವತೆಗಳನ್ನು ಪೂಜಿಸಬೇಕೆಂದು ಹೇಳಿದ್ದಾರೆ. ಈಶ್ವರಂಭಾಸ್ಕರವಿಂದ್ಯಾತ್ ಉಮಾಚ್ಯೈವ ನಿಶಾಕರಂ, ಸ್ಕಂದ ಮಂಗಾರಕಂ ಜ್ಞೇಯಂ ಬುಧಂ ನಾರಾಯಣ ತಥಾ, ಇತ್ಯಾದಿ

ಕೊನೆಯಲ್ಲಿ 'ದೇವತಾಗ್ರಹರೂಪೇಣ ದರ್ಶಯಂತಿ ಶುಭಾ ಶುಭಂ' ಎಂದಿದೆ. ಎಂದರೆ ಈಶ್ವರನೇ ಮೊದಲಾದ ದೇವತೆಗಳೇ ಗ್ರಹಗಳ ರೂಪದಿಂದ ಶುಭಾರಂಭಗಳನ್ನು ಅನುಗ್ರಹಿಸುವುದು ಎಂದು ಅಭಿಪ್ರಾಯ.

**ಕಾಲ್ಯಾದೀನ್ ಭೌಮವಾರೇ ತು ಯಿಜೇದ್ರೋಗಪ್ರಶಾಂತಯೇ ।**
**ಮಾಷಮುದ್ಗಾಢಕಾನ್ನೇನ ಬ್ರಾಹ್ಮಣಾಂಶ್ಚೈವ ಭೋಜಯೇತ್ ॥೩೦॥**

೩೦ ಕಾಳ್ಯಾದಿ ದೇವತೆಗಳನ್ನು ರೋಗನಾಶಕ್ಕಾಗಿ ಮಂಗಳವಾರದಲ್ಲಿ ಪೂಜಿಸಬೇಕ ಉದ್ದು, ಹೆಸರು, ತೊಗರಿಯಿಂದ ಕೂಡಿದ ಅನ್ನವನ್ನು ತಯಾರಿಸಿ ಆ ದೇವ ಪ್ರೀತ್ಯರ್ಥವಾಗಿ ಬ್ರಾಹ್ಮಣ ಭೋಜನ ಮಾಡಿಸಬೇಕು. (ಉದ್ದಿನಸಲ್ಲಿ, ಪೊಂಗಲ ಬಿಸಿಬೇಳೆಭಾತ್ ಇತ್ಯಾದಿ ಅನ್ನಗಳು).

**ಸೌಮ್ಯವಾರೇ ತಥಾ ವಿಷ್ಣುಂ ದಧ್ಯನ್ನೇನ ಯಿಜೇದ್ಬುಧಃ ।**
**ಪುತ್ರಮಿತ್ರಕಲತ್ರಾದಿಪುಷ್ಟಿರ್ಭವತಿ ಸರ್ವದಾ ॥೩೧॥**

೩೧ ಬುಧವಾರದಲ್ಲಿ ಮೊಸರನ್ನದಿಂದ ವಿಷ್ಣುವನ್ನು ಮಕ್ಕಳು, ಸ್ನೇಹಿತರು, ಹೆಂಡ ಇವರುಗಳ ದೇಹ ಪುಷ್ಟಿಗಾಗಿ ಪೂಜಿಸಬೇಕು (ಹಿಂದಿನ ವಿ.ಸೂ. ಗಮನಿಸಿ).

**ಆಯುಷ್ಕಾಮೋ ಗುರುವಾರೇ ದೇವಾನಾಂ ಪುಷ್ಟಿಸಿದ್ಧಯೇ ।**
**ಉಪವಿತೇನ ವಸ್ತ್ರೇಣ ಕ್ಷೀರಾಜ್ಯೇನ ಯಜೇದ್ಬುಧಃ ॥೩೨॥**

೩೨ ಗುರುವಾರದಂದು ದೇವತೆಗಳನ್ನು ಆಯುಸ್ಸನ್ನು ಬಯಸುವವನ ದೇಹಪುಷ್ಟಿಯನ್ನು ಬಯಸುವವನು, ಉಪವೀತ, ವಸ್ತ್ರ, ಹಾಲು, ತುಪ್ಪಗಳಿಂದ ಪೂಜಿಸಬೇಕು.

ವಿ.ವಿ.:- ಜೋತಿಶ್ಯಾಸ್ತ್ರದಲ್ಲಿ ಸಹ 'ಗುರುಣಾದೇಹಪುಷ್ಟಿಶ್ಚ' ಎಂದು ಹೇಳಿದ್ದಾರೆ. ಅಂದರೆ ಗುರುವಿನಿಂದ ದೇಹಪುಷ್ಟಿಯೆಂದು ಗುರುಗ್ರಹ ಚೆನ್ನಾಗಿದ್ದರೆ ದೇಹಪುಷ್ಟಿ ಇರುತ್ತದೆ ಎಂದರ್ಥ.

**ಭೋಗಾರ್ಥಂ ಭೃಗುವಾರೇ ತು ಯಜೇದ್ದೇವಾನ್ ಸಮಾಹಿತಃ ।**
**ಷಡ್ರಸೋಪೇತಮನ್ನಂ ಚ ದದ್ಯಾದ್ಬ್ರಾಹ್ಮಣತೃಪ್ತಯೇ ॥೩೩॥**

೩೩ ಸಕಲ ಭೋಗ-ಭಾಗ್ಯಗಳನ್ನು ಬಯಸುವವರು ಶುಕ್ರವಾರದಲ್ಲಿ ದೇವತೆಗಳನ್ನು ಷಡ್ರಸೋಪೇತವಾದ ಮೃಷ್ಟಾನ್ನಗಳಿಂದ ಪೂಜಿಸಿ ಬ್ರಾಹ್ಮಣ ಭೋಜನ ಮಾಡಿಸಬೇಕು.

**ಸ್ತ್ರೀಣಾಂ ಚ ತೃಪ್ತಯೇ ತದ್ವದ್ದೇಯಂ ವಸ್ತ್ರಾದಿಕಂ ಶುಭಂ ।**
**ಅಪಮೃತ್ಯುಹರೇ ಮಂದೇ ರುದ್ರಾದೀಂಶ್ಚ ಯಜೇದ್ಬುಧಃ ॥೩೪॥**

೩೪ ಹಾಗೆಯೇ ಸ್ತ್ರೀಯರಿಗೂ ವಸ್ತ್ರಾದಿಗಳನ್ನು ಅಂದರೆ ಮಂಗಳ ದ್ರವ್ಯಮುಂತಾದುವನ್ನು ಕೊಟ್ಟು ತೃಪ್ತಿಪಡಿಸಬೇಕು. ಶನಿವಾರದಲ್ಲಿ ಅಪಮೃತ್ಯು ಪರಿಹಾರಕ್ಕಾಗಿ (ಅಕಾಲಮೃತ್ಯು) ರುದ್ರಾದಿಗಳನ್ನು ಪೂಜಿಸಬೇಕು.

**ತಿಲಹೋಮೇನ ದಾನೇನ ತಿಲಾನ್ನೇನ ಚ ಭೋಜಯೇತ್ ।**
**ಇತ್ಥಂ ಯಜೇಚ್ಚ ವಿಬುಧಾನಾರೋಗ್ಯಾದಿಫಲಂ ಲಭೇತ್ ॥೩೫॥**

೩೫ ಶನಿವಾರದಲ್ಲಿ ಎಳ್ಳಿನ ಹೋಮದಿಂದಲೂ, ಎಳ್ಳಿನ ದಾನದಿಂದಲೂ, ರುದ್ರ ಮೊದಲಾದ ದೇವತೆಗಳನ್ನು ತೃಪ್ತಿಪಡಿಸಬೇಕು. ಎಳ್ಳನ್ನದಿಂದ ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು. ಈ ರೀತಿಯಾಗಿ ಆಯಾ ದಿನಗಳಲ್ಲಿ ಆಯಾ ದೇವತೆಗಳನ್ನು ಪೂಜಿಸಿದರೆ ಆರೋಗ್ಯಾದಿ ಫಲಗಳು ದೊರಕುವುವು.

ವಿ.ವಿ.:- ಶುಕ್ರನಿಂದ ಭೋಗಭಾಗ್ಯಗಳು ದೊರಕುವುವು. ಭೋಗಭಾಗ್ಯಕಾರಕನು ಶುಕ್ರನು, ಜ್ಯೋತಿಶ್ಯಾಸ್ತ್ರ ಪ್ರಕಾರ ಸ್ತ್ರೀಗ್ರಹ ಶುಕ್ರ, ಸ್ತ್ರೀಯರ ಸಂಬಂಧವಾದ ಫಲವಿಶೇಷಗಳನ್ನು ನೀಡುವವನು. ಸ್ತ್ರೀಯರನ್ನು ತೃಪ್ತಿಪಡಿಸುವುದರಿಂದ ಶುಕ್ರಗ್ರಹ ತೃಪ್ತಿಯಾಗಿ ಉತ್ತಮ ಫಲ ನೀಡುವನು. ಷಡ್ರಸಗಳು ಯಾವುವೆಂದರೆ, ಸಿಹಿ, ಕಹಿ, ಉಪ್ಪು, ಹುಳಿ, ಖಾರ, ಒಗರು. ಈ ರಸಗಳಿಂದ ಕೂಡಿದ ಅನ್ನ ಭಕ್ಷಗಳು ದೇವತೆಗಳಿಗೆ ವಿಶೇಷವಾಗಿ ಶುಕ್ರಗ್ರಹಕ್ಕೆ ಪ್ರೀತಿಯಾದವು. ಆದುದರಿಂದ ಷಡ್ರಸಗಳಿಂದ ಕೂಡಿದ ಪದಾರ್ಥಗಳನ್ನು ದೇವರಿಗೆ ಅರ್ಪಿಸುವುದು, ಬ್ರಾಹ್ಮಣ ಭೋಜನ ಇವು ಮಂಗಳಪ್ರದ. ಶನಿವಾರ ವಿಶೇಷವೂ ಹಾಗೆಯೇ ಶನಿಗೆ ಕಪ್ಪು ಬಣ್ಣ, ತಿಲದ್ರವ್ಯ ವಿಶೇಷ ಇದನ್ನು ನೈವೇದ್ಯ ಮತ್ತು ದಾನದಿಂದ ಶನಿಗ್ರಹ ತೃಪ್ತಿ ಹೊಂದುವುದು. ಆದ್ದರಿಂದಲೇ ಶೈವಾಗಮದಲ್ಲಿ ಸಹ ಮಾಸ ಪೂಜಾ ವಿಧಿಯ ಶ್ರಾವಣ ಮಾಸ ಪೂಜಾವಿಧಿಯಲ್ಲಿ ತಿಲ ಪೂಜೆಗೆ ಪ್ರಾಶಸ್ತ್ಯ ನೀಡಿದ್ದಾರೆ. ತಿಲದಾನದಿಂದ ಪಾಪನಾಶವಾಗುತ್ತದೆ. ಸಂಸ್ಕೃತದಲ್ಲಿ ಬಿಳಿ ಬಣ್ಣವು ಶುಬ, ಕಪ್ಪು ಅಶುಭ. ಅಂದರೆ ಕಪ್ಪಾದ ಎಳ್ಳಿನ ದಾನದಿಂದ ಪಾಪ, ಅಶುಭ ನಿವಾರಣೆ ಆಗುವುದು.

**ದೇವಾನಾಂ ನಿತ್ಯಯಜನೇ ವಿಶೇಷಯಜನೇಽಪಿ ಚ ।**
**ಸ್ನಾನೇ ದಾನೇ ಜಪೇ ಹೋಮೇ ಬ್ರಾಹ್ಮಣಾನಾಂ ಚ ತರ್ಪಣೇ ॥೩೬॥**

೩೬ ದೇವತೆಗಳಿಗೆ ಮಾಡುವ ನಿತ್ಯ ಪೂಜೆ, ವಿಶೇಷವಾದ ಪೂಜೆಗಳು ಅಂದರೆ ನವರಾತ್ರಿ ಪೂಜೆ, ಇತ್ಯಾದಿಗಳು ಮತ್ತು ವಿಶೇಷ ತೀರ್ಥಸ್ನಾನ, ದಾನ, ಜಪ, ಹೋಮ, ಬ್ರಾಹ್ಮಣ ಸಂತರ್ಪಣೆ,

**ಆದಿವಾರಾದಿವಾರೇಷು ಸರ್ವಜ್ಞೋ ಜಗದೀಶ್ವರಃ ।**
**ತಿಥಿನಕ್ಷತ್ರಯೋಗೇ ಚ ತತ್ತದ್ದೇವಪ್ರಪೂಜನೇ ॥೩೭॥**

೩೭ ಭಾನುವಾರವೇ ಮೊದಲಾದ ವಾರಪೂಜೆ, ತಿಥಿಗಳ, ನಕ್ಷತ್ರಗಳ ಯೋಗಯುಕ್ತವಾದ ದಿನಗಳಲ್ಲಿ ಪೂಜೆ ಮಾಡುವಿಕೆ ಇವೆಲ್ಲದಕ್ಕೂ ಸರ್ವಜ್ಞನಾದ ಪರಮೇಶ್ವರನೇ,

**ತತ್ತದ್ರೂಪೇಣ ಸರ್ವೇಷಾಮಾರೋಗ್ಯಾದಿಫಲಪ್ರದಃ ।**
**ದೇಶಕಾಲಾನುಸಾರೇಣ ತಥಾ ಪಾತ್ರಾನುಸಾರತಃ ॥೩೮॥**

೩೮ ಆಯಾ ದೇವತಾ ಸ್ವರೂಪದಿಂದ ಎಲ್ಲರಿಗೂ ಆಯುರಾರೋಗ್ಯಾದಿ ಫಲಗಳನ್ನು ಕೊಡುವನು. ಆಯಾ ಪ್ರದೇಶ, ಕಾಲ, ಅವರವರ ಸೇವಾಯೋಗ್ಯತೆಗೆ ತಕ್ಕಂತೆ,

**ದ್ರವ್ಯಂಶ್ರದ್ಧಾನುಸಾರೇಣ ತಥಾ ಲೋಕಾನುಸಾರತಃ ।**
**ತಾರತಮ್ಯಕ್ರಮಾದ್ದೇವಸ್ತ್ವಾರೋಗ್ಯಾದೀನ್ ಪ್ರಯಚ್ಛತಿ ॥೩೯॥**

೩೯ ಮತ್ತು ದ್ರವ್ಯ, ಶ್ರದ್ಧೆಗನುಸಾರವಾಗಿ ತಾರತಮ್ಯದಿಂದ ಅಂದರೆ ಅವರವರ ಕರ್ಮಶ್ರದ್ಧೆಗೆ ತಕ್ಕಂತೆ ಆರೋಗ್ಯಾದಿಗಳನ್ನು ಶಿವನು ಅನುಗ್ರಹಿಸುವನು.

**ಶುಭಾದಾವಶುಭಾಂತೇ ಚ ಜನ್ಮರ್ಕ್ಷೇಷು ಗೃಹೇ ಗೃಹೀ ।**
**ಆರೋಗ್ಯಾದಿಸಮೃದ್ಧ್ಯರ್ಥಮಾದಿತ್ಯಾದೀನ್ ಗ್ರಹಾನ್ ಯಜೇತ್ ॥೪೦॥**

೪೦ ಶುಭ ಕರ್ಮಗಳಲ್ಲಿ ಮೊದಲು, ಅಶುಭ ಕರ್ಮದ ಕೊನೆಯಲ್ಲಿ, ಜನ್ಮನಕ್ಷತ್ರಗಳಲ್ಲಿ ಗೃಹಸ್ಥನಾದವನು ಮನೆಯಲ್ಲಿ ಆರೋಗ್ಯಾದಿ ಸಮೃದ್ಧಿಗೋಸ್ಕರ ಸೂರ್ಯನೇ ಮೊದಲಾದ ಗ್ರಹಗಳನ್ನು ಪೂಜಿಸಬೇಕು.

ವಿ.ವಿ.:- ಜನ್ಮ ನಕ್ಷತ್ರಗಳಲ್ಲಿ ಎಂದರೆ ಜನ್ಮ ನಕ್ಷತ್ರ ಅಲ್ಲಿಂದ ಹತ್ತನೆಯ, ಹತ್ತೊಂಬತ್ತನೆಯ ನಕ್ಷತ್ರಗಳು ಇದಕ್ಕೆ ತ್ರಿಜನ್ಮ ಎಂದೂ ಹೆಸರು. ತಾರೆಗಳು ಒಂಬತ್ತಾದ್ದರಿಂದ ಈ ರೀತಿ ಕ್ರಮ ಅನುಸರಿಸಿ ಈ ಮೂರು ಜನ್ಮ ನಕ್ಷತ್ರಗಳಲ್ಲಿ ವಿಶೇಷಾರಾಧನೆ ಮಾಡಬೇಕೆಂದು ತಾತ್ಪರ್ಯ ಹಾಗೆಯೇ 'ಏಕಂಸತ್‌ವಿಪ್ರಾಃ ಬಹುಧಾ ವದಂತಿ' ಎಂದು ಉಪನಿಷತ್ತು ಹೇಳುತ್ತದೆ. ಅಂದರೆ ಯಾವಾಗಲೂ ಇರುವ ವಸ್ತು ಅಂದರೆ ಪರಮಾತ್ಮ ಒಂದೇ ಅದನ್ನೇ ಅನೇಕವಾಗಿ ಹೇಳುತ್ತಾನೆ. ಅಂದರೆ ಒಬ್ಬನೇ

ದೇವರನ್ನು ಅನೇಕ ರೂಪಗಳಿಂದ ಪೂಜಿಸುತ್ತೇವೆ. ಅದಕ್ಕಾಗಿ ಎಲ್ಲಾ ವಿಧವಾದ ಪೂಜೆಗಳಿಗೆ, ಶಿವನೇ ಸರ್ವಫಲದಾಯಕನಾಗಿರುವನು ಎಂದು ಹೇಳಿರುವುದು.

**ತಸ್ಮಾದ್ದೈ ದೇವಯಜನಂ ಸರ್ವಾಭಿಷ್ಟಫಲಪ್ರದಂ ।**
**ಸಮಂತ್ರಕಂ ಬ್ರಾಹ್ಮಣಾನಾಮನ್ಯೇಷಾಂ ಚೈವ ತಾಂತ್ರಿಕಂ ॥೪೧॥**

೪೧ ಆದ್ದರಿಂದ ದೇವತಾಪೂಜೆಯ ಎಲ್ಲ ವಿಧವಾದ ಇಷ್ಟಾರ್ಥಗಳನ್ನು ನೀಡುವುದು. ಈ ದೇವರ ಪೂಜೆಯು ಬ್ರಾಹ್ಮಣರಿಗೆ ಮಂತ್ರ ಸಹಿತವಾಗಿಯೂ ಉಳಿದವರು. ಕೇವಲ ತಂತ್ರದಿಂದ ಅಂದರೆ ಕೈಕರಣದಿಂದ ಅಥವಾ ಪುರಾಣ ಶ್ಲೋಕಗಳಿಂದ ಪೂಜಿಸಬೇಕು.

**ಯಥಾಶಕ್ತ್ಯಾನುಸಾರೇಣ ಕರ್ತವ್ಯಂ ಸರ್ವದಾ ನರೈಃ ।**
**ಸಪ್ತಸ್ವಪಿ ಚ ವಾರೇಷು ನರೈಃ ಶುಭಫಲೇಪ್ಸುಭಿಃ ॥೪೨॥**

೪೨ ಆದ್ದರಿಂದ ಮನುಷ್ಯನಾವನು ಪ್ರತಿದಿನದಲ್ಲೂ (ಏಳು ವಾರಗಳಲ್ಲಿಯೂ) ಶುಭಫಲವನ್ನಪೇಕ್ಷಿಸುವವನು ತನ್ನ ಶಕ್ತಿಗೆ ತಕ್ಕಂತೆ ಈ ದೇವಯಜ್ಞವನ್ನು ಮಾಡಬೇಕು.

**ದರಿದ್ರಾಸ್ತಪಸಾ ದೇವಾನ್ಯಜೇದಾಢ್ಯೋ ಧನೇನ ಹಿ ।**
**ಪುನಶ್ಚೈವಂ ವಿಧಂ ಧರ್ಮಂ ಕುರುತೇ ಶ್ರದ್ಧಯಾ ಸಹ ॥೪೩॥**

೪೩ ದರಿದ್ರರಾದವರು ತಪಸ್ಸಿನಿಂದಲೂ, ಧನವಂತನು ಧನದಿಂದಲೂ ದೇವತೆಗಳನ್ನೂ ಪೂಜಿಸಬೇಕು. ಆದ್ದರಿಂದ ಈ ವಿಧವಿಧವಾದ ಧರ್ಮವನ್ನು ಶ್ರದ್ಧೆಯಿಂದ ಯಾವನು ಆಚರಿಸುವನೋ,

**ಪುನಶ್ಚ ಭೋಗಾನ್ ವಿವಿಧಾನ್ ಭುಕ್ತ್ವಾ ಭೂಮೌ ಪ್ರಜಾಯತೇ ।**
**ಛಾಯಾಂ ಜಲಾಶಯಂ ಬ್ರಹ್ಮಪ್ರತಿಷ್ಠಾಂ ಧರ್ಮಸಂಚಯಂ ॥೪೪॥**

೪೪ ಅಂತಹವನು ಈ ಲೋಕದಲ್ಲಿ ಉತ್ತಮವಾದ ಭೋಗಗಳನ್ನನುಭವಿಸಿ ಪುನಃ ಈ ಭೂಮಿಯಲ್ಲಿ ಉತ್ತಮ ಜನ್ಮದ ಹೊಂದುವನು. ನೆರಳಿಗಾಗಿ ಸಾಲು ಗಿಡ ನೆಡಿಸುವುದು. ಕುಡಿಯುವ ನೀರಿಗಾಗಿ ಕೆರೆ, ತೊರೆಗಳನ್ನು ನಿರ್ಮಿಸುವುದು, ದೇವತಾ ಪ್ರತಿಷ್ಠೆಗಳನ್ನು ಮಾಡಿಸುವುದು ಮುಂತಾದ ಧರ್ಮಕಾರ್ಯಗಳನ್ನು ಧನವಂತನು ಮಾಡಿಸಬೇಕು.

ಸರ್ವಂ ಚ ವಿತ್ತವಾನ್ ಕುರ್ಯಾತ್ಸದಾ ಭೋಗಪ್ರಸಿದ್ಧಯೇ ।
ಕಾಲಾಚ್ಚ ಪುಣ್ಯಪಾಕೇನ ಜ್ಞಾನಸಿದ್ಧಿಃ ಪ್ರಜಾಯತೇ ॥೪೫॥

೪೫ ಈ ಮೇಲೆ ಹೇಳಿದ ಕರ್ಮಕಾರ್ಯವನ್ನು ಧನವಂತರು ಭೋಗಭಾಗ್ಯಗಳನ್ನು ಪಡೆಯಲು ಮಾಡಬೇಕು. ಈ ರೀತಿಯಾದ ಧರ್ಮಕಾರ್ಯಗಳನ್ನು ಮಾಡಿದರೆ ಕಾಲಕ್ರಮವಾಗಿ ಪುಣ್ಯವು ಪರಿಪಾಕಾವಸ್ಥೆ ಹೊಂದಿ ದಿವ್ಯಜ್ಞಾನವು ಉಂಟಾಗುವುದು.

ಯ ಇಮಂ ಶೃಣುತೇಽಧ್ಯಾಯಂ ಪಠತೇ ವಾ ನರೋ ದ್ವಿಜಾಃ ।
ಶ್ರವಣಸ್ಯೋಪಕರ್ತಾ ಚ ದೇವಯಜ್ಞಫಲಂ ಲಭೇತ್ ॥೪೬॥

೪೬ ಯಾರು ಈ ದೇವಯಜ್ಞ ವಿಶಿಷ್ಟವಾದ ಅಧ್ಯಾಯವನ್ನು ಕೇಳುವರೋ, ಅಥವಾ ಈ ಅಧ್ಯಾಯವನ್ನು ಯಾವ ಬ್ರಾಹ್ಮಣನು ಓದುವನೋ, ಅಥವಾ ಈ ಅಧ್ಯಾಯವನ್ನು ಕೇಳಲು ಉಪಕರಿಸುವನೋ ಅಂತಹ ಮನುಷ್ಯರು ದೇವಯಜ್ಞಫಲವನ್ನು ಹೊಂದುವರು.

ಇತಿ ಶ್ರೀ ಶಿವಮಹಾಪುರಾಣೇ ವಿದ್ಯೇಶ್ವರಸಂಹಿತಾಯಾಂ ಚತುರ್ದಶೋಽಧ್ಯಾಯಃ

ಇಲ್ಲಿಗೆ ಶ್ರೀ ಶಿವಪುರಾಣದಲ್ಲಿ ವಿದ್ಯೇಶ್ವರ ಸಂಹಿತೆಯಲ್ಲಿ
ಹದಿನಾಲ್ಕನೇ ಅಧ್ಯಾಯವು ಮುಗಿದುದು.

||ಶ್ರೀಃ||

||ಓ ನಮಃ ಶಿವಾಯ||

ಅಥ ಶ್ರೀ ಶಿವಮಹಾಪುರಾಣೇ

ವಿದ್ಯೇಶ್ವರಸಂಹಿತಾಯಾಂ

# ಪಂಚದಶೋಽಧ್ಯಾಯಃ

## ಹದಿನೈದನೇ ಅಧ್ಯಾಯವು

||ಋಷಯ ಊಚುಃ||

ದೇಶಾದೀನ್ ಕ್ರಮಶೋ ಬ್ರೂಹಿ ಸೂತ ಸರ್ವಾರ್ಥವಿತ್ತಮ|

||ಸೂತ ಉವಾಚ||

ಶುದ್ಧಂ ಗೃಹಂ ಸಮಫಲಂ ದೇವಯಜ್ಞಾದಿಕರ್ಮಸು||೧||

೧ ಋಷಿಗಳು ಹೇಳುತ್ತಾರೆ, ಎಲೈ ಎಲ್ಲಾ ವಿಚಾರಗಳನ್ನು ಬಲ್ಲವನಾದ ಸೂತ ಮಹಾಮುನಿಯೇ ದೇವಯಜ್ಞಾದಿಗಳಿಗೆ ಸೂಕ್ತವಾದ ದೇಶ ಮೊದಲಾದುವನ್ನು ನಮಗೆ ಹೇಳು ಎಂದರು.

ಸೂತರು ಹೇಳುತ್ತಾರೆ, ಶುದ್ಧವಾದ ಮನೆಯು ದೇವಯಜ್ಞಾದಿಗಳಿಗೆ ಸಮಫಲವನ್ನು ನೀಡುವುದು.

ತತೋ ದಶಗುಣಂ ಗೋಷ್ಠಂ ಜಲತೀರಂ ತತೋ ದಶ|

ತತೋ ದಶಗುಣಂ ಬಿಲ್ವತುಲಸ್ಯಶ್ವತ್ಥಮೂಲಕಂ||೨||

೨ ಗೋಶಾಲೆಯು (ಕೊಟ್ಟಿಗೆ) ಇದರ ಹತ್ತರಷ್ಟು ಹೆಚ್ಚು ಫಲವುಳ್ಳದ್ದು. ಜಲತೀರವು ಗೋಶಾಲೆಗಿಂತಲೂ ಹತ್ತರಷ್ಟು ಫಲ ನೀಡುವುದು. ಬಿಲ್ಲವ, ತುಲಸೀ, ಅಶ್ವತ್ಥ ಗಿಡಗಳ ಮೂಲವು ಇದರ ಹತ್ತರಷ್ಟು ಫಲ ನೀಡವುದು.

ತತೋ ದೇವಾಲಯಂ ವಿದ್ಯಾತ್ತೀರ್ಥತೀರಂ ತತೋ ದಶ|

ತತೋ ದಶಗುಣಂ ನದ್ಯಾಸ್ತೀರ್ಥನದ್ಯಾಸ್ತತೋ ದಶ||೩||

೩ ಮೇಲೆ ಹೇಳಿದ ಗಿಡಗಳ ಮೂಲಕ್ಕಿಂತಲೂ ದೇವಾಲಯವು ಹತ್ತರಷ್ಟು, ತೀರ್ಥತೀರವು ದೇವಾಲಯದ ಹತ್ತರಷ್ಟು, ತೀರ್ಥತೀರಕ್ಕಿಂತಲೂ ನದೀ ತೀರವು ಹತ್ತರಷ್ಟು ಫಲದಾಯಕವಾಗಿರುವುದು.

**ಸಪ್ತಗಂಗಾನದೀತೀರ್ಥಂ ತಸ್ಯಾ ದಶಗುಣಂ ಭವೇತ್ ।**
**ಗಂಗಾ ಗೋದಾವರೀ ಚೈವ ಕಾವೇರೀ ತಾಮ್ರ ಪರ್ಣಿಕಾ ॥೪॥**

೪ ಸಪ್ತಗಂಗೆಗಳ ನದೀ ತೀರವು ನದೀ ತೀರಕ್ಕಿಂತಲೂ ಹತ್ತರಷ್ಟು ಶ್ರೇಷ್ಟವು. ಆ ಸಪ್ತ ಗಂಗೆಗಳು ಯಾವುವೆಂದರೆ, ಗಂಗಾ, ಗೋದಾವರೀ, ಕಾವೇರಿ, ತಾಮ್ರಪರ್ಣಿ,

**ಸಿಂಧುಶ್ಚ ಸರಯೂ ರೇವಾ ಸಪ್ತ ಗಂಗಾಃ ಪ್ರಕೀರ್ತಿತಾಃ ।**
**ತತೋಽಬ್ಧಿತೀರೇ ದಶ ಚ ಪರ್ವತಾಗ್ರೇ ತತೋ ದಶ ॥೫॥**

೫ ಸಿಂಧು, ಸರಯೂ, ರೇವಾ ಎಂಬ ಏಳು ನದೀಗಳೇ ಆಗಿದೆ. ಈ ಸಪ್ತ ಗಂಗೆಗಳಿಗಿಂತಲೂ ಸಮುದ್ರ ತೀರವು ಹತ್ತರಷ್ಟು, ಪರ್ವತದ ತುದಿಯು ಇದರ ಹತ್ತು ಪಟ್ಟು ಹೆಚ್ಚಿನ ಫಲ ನೀಡುವುದು.

**ಸರ್ವಸ್ಮಾದಧಿಕಂ ಜ್ಞೇಯಂ ಯತ್ರ ವಾ ರೋಚತೇ ಮನಃ ।**
**ಕೃತೇ ಪೂರ್ಣಫಲಂ ಜ್ಞೇಯಂ ಯಜ್ಞದಾನಾದಿಕಂ ತಥಾ ॥೬॥**

೬ ಇವೆಲ್ಲಕ್ಕಿಂತಲೂ ಎಲ್ಲಿ ಮನಸ್ಸಿಗೆ ಹಿತವೆಂದು ತೋರುವುದೋ ಆ ಪ್ರದೇಶವೇ ಹೆಚ್ಚಿನ ಫಲ ನೀಡುವುದು. ಕೃತಯುಗದಲ್ಲಿ ಯಜ್ಞ, ದಾನಗಳಿಗೆ ಪೂರ್ಣಫಲವು.

**ತ್ರೇತಾಯುಗೇ ತ್ರಿಪಾದಂ ಚ ದ್ವಾಪರೇಽರ್ಧಂ ಸದಾ ಸ್ಮೃತಂ ।**
**ಕಲೌ ಪಾದಂ ತು ವಿಜ್ಞೇಯಂ ತತ್ಪಾದೋನಂ ತತೋಽರ್ಧಕೇ ॥೭॥**

೭ ತ್ರೇತಾಯುಗದಲ್ಲಿ ಮುಕ್ಕಾಲು ಫಲವು, ದ್ವಾಪರದಲ್ಲಿ ಅರ್ಧ ಫಲವು, ಕಲಿಯುಗದಲ್ಲಿ ಕಾಲು ಭಾಗ ಮಾತ್ರ ಎಂದು ತಿಳಿಯಬೇಕು. ಕಲಿಯುಗ ಅರ್ಧ ಕಳೆದ ಮೇಲೆ ಆ ನಾಲ್ಕನೇ ಒಂದು ಭಾಗದಲ್ಲಿಯು ಕಾಲು ಭಾಗ ಮಾತ್ರ ಫಲ ಲಭಿಸುವುದು.

**ಶುದ್ಧಾತ್ಮನಃ ಶುದ್ಧದಿಂ ಪುಣ್ಯಂ ಸಮಫಲಂ ವಿದುಃ ।**
**ತಸ್ಮಾದ್ಧತಗುಣಂ ಜ್ಞೇಯಂ ರವಿಸಂಕ್ರಮಣೇ ಬುಧಾಃ ॥೮॥**

೮ ಪರಿಶುದ್ಧವಾದ ವಿಶೇಷ ದಿನದಲ್ಲಿ ಪರಿಶುದ್ಧನಾಗಿ ಮೂಡಿದ ಪುಣ್ಯಕ್ಕೆ ಸಮನಾದ ಫಲಪ್ರಾಪ್ತಿಯಾಗುವುದು. ಇದಕ್ಕಿಂತಲೂ ಹತ್ತರಷ್ಟು ಹೆಚ್ಚಿನ ಫಲವು ಸೂರ್ಯ ಸಂಕ್ರಮಣದಂದು ದೊರೆಯುವುದು.

ವಿಷುವೇ ತದ್ದಶಗುಣಮಯವೇ ತದ್ದಶ ಸ್ಮೃಶಂ।
ತದ್ದಶ ಮೃಗಸಂಕ್ರಾಂತೌ ತಚ್ಚಂದ್ರಗ್ರಹಣೇ ದಶ॥೯॥

೯ ವಿಷ್ಣುವತ್ಪುಣ್ಯ ಕಾಲದಲ್ಲಿ ಇದಕ್ಕೆ ಹತ್ತರಷ್ಟು, ಅಯನಗಳಲ್ಲಿ ಅದಕ್ಕಿಂತಲೂ ಹತ್ತರಷ್ಟು, ಇದಕ್ಕಿಂತಲೂ ಹತ್ತರಷ್ಟು ಹೆಚ್ಚಿನ ಫಲವು ಮಕರ ಸಂಕ್ರಾಂತಿಯಲ್ಲಿ, ಮಕರ ಸಂಕ್ರಾಂತಿಗಿಂತ ಹತ್ತರಷ್ಟು, ಚಂದ್ರಗ್ರಹಣದಲ್ಲೂ ಫಲದೊರೆಯುವುದು.

ತತಶ್ಚ ಸೂರ್ಯಗ್ರಹಣೇ ಪೂರ್ಣಂ ಕಾಲೋತ್ತಮೇ ವಿದುಃ।
ಜಗದ್ರೂಪಸ್ಯ ಸೂರ್ಯಸ್ಯ ವಿಷಯೋಗಾಚ್ಚ ರೋಗದಂ।೧೦॥

೧೦ ಚಂದ್ರಗ್ರಹಣಕ್ಕಿಂತಲೂ ಸೂರ್ಯಗ್ರಹಣದಲ್ಲಿ ಪೂರ್ಣ ಪ್ರಮಾಣದ ಫಲ ದೊರೆಯುವುದು. ಜಗತ್ತಿನ ಸ್ವರೂಪನಾದಸೂರ್ಯನಿಗೆ ವಿಷಯೋಗ (ಅನಿಷ್ಟ)ವು ಸಂಭವಿಸುವುದರಿಂದ ರೋಗಪ್ರದವಾಗಿರುತ್ತದೆ.

ವಿ.ವಿ.:-ವಿಷ್ಣುವತ್ಪುಣ್ಯಕಾಲವೆಂದರೆ ಮೇಷ, ತುಲಾ ಸಂಕ್ರಮಣಗಳು. ಮಕರ ಸಂಕ್ರಾಂತಿ ಎಂದರೆ ಉತ್ತರಾಯಣ ಪುಣ್ಯಕಾಲ. ಪ್ರತಿಸಂಕ್ರಮಣವೂ ಪುಣ್ಯಕಾಲವಾದರೂ ಮೇಷ, ತುಲಾ, ಮಕರ, ಕಟಕ ಸಂಕ್ರಾಂತಿಗಳು ಚಂದ್ರ ಸೂರ್ಯರ ಗ್ರಹಣ ಕಾಲಗಳು ವಿಶೇಷ ಸಿದ್ಧಿ ನೀಡುವ ಪುಣ್ಯಕಾಲಗಳು.

ಅತಸ್ತದ್ವಿಷಶಾಂತತ್ಯರ್ಥಂ ಸ್ನಾನದಾನಜಪಾಂಶ್ಚರೇತ್।
ವಿಷಶಾಂತ್ಯರ್ಥಕಾಲತ್ವಾತ್ಸ ಕಾಲಂ ಪುಣ್ಯದಃ ಸ್ಮೃತಃ॥೧೧॥

೧೧ ಆದ್ದರಿಂದ ಆ ವಿಷ ಶಾಂತಿಗಾಗಿ ಸ್ನಾನ, ದಾನ, ಜಪಗಳನ್ನು ಮಾಡಬೇಕು. ವಿಷವನ್ನು ಶಾಂತಿಗೊಳಿಸುವ ಕಾಲವಾದ್ದರಿಂದ ಸೂರ್ಯಗ್ರಹಣವು ಪುಣ್ಯಪ್ರದವಾದುದು.

ಜನ್ಮರ್ಕ್ಷೇ ಚ ವ್ರತಾಂತೇ ಚ ಸೂರ್ಯರಾಗೋಪಮಂ ವಿದುಃ।
ಮಹತಾಂ ಸಂಗಕಾಲಶ್ಚ ಕೋಟ್ಯರ್ಕಗ್ರಹಣಂ ವಿದುಃ॥೧೨॥

೧೨ ಜನ್ಮ ನಕ್ಷತ್ರ ಕಾಲವೂ, ವ್ರತವನ್ನು ಮುಗಿಸಿದ ಕಾಲವು ಸಹ ಸೂರ್ಯಗ್ರಹಣಕ್ಕೆ ಸಮವಾದುದು. ಸತ್ಪುರುಷರ ಸಹವಾಸ ಮಾಡಿದ ಕಾಲವು ಕೋಟಿ ಸೂರ್ಯಗ್ರಹಣಕ್ಕೆ ಸಮವಾದುದೆಂದು ತಿಳಿಯಬೇಕು.

**ತಪೋನಿಷ್ಠಾ ಜ್ಞಾನನಿಷ್ಠಾ ಯೋಗಿನೋ ಯತಯಸ್ತಥಾ ।**
**ಪೂಜಯಾಃ ಪಾತ್ರಮೇತೇ ಹಿ ಪಾಪಸಂಕ್ಷಯಕಾರಣಂ ॥೧೩॥**

೧೩ ತಪೋನಿಷ್ಠರು, ಜ್ಞಾನಿಗಳು, ಯೋಗಿಗಳು, ಸಂನ್ಯಾಸಿಗಳು ಸಹ ಪೂಜೆಗೆ ಪಾತ್ರರು. ಯೋಗ್ಯರಾದವರು, ಪಾಪಗಳನ್ನು ಹೋಗಲಾಡಿಸುವಂತಹವರು, ಆದ್ದರಿಂದ ಶ್ರದ್ಧೆಯಿಂದ ಅವರನ್ನು ಪೂಜಿಸಬೇಕು.

**ಚತುರ್ವಿಂಶತಿಲಕ್ಷಂ ವಾ ಗಾಯತ್ರ್ಯಾ ಜಪಸಂಯುತಃ ।**
**ಬ್ರಾಹ್ಮಣಸ್ತು ಭವೇತ್ಪಾತ್ರಂ ಸಂಪೂರ್ಣಫಲಭೋಗದಂ ॥೧೪॥**

೧೪ ಇಪ್ಪತ್ನಾಲ್ಕು ಲಕ್ಷ ಗಾಯತ್ರೀ ಜಪ ಮಾಡಿದ ಬ್ರಾಹ್ಮಣನೂ ಪೂಜಾರ್ಹನು. ಅವನನ್ನು ಸಹ ಪೂಜಿಸಿದರೆ ಸಂಪೂರ್ಣವಾದ ಫಲವೂ, ಭೋಗವೂ ಲಭಿಸುವುದು.

**ಪತನಾತ್ತ್ರಾಯತ ಇತಿ ಪಾತ್ರಂ ಶಾಸ್ತ್ರೇ ಪ್ರಯುಜ್ಯತೇ ।**
**ದಾತುಶ್ಚ ಪಾತಕಾತ್ತ್ರಾಣಾತ್ಪಾತ್ರಮಿತ್ಯಭಿಧೀಯತೆ ॥೧೫॥**

೧೫ ಪತನ (ಅಧೋಗತಿಯಿಂದ ಅರ್ಥಾತ್ ನರಕದಿಂದ)ದಿಂದ ಕಾಪಾಡುವುದೆಂಬ ಅರ್ಥದಲ್ಲಿ ಪಾತ್ರ ಶಬ್ದವನ್ನು ಶಾಸ್ತ್ರದಲ್ಲಿ ಪ್ರಯೋಗಿಸಿರುವರು. ಆದುದರಿಂದ ಪೂಜೆಗೆ ಪಾತ್ರ (ಯೋಗ್ಯ)ನಾದವನನ್ನು ಪೂಜಿಸಿದರೆ, ದಾನಮಾಡಿದರೆ (ಅವನಿಗೆ) ಪಾಪಗಳಿಂದ ರಕ್ಷಿಸುವನೆದು ತಿಳಿಯಬೇಕು.

**ಗಾಯಂತಂ ತ್ರಾಯತೇ ಪಾತಾದ್ಗಾಯತ್ರೀತ್ಯುಚ್ಯತೇ ಹಿ ಸಾ ।**
**ಯಯಾರ್ಥಹೀನೋ ಲೋಕೇಽಸ್ಮಿನ್ ಪರಸ್ಯಾರ್ಥಂ ನ ಯಚ್ಛತಿ ॥೧೬॥**

೧೬ ಹಾಗೆಯೇ ಗಾನ ಮಾಡುವವನನ್ನು ಪಾಪಗಳಿಂದ ರಕ್ಷಿಸುವುದರಿಂದ ಗಾಯತ್ರಿ ಎಂದು ಆ ಮಂತ್ರಕ್ಕೆ ಹೆಸರು ಬಂದಿರುವುದು. ಯಾವನು ಧನವನ್ನು ಜಿಪುಣತನದಿಂದ ಪರರಿಗೆ ದಾನ ಮಾಡುವುದಿಲ್ಲವೋ ಅವನು ದರಿದ್ರನಾಗುವನು.

**ಅರ್ಥವಾನಿಹ ಯೋ ಲೋಕೇ ಪರಸ್ಯಾರ್ಥಂ ಪ್ರಯಚ್ಛತಿ ।**
**ಸ್ವಯಂ ಶುದ್ಧೋ ಹಿ ಪೂತಾತ್ಮಾ ನರಾನ್ ಸಂತ್ರಾತುಮರ್ಹತಿ ॥೧೭॥**

೧೭ ಈ ಲೋಕದಲ್ಲಿ ಯಾವನು ದಾನವನ್ನು ಮಾಡುವನೋ ಅವನು ಧನವಂತನಾಗುವನು. ತಾನೂ ಶುದ್ಧನಾಗಿ ಪವಿತ್ರನಾಗಿ ಮತ್ತೆ ಎಲ್ಲರನ್ನು ಸಲಹಬಲ್ಲನು.

**ಗಾಯತ್ರೀಜಪಶುದ್ಧೋ ಹಿ ಶುದ್ಧಬ್ರಾಹ್ಮಣ ಉಚ್ಯತೇ ।**
**ತಸ್ಮಾದ್ದಾನೇ ಜಪೇ ಹೋಮೇ ಪೂಜಾಯಾಂ ಸರ್ವಕರ್ಮಣಿ ॥೧೮॥**

೧೮ ಗಾಯತ್ರೀ ಜಪದಿಂದ ಶುದ್ಧನಾಗುವಂತಹ ಬ್ರಾಹ್ಮಣನೇ ಶುದ್ಧ ಬ್ರಾಹ್ಮಣನೆಂದು ಹೇಳಲ್ಪಟ್ಟಿದೆ. ಆದ್ದರಿಂದ ದಾನ, ಜಪ, ಹೋಮಗಳಲ್ಲಿ ಹಾಗೇ ಪೂಜೆ ಮತ್ತು ಎಲ್ಲಾ ಕಾರ್ಯಗಳಲ್ಲಿ,

**ದಾನಂ ಕರ್ತುಂ ತಥಾ ತ್ರಾತುಂ ಪಾತ್ರಂತ್ವಂ ಬ್ರಾಹ್ಮಣೋಽರ್ಹತಿ ।**
**ಅನ್ನಸ್ಯ ಕ್ಷುಧಿತಂ ಪಾತ್ರಂ ನರನಾರೀಮಯಾತ್ಮಕಂ ।\f2 19॥**

೧೯ ದಾನ ಮಾಡಲು ಹಾಗೆ ದಾನ ಮಾಡಿದವನನ್ನು ಪಾಪಗಳಿಂದ ರಕ್ಷಿಸಲೂ ಸಹ ಬ್ರಾಹ್ಮಣನೇ ಯೋಗ್ಯನು, ಅರ್ಹತೆ ಉಳ್ಳವನೂ ಆಗುವನು. ಅನ್ನದಾನಕ್ಕೆ ಹಸಿದ ಹೆಂಗಸರು, ಗಂಡಸರು ಪಾತ್ರರು.

**ಬ್ರಾಹ್ಮಣಂ ಶ್ರೇಷ್ಠ ಮಾಹೂಯ ಯತ್ಕಾಲೇ ಸುಸಮಾಹಿತಂ ।**
**ತದರ್ಥಂ ಶಬ್ದಮರ್ಥಂ ವಾ ಸದ್ಬೋಧಕಮಭೀಷ್ಟದಂ ॥೨೦॥**

೨೦ ಶ್ರೇಷ್ಠನೂ, ಸದ್ಬೋಧೆಯನ್ನು ಅಂದರೆ ಒಳ್ಳೆಯದನ್ನು ಪುದೇಶಿಸುವ, ಅದರಿಂದ ಇಷ್ಟಾರ್ಥಗಳನ್ನು ಪಡೆಯಲು ಸಹಾಯಕನಾದ ಬ್ರಾಹ್ಮಣನನ್ನು ಕರೆದು,

**ಇಚ್ಛಾವತಃ ಪ್ರದಾನಂ ಚ ಸಂಪೂರ್ಣಫಲದಂ ವಿದುಃ ।**
**ಯತ್ಪೃಶ್ಚಾನಂತರಂ ದತ್ತಂ ತದರ್ಧಫಲದಂ ವಿದುಃ ॥೨೧॥**

೨೧ ಆತನು ಇಷ್ಟಪಟ್ಟಿದ್ದನ್ನು ದಾನ ಮಾಡಿದರೆ ಸಂಪೂರ್ಣವಾದ ಫಲಪ್ರಾಪ್ತಿಯಾಗುವುದು. ದಾನವನ್ನು ಅವನು ಕೇಳಿದ ಮೇಲೆ ದಾನ ಮಾಡಿದರೆ ಅರ್ಧದಷ್ಟು ಫಲ ಸಿಗುವುದು.

ಯತ್ಸೇವಕಾಯ ದತ್ತಂ ಸ್ಯಾತ್ತತ್ಪಾದಫಲದಂ ವಿದುಃ।
ಜಾತಿಮಾತ್ರಸ್ಯ ವಿಪ್ರಸ್ಯ ದೀನವೃತ್ತೇರ್ದ್ವಿಜರ್ಷಭಾಃ॥೨೨॥

೨೨ ಯಾವುದು ದಾನವಾಗಿ ಸೇವಕನಿಗೆ ಕೊಡಲ್ಪಡುವುದೋ ಅದಕ್ಕೆ ಕಾಲು ಭಾಗ ಫಲವೆಂದು ತಿಳಿಯುವುದು. ಜಾತಿ ಮಾತ್ರದಿಂದ ಬ್ರಾಹ್ಮಣನಾಗಿ ದೀನವೃತ್ತಿ (ದರಿದ್ರ)ಯವನಾದವನಿಗೆ,

ದತ್ತಮರ್ಥಂ ಹಿ ಭೋಗಾಯ ಭೂರ್ಲೋಕೇ ದಶವಾರ್ಷಿಕಂ।
ವೇದಯುಕ್ತಸ್ಯ ವಿಪ್ರಸ್ಯ ಸ್ವರ್ಗೇ ಹಿ ದಶವಾರ್ಷಿಕಂ॥೨೩॥

೨೩ ಹತ್ತು ವರ್ಷಪರ್ಯಂತರ ಜೀವನವನ್ನು ಕಲ್ಪಿಸಿದರೆ ಭೂಲೋಕದಲ್ಲಿ ಸುಖವಾದ ಭೋಗಲಭಿಸುವುದು. ವೇದಾಧ್ಯಯನ ನಿಷ್ಠನಾದ ಬ್ರಾಹ್ಮಣನಿಗೆ ಜೀವನವನ್ನು ಹತ್ತು ವರ್ಷಗಳು ಕಲ್ಪಿಸಿದರೆ ಸ್ವರ್ಗಲೋಕ ಪ್ರಾಪ್ತಿಯಾಗುವುದು.

ಗಾಯತ್ರೀಜಪಯುಕ್ತಸ್ಯ ಸತ್ಯಂ ಹಿ ದಶವಾರ್ಷಿಕಂ।
ವಿಷ್ಣುಭಕ್ತಸ್ಯ ವಿಪ್ರಸ್ಯ ದತ್ತಂ ವೈಕುಂಠದಂ ವಿದುಃ॥೨೪॥

೨೪ ಗಾಯತ್ರೀ ಜಪದಲ್ಲಿ ನಿಷ್ಠನಾದ ಬ್ರಾಹ್ಮಣನಿಗೆ ಜೀವನೋಪಾಯವನ್ನು ಹತ್ತು ವರ್ಷ ಕಾಲ ಕಲ್ಪಿಸಿದರೆ ಸತ್ಯಲೋಕದಲ್ಲಿ ಭೋಗವು ಲಭಿಸುವುದು. ವಿಷ್ಣುಭಕ್ತನಾದ ದ್ವಿಜನಿಗೆ ಈ ರೀತಿ ದಾನ ಮಾಡಿದುದೇ ಆದರೆ ವೈಕುಂಠ ಲೋಕಪ್ರಾಪ್ತಿಯಾಗುವುದು.

ಶಿವಭಕ್ತಸ್ಯ ವಿಪ್ರಸ್ಯ ದತಂ ಕೈಲಾಸದಂ ವಿದುಃ।
ತತ್ತಲ್ಲೋಕೋಪಭೋಗಾರ್ಥಂ ಸರ್ವೇಷಾಂ ದಾನಮಿಷ್ಯತೇ॥೨೫॥

೨೫ ಶಿವಭಕ್ತನಾದ ಬ್ರಾಹ್ಮಣನಿಗೆ ಜೀವನ ಕಲ್ಪಿಸಿದರೆ ಅಂದರೆ ಹಿಂದೆ ಹೇಳಿದ ರೀತಿ ದಾನ ಮಾಡಿದರೆ ಕೈಲಾಸ ಪ್ರಾಪ್ತಿಯಾಗುವುದು. ಎಲ್ಲಾ ಲೋಕಗಳ ಭೋಗ ಬೇಕಾದರೆ ಎಲ್ಲರಿಗೂ ದಾನ ಮಾಡಬೇಕು.

ದಶಾಂಗಮನ್ನಂ ವಿಪ್ರಸ್ಯ ಭಾನುವಾರೇ ದದನ್ನರಃ।
ಪರಜನ್ಮನಿ ಚಾರೋಗ್ಯಂ ದಶವರ್ಷಂ ಸಮಶ್ನುತೇ॥೨೬॥

೨೬ ಭಾನುವಾರದಲ್ಲಿ ಹತ್ತು ಅಂಗಗಳಿಂದ ಕೂಡಿದ ಅನ್ನವನ್ನು ಬ್ರಾಹ್ಮಣನಿಗೆ

ಯಾವ ಮನುಷ್ಯನು ದಾನ ಮಾಡುವನೋ ಅಂತಹ ಮಾನವನಿಗೆ ಮುಂದಿನ ಜನ್ಮದಲ್ಲಿ ಹತ್ತು ವರ್ಷಗಳ ಆರೋಗ್ಯವು ಲಭಿಸುವುದು.

ಬಹುಮಾನಮಥಾಹ್ವಾನಮಭ್ಯಂಗಂ ಪಾದಸೇವನಂ ।
ವಾಸೋ ಗಂಧಾದ್ಯ ರ್ಚನಂ ಚ ಘೃತಾತಪೂವಪರಸೋತ್ತರಂ ॥೨೭॥

೨೭ ಆ ಹತ್ತು ಅಂಗಗಳಾವುವೆಂದರೆ, ಅತಿಥಿಗೆ ಬಹುಮಾನ ಅಂದರೆ ಗೌರವ ಸಲ್ಲಿಸುವುದು. ಆಹ್ವಾನ, ಅಭ್ಯಂಜನ ಮಾಡಿಸುವುದು, ಪಾದ ಸೇವೆ ಮಾಡುವುದು, ವಸ್ತ್ರವನ್ನು ಕಲ್ಪಿಸುವುದು. ಗಂಧಾದಿಗಳಿಂದ ಪೂಜಿಸುವುದು, ತುಪ್ಪ, ಸಿಹಿ ತಿಂಡಿ, ಅನೇಕ ರಸಗಳನ್ನು,

ಷಡ್ರಸಂ ವ್ಯಂಜನಂ ಚೈವ ತಾಂಬೂಲಂ ದಕ್ಷಿಣೋತ್ತರಂ ।
ನಮಶ್ಚಾನುಗಮಶ್ಚೈವ ಸ್ವನ್ನದಾನಂ ದಶಾಂಗಕಂ ॥೨೮॥

೨೮ ಅಂದರೆ ಷಡ್ರಸೋಪೇತ ಭೋಜನ ಮಾಡಿಸುವುದು. ಇದರ ಜತೆಗೆ ನೆಂಚಿಕೊಳ್ಳುವ (ಚಟ್ನಿ, ಪಲ್ಯ ಮುಂತಾದುವು) ವಸ್ತುವನ್ನು ಊಟದಲ್ಲಿ ಬಡಿಸುವುದು. ತಾಂಬೂಲ ದಕ್ಷಿಣೆ, ನಮಸ್ಕಾರ, ಬೀಳ್ಕೊಡುವುದು ಈ ಹತ್ತು ಅನ್ನ ದಾನದ ಅಂಗಗಳು.

ದಶಾಂಗಮನ್ನಂ ವಿಪ್ರೇಭ್ಯೋ ದಶಭ್ಯೋ ವೈ ದದನ್ನರಃ ।
ಅರ್ಕವಾರೇ ತಥಾರೋಗ್ಯಂ ಶತವರ್ಷಂ ಸಮಶ್ನುತೇ ॥೨೯॥

೨೯ ಈ ಹತ್ತು ಅಂಗದಿಂದ ಕೂಡಿದ ಅನ್ನವನ್ನು ಬ್ರಾಹ್ಮಣರಿಗೆ ದಾನ ಭಾನುವಾರದಲ್ಲಿ ಮಾಡಿದರೆ ನೂರು ವರ್ಷ ಪರ್ಯಂಗತರ ಆರೋಗ್ಯಶಾಲಿಗಳಾಗಿ ಬಾಳುವರು, ಅಂದರೆ ಆರೋಗ್ಯವನ್ನು ಪಡೆಯುವರೆಂದು ತಾತ್ಪರ್ಯ.

ಸೋಮವಾರಾದಿವಾರೇಷು ತತ್ತದ್ವಾರಗುಣಂ ಫಲಂ ।
ಅನ್ನಾದನಸ್ಯ ವಿಜ್ಞೇಯಂ ಭೂರ್ಲೋಕೇ ಪರಜನ್ಮನಿ ॥೩೦॥

೩೦ ಸೋಮವಾರವೇ ಮೊದಲಾದ ವಾರಗಳಲ್ಲಿ ಅನ್ನದಾನ ಮಾಡಿದರೆ ಆಯಾ ವಾರಕ್ಕೆ ತಕ್ಕಂತೆ ಫಲಪ್ರಾಪ್ತಿಯಾಗುವುದು. ಈ ರೀತಿಯ ಅನ್ನದಾನಕ್ಕೆ ಪರಲೋಕದಲ್ಲಿ ಬೇರೆ ಜನ್ಮದಲ್ಲಿ ಉತ್ತಮ ಫಲವು ವಾರಗಳಿಗೆ ತಕ್ಕಂತೆ ಪ್ರಾಪ್ತವಾಗುವುದು.

**ಸಪ್ತಸ್ವಪಿ ಚ ವಾರೇಷು ದಶಾಭ್ಯಶ್ಚ ದಶಾಂಗಕಂ |**
**ಅನ್ನಂ ದತ್ವಾ ಶತಂ ವರ್ಷಮಾರೋಗ್ಯಾದಿಕಮಶ್ನುತೇ ||೩೧||**

೩೧ ವಾರದ ಏಳೂ ವಾರಗಳಲ್ಲಿ ಹತ್ತು ಜನ ಅತಿಥಿಗಳಿಗೆ ಹಿಂದೆ ಹೇಳಿದ ಹತ ಅಂಗಗಳ ಸಹಿತವಾಗಿ ಅನ್ನದಾನವನ್ನು ಮಾಡಿದರೆ ನೂರು ವರ್ಷ ಪರ್ಯಂತ ಆರೋ ಮುಂತಾದ ಉತ್ತಮ ಫಲವನ್ನು ಹೊಂದುವನು.

**ಏವಂ ಶತೇಭ್ಯೋ ವಿಪ್ರೇಭ್ಯೋ ಭಾನುವಾರೇ ದದನ್ನರಃ |**
**ಸಹಸ್ರವರ್ಷಮಾರೋಗ್ಯಂ ಶರ್ವಲೋಕೇ ಸಮಶ್ನುತೇ ||೩೨||**

೩೨ ಇದೇ ರೀತಿ ಭಾನುವಾರದಲ್ಲಿ ನೂರು ಜನ ಬ್ರಾಹ್ಮಣರಿಗೆ ಅನ್ನ ದಾನ ಮಾಡಿದ ಸಾವಿರ ವರ್ಷ ಪೂರ್ತಿ ಆರೋಗ್ಯಾದಿಗಳನ್ನು ಹೊಂದಿ ಶಿವಲೋಕದಲ್ಲಿ ವಾಸಮಾಡುವನು.

**ಸಹಸ್ರೇಭ್ಯಸ್ತಥಾ ದತ್ವಾಽಯುತವರ್ಷಂ ಸಮಶ್ನುತೇ |**
**ಏವಂ ಸೋಮಾದಿವಾರೇಷು ವಿಜ್ಞೇಯಂ ಹಿ ವಿಪಶ್ಚಿತಾ ||೩೩||**

೩೩ ಸಾವಿರ ಜನ ಬ್ರಾಹ್ಮಣರಿಗೆ ಮೇಲೆ ಹೇಳಿದ ರೀತಿ ಅನ್ನದಾನ ಮಾಡಿದರ ಹತ್ತು ಸಾವಿರ ವರ್ಷ ಆರೋಗ್ಯವನ್ನು ಹೊಂದಿ ಶಿವಲೋಕದಲ್ಲಿ ವಾಸಿಸುವನು. ಹೀಗೆಯೇ ಸೋಮವಾರಾದಿಗಳಿಗೂ ವಿದ್ವಾಂಸರಿಂದ ತಿಳಿಯಲ್ಪಡತಕ್ಕದ್ದು.

**ಭಾನುವಾರೇ ಸಹಸ್ರಾಣಾಂ ಗಾಯತ್ರೀಪೂತಚೇತಸಾಂ |**
**ಅನ್ನಂ ದತ್ವಾ ಸತ್ಯಲೋಕೇ ಹ್ಯಾರೋಗ್ಯಾದಿ ಸಮಶ್ನುತೇ ||೩೪||**

೩೪ ಭಾನುವಾರದಲ್ಲಿ ಗಾಯತ್ರೀ ಮಂತ್ರ ಜಪದಿಂದ ಪರಿಶುದ್ಧರಾದ ಮನಸ್ಸುಳ್ಳ ಬ್ರಾಹ್ಮಣರಿಗೆ ಅನ್ನದಾನ ಮಾಡಿದರೆ ಸತ್ಯಲೋಕವನ್ನು ಹೊಂದಿ ಆರೋಗ್ಯಾದಿ ಫಲಗಳನ್ನು ಹೊಂದುವರು.

**ಅಯುತಾನಾಂ ತಥಾ ದತ್ವಾ ವಿಷ್ಣುಲೋಕೇ ಸಮಶ್ನುತೇ |**
**ಅನ್ನಂ ದತ್ವಾ ತು ಲಕ್ಷಾಣಾಂ ರುದ್ರಲೋಕೇ ಸಮಶ್ನುತೇ ||೩೫||**

೩೫ ಹತ್ತು ಸಾವಿರ ಜನರಿಗೆ (ಹಿಂದೆ ಹೇಳಿದಂತಹವರಿಗೆ) ಅನ್ನದಾನ

ಮಾಡುವಿಕೆಯಿಂದ ವಿಷ್ಣುಲೋಕವನ್ನು, ಲಕ್ಷ ಜನರಿಗೆ ಅನ್ನದಾನ ಮಾಡುವುದರಿಂದ ರುದ್ರಲೋಕವನ್ನು ಅನುಭವಿಸುವರು.

**ಬಾಲಾನಾಂ ಬ್ರಹ್ಮಬುದ್ಧ್ಯಾ ಹಿ ದೇಯಂ ವಿದ್ಯಾರ್ಥಿಭಿರ್ನರೈಃ |**
**ಯೂನಾಂ ಚ ವಿಷ್ಣುಬುದ್ಧ್ಯಾ ಹಿ ಪುತ್ರಕಾಮಾರ್ಥಿಭಿರ್ನರೈಃ ||೩೬||**

೩೬ ಬ್ರಹ್ಮನೆಂಬ ಅರಿವಿನಿಂದ ಬಾಲಕರಿಗೆ ಅನ್ನದಾನವನ್ನು ವಿದ್ಯೆಯನ್ನು ಅಪೇಕ್ಷಿಸುವರು ಮಾಡಬೇಕು. ಪುತ್ರರನ್ನು ಅಪೇಕ್ಷಿಸುವವರು ಯುವಕರನ್ನು ವಿಷ್ಣುವಿನ ಸ್ವರೂಪವೆಂದು ತಿಳಿದು ಅನ್ನದಾನ ಮಾಡಬೇಕು.

**ವೃದ್ಧಾನಾಂ ರುದ್ರಬುದ್ಧ್ಯಾ ಹಿ ದೇಯಂ ಜ್ಞಾನಾರ್ಥಿಭಿರ್ನರೈಃ |**
**ಬಾಲಸ್ತ್ರೀಭಾರತೀಬುದ್ಧ್ಯಾ ಬುದ್ಧಿಕಾಮೈರ್ನರೋತ್ತಮೈಃ ||೩೭||**

೩೭ ಜ್ಞಾನವನ್ನಪೇಕ್ಷಿಸುವ ಮನುಷ್ಯರು ರುದ್ರನೆಂದು ತಿಳುವಳಿಕೆ ಉಳ್ಳವನಾಗಿ ವೃದ್ಧರಿಗೆ ಅನ್ನದಾನವನ್ನು ಮಾಡಬೇಕು. ಬುದ್ಧಿಯನ್ನಪೇಕ್ಷಿಸುವವರು ಸರಸ್ವತೀ ಸ್ವರೂಪವೆಂದು ತಿಳಿದು ಬಾಲಕಿಯರಿಗೆ ಅನ್ನದಾನವನ್ನು ಮಾಡಬೇಕು.

**ಲಕ್ಷ್ಮೀಬುದ್ಧ್ಯಾ ಯುವಸ್ತ್ರೀಷು ಭೋಗಕಾಮೈರ್ನರೋತ್ತಮೈಃ |**
**ವೃದ್ಧಾಸು ಪಾರ್ವತೀಬುದ್ಧ್ಯಾ ದೇಯಮಾತ್ಮಾರ್ಥಿಭಿರ್ನರೈಃ ||೩೮||**

೩೮ ಲಕ್ಷ್ಮೀ ಸ್ವರೂಪವೆಂದು ತಿಳಿದು ಯುವತಿಯರಿಗೆ ಅನ್ನದಾನ ಮಾಡಿದರೆ ಭೋಗಮೋಕ್ಷಗಳು ಲಭಿಸುವುದು. ಆತ್ಮಸ್ವರೂಪವನ್ನು ಅಪೇಕ್ಷಿಸುವವರು ಪಾರ್ವತಿಯೆಂದು ತಿಳಿದು ವೃದ್ಧ ಸುಮಂಗಲಿಯರಿಗೆ ಅನ್ನದಾನಾದಿಗಳನ್ನು ಮಾಡಬೇಕು.

ವಿ.ವಿ.:- ವಿಶೇಷವಾಗಿ ಭಾನುವಾರದಲ್ಲಿ ಅನ್ನದಾನಕ್ಕೆ ವೈಶಿಷ್ಟ್ಯವನ್ನು ಹೇಳಿ ಅದಕ್ಕೆ ವಿಶೇಷವಾಗಿ ಫಲವನ್ನು ಆರೋಗ್ಯವೆಂದುಹೇಳಿದರು. ಬೇರೆಡೆಯಲ್ಲೂ ಸಹ 'ಆರೋಗ್ಯಂ ಭಾಸ್ಕರಾದಿಚ್ಛೇತ್' ಎಂದು ಹೇಳಿದ್ದಾರೆ. ಆರೋಗ್ಯಕ್ಕೆ ಸೂರ್ಯನೇ ಕಾರಣನು. ಜ್ಯೋತಿಶ್ಶಾಸ್ತ್ರ ಪ್ರಕಾರವೂ ಈ ಫಲವೇ ರವಿಗೆ ಹೇಳಿದ್ದಾರೆ. ಯೋಗದಲ್ಲೂ ಸಹ ಸೂರ್ಯ ನಮಸ್ಕಾರಗಳನ್ನು ಮೊದಲಿಗೆ ಹೇಳುತ್ತಾರೆ. ಗಾಯತ್ರೀ ಮಂತ್ರದಲ್ಲಿ ಸಹ ಸೂರ್ಯನನ್ನೇ ಪ್ರಾರ್ಥಿಸಿದ್ದಾರೆ. ಅರುಣ ಮಂತ್ರಗಳಿಂದ ಪೂಜಿಸಿ ನಮಸ್ಕಾರಗಳನ್ನು ಅರ್ಪಿಸುವ ಸಂದರ್ಭದಲ್ಲಿ ನಮ್ಮ ಹೃದ್ರೋಗ ಮುಂತಾದ ರೋಗಗಳನ್ನು ನಾಶಪಡಿಸು ಎಂದು

ಪ್ರಾರ್ಥಿಸುವ ಮಂತ್ರವಿದೆ. ಹೀಗೆ ಎಲ್ಲ ಕಡೆ ಸೂರ್ಯಪ್ರಾರ್ಥನೆಗೆ ಹೆಚ್ಚಿನ ವ
ಏಕೆಂದರೆ ಸೂರ್ಯನೇ ಜಗತ್ತಿನ ಏಳಿಗೆಗೆ ಕಾರಣ. ಏಕೆಂದರೆ 'ಸೂರ್ಯ ಆತ್ಮಾ
' ಎಂದರೆ ಜಗತ್ತಿಗೆ ಸೂರ್ಯನು ಆತ್ಮ ಸ್ವರೂಪನು. ದೇಹಕ್ಕೆ ಆತ್ಮವಿದ್ದಾಗ
ಏನು ಬೇಕಾದರೂ ಮಾಡಬಲ್ಲದು. ಹಾಗೇ ಜಗತ್ತಿಗೆ ಸೂರ್ಯನು. ಆದ್ದರಿ
ವೇದದಲ್ಲಿ ಸಹ 'ಚಕ್ಷೋಸೂರ್ಯೋ ಅಜಾಯತ' ಅಂದರೆ ವಿರಾಟ್ಪುರುಷನ ಕಣ
ಇವನ ಅವಿರ್ಭಾವ. ಮುಖಕ್ಕೆ ಕಣ್ಣೇ ಶೋಭಾಯಮಾನ ಅಂದರೆ ಜಗತ್ತಿನ
ವ್ಯವಹಾರಕ್ಕೆ ಕಾರಣನಾದ ಸೂರ್ಯನ ಪ್ರತಿಕಿರಣಗಳೂ ವೈಶಿಷ್ಟ್ಯವೇ. ಆದ್ದರಿ
ಸ್ಥಿತಿಪಾಲಕನಾದ ವಿಷ್ಣುವನ್ನು ಪ್ರಾರ್ಥಿಸುವಾಗ 'ಚಂದ್ರಸೂರ್ಯೌಚನೇತ್ರೇ' ಎಂದು
ಸಹಸ್ರನಾಮಸ್ತೋತ್ರ ಪ್ರಾರಂಭದಲ್ಲಿ ವಿಷ್ಣುವಿನ ಸ್ವರೂಪವನ್ನು ಪ್ರಾರ್ಥಿಸುತ್ತೇವೆ.
ವಿರಾಡ್ರೂಪನಾದ ಭಗವಂತನ ಕಣ್ಣಿನ ಸ್ಥಾನ ಸೂರ್ಯಚಂದ್ರರಿಗೆ ಹೀಗೇ ಮುಂದು
(ಈಶ್ವರನನ್ನು) ಸಮಸ್ತ ಸಂಹಾರಕನಾದರೂ ಸಹ ಈಶ್ವರನನ್ನು ಧ್ಯಾನ ಮಾಡ
ಅವನನ್ನು ಸೋಮ ಸೂರ್ಯಾಗ್ನಿಲೋಚನಾಯ ಎಂದೂ 'ಸೋಮಸೂರ್ಯಾಗ್ನಿ
ಎಂದೂ ಪ್ರಾರ್ಥಿಸಿ ಈಶ್ವರನ ಕಣ್ಣೆಂದೂ ತಿಳಿಯುತ್ತೇವೆ. ಹೀಗೆ ಸೂರ್ಯಭಗ
ವಿಚಾರ, ಮಹಿಮೆಗಳನ್ನು ವರ್ಣಿಸಲು ನಾವೆಷ್ಟರವರು? ಅಂದರೆ ವರ್ಣಿಸಿ
ಕಡಿಮೆಯೇ ಆದೀತು. ಆದ್ದರಿಂದಲೇ ಗಾಯಿತ್ರೀ ಮಂತ್ರಕ್ಕೆ ಅಷ್ಟೊಂದು ಪ
ವಿಶೇಷತೆಯನ್ನು ನಮ್ಮ ಹಿಂದಿನ ಋಷಿವರ್ಯರು ಕಂಡು ಕೊಂಡರು. ಈಶ್ವರನೇ ಭ
ರೂಪವೆಂದ ಮೇಲೆ ವಜ್ರಕ್ಕೆ ಚಿನ್ನದ ಜತೆ ಸೇರಿದಂತೆ ಪಾವಿತ್ರ್ಯತೆ ಹೆಚ್ಚಾಯ್ತು. ಆದ
ಸೂರ್ಯನು ಅಧಿಪತಿಯಾದ ಭಾನುವಾರವು ಸರ್ವದೇವಾತ್ಮಕ, ಸರ್ವದೇವಪ್ರಿಯ
ಹೇಳಿ ಫಲವೈಶಿಷ್ಟ್ಯತೆಯನ್ನು ಸೂಚಿಸಿರುತ್ತಾರೆ. ವೈಜ್ಞಾನಿಕವಾಗಿ ಸಹಸೂರ್ಯನ
ಬಿಸಿಲು ಆರೋಗ್ಯಕರ. ಹೀಗೆ ಭಾಸ್ಕರನ ಪ್ರಭಾವ ನಮ್ಮಗಳಿಗೆ ಹೆಚ್ಚಾಗಿದೆ.

ಶಿಲವೃತ್ತ್ಯೋಂಛವೃತ್ತ್ಯಾ ಚ ಗುರುದಕ್ಷಿಣಯಾರ್ಜಿತಂ |
ಶುದ್ಧದ್ರವ್ಯಮಿತಿ ಪ್ರಾಹುಸ್ತತ್ಪೂರ್ಣಫಲದಂ ವಿದುಃ ||೩೯||

೩೯ ಶಿಲವೃತ್ತಿ, ಉಪಾದಾನ (ನಿತ್ಯಯಾತ್ರೆ) ಗುರುದಕ್ಷಿಣೆ ಇವುಗಳಿಂದ ಸಂಪಾ
ಧನವು ಪರಿಶುದ್ಧವಾದುದು ಎಂದು ಹೇಳಿದ್ದಾರೆ. ಅದು ಪೂರ್ಣಫಲ
ನೀಡುವುದೆಂದೂ ಹೇಳಿದ್ದಾರೆ.

**ಶುಕ್ಲಪ್ರತಿಗ್ರಹಾದ್ವತ್ತಂ ಮಧ್ಯಮಂ ದ್ರವ್ಯಮುಚ್ಯತೇ |**
**ಕೃಷಿವಾಣಿಜ್ಯಕೋಪೇತಮಧಮಂ ದ್ರವ್ಯಮುಚ್ಯತೇ ||೪೦||**

೪೦ ಪರಿಶುದ್ಧವಾದ ದಾನವನ್ನು ತೆಗೆದುಕೊಂಡು ಸಂಪಾದಿಸಿದ್ದು ಮಧ್ಯಮವಾದದ್ದು, ವ್ಯವಸಾಯ ವ್ಯಾಪಾರಗಳಿಂದ ಸಂಪಾದಿಸಿದ್ದು ಕನಿಷ್ಠವಾದ ದ್ರವ್ಯಾರ್ಜನೆ ಆಗುತ್ತದೆ.
ವಿ.ವಿ.:- ಇದು ಬ್ರಾಹ್ಮಣನ ಸಂಪಾದನೆಗೆ ಸಂಬಂಧಿಸಿದ ವಿಚಾರವಾಗುತ್ತದೆ.

**ಕ್ಷತ್ರಿಯಾಣಾಂ ವಿಶಾಂ ಚೈವ ಶೌರ್ಯವಾಣಿಜ್ಯಕಾರ್ಜಿತಂ |**
**ಉತ್ತಮಂ ದ್ರವ್ಯಮಿತ್ಯಾಹುಃ ಶೂದ್ರಾಣಾಂ ಭೃತಕಾರ್ಜಿತಂ ||೪೧||**

೪೧ ಕ್ಷತ್ರಿಯರು, ವೈಶ್ಯರಿಗೆ ಕ್ರಮವಾಗಿ ಶೌರ್ಯದಿಂದ, ವ್ಯಾಪಾರದಿಂದ ಸಂಪಾದಿಸಿದ ದ್ರವ್ಯವು ಉತ್ತಮ, ಶೂದ್ರರಿಗೆ ಸೇವೆಯಿಂದ ಸಂಪಾದಿಸಿದ ದ್ರವ್ಯವು ಉತ್ತಮ.
ವಿ.ವಿ.:-ಇಲ್ಲಿ ಈ ವಿಚಾರವನ್ನು ಏಕೆ ಪ್ರಸ್ತಾಪ ಮಾಡಿದ್ದಾರೆಂದರೆ ಉತ್ತಮವಾದ ಸಂಪಾದನೆಯಿಂದ ಬಂದ ಹಣದಿಂದ ದಾನ ಮಾಡುವುದು ಉತ್ತಮವೆಂಬ ಅಭಿಪ್ರಾಯದಿಂದ,

**ಸ್ತ್ರೀಣಾಂ ಧರ್ಮಾರ್ಥಿನಾಂ ದ್ರವ್ಯಂ ಪೈತೃಕಂ ಭರ್ತೃಕಂ ತಥಾ |**
**ಗವಾದೀನಾಂ ದ್ವಾದಶಾನಾಂ ಚೈತ್ರಾದಿಷು ಯಥಾಕ್ರಮಂ ||೪೨||**

೪೨ ಧರ್ಮಾರ್ಥಿಗಳಾದ ಹೆಂಗಸರಿಗೆ ತಂದೆಗೆ ಸಂಬಂಧಿಸಿದ ಮತ್ತು ಪತಿಯ ಸಂಬಂಧಿಸಿ ಧನವು ಉತ್ತಮವಾದುದು, ಹಸುವೇ ಮುಂತಾದ ಮುಂದೆ ಹೇಳುವ ಹನ್ನೆರಡು ವಸ್ತುಗಳನ್ನು ಕ್ರಮವಾಗಿ ಚೈತ್ರಾದಿ ಮಾಸಗಳಲ್ಲಿ ದಾನ ಮಾಡಬೇಕು.

**ಸಂಭೂಯ ವಾ ಪುಣ್ಯಕಾಲೇ ದದ್ಯಾದಿಷ್ಟಾರ್ಥಸಿದ್ಧಯೇ |**
**ಗೋಭೂತಿಲಹಿರಣ್ಯಾಜ್ಯವಾಸೋಧಾನ್ಯಗುಡಾನಿ ಚ ||೪೩||**

೪೩ ಈ ತಿಂಗಳುಗಳಲ್ಲಿ ಯಾವುದಾದರೂ ಪುಣ್ಯಕಾಲಗಳಲ್ಲಿ ಇಷ್ಟಾರ್ಥಸಿದ್ಧಿಗಾಗಿ ದಾನ ಮಾಡಬೇಕು. ಅವು ಯಾವುವೆಂದರೆ ಹಸು, ಭೂಮಿ, ಎಳ್ಳು, ಚಿನ್ನ, ತಂಪು ಬಟ್ಟೆ, ಧಾನ್ಯ,

ರೌಪ್ಯಂ ಲವಣಕೂಷ್ಮಾಂಡೇ ಕನ್ಯಾ ದ್ವಾದಶಕಂ ತಥಾ ।
ಗೋದಾನಾದ್ದತ್ತಗವ್ಯೇನ ಗೋಮಯೇನೋಪಕಾರಿಣಾ ॥೪೪॥

೪೪ ಬೆಳ್ಳಿ, ಉಪ್ಪು, ಕುಂಬಳಕಾಯಿ, ಕನ್ಯಾ ಎಂಬುದಾಗಿ ಹನ್ನೆರಡು ವಸ್ತುಗಳನ್ನು ದಾನ ಮಾಡಬೇಕು.

ಧನಧಾನ್ಯಾದ್ಯಾಶ್ರಿತಾನಾಂ ದುರಿತಾನಾಂ ನಿವಾರಣಂ ।
ಜಲಸ್ನೇಹಾದ್ಯಾಶ್ರಿತಾನಾಂ ದುರಿತಾನಾಂ ತು ಗೋಜಲೈಃ ॥೪೫॥

೪೫ ಗೋದಾನದಿಂದ ಬೆಣ್ಣೆ, ತುಪ್ಪ ಮತ್ತು ಹಸುವಿನ ಸಗಣಿಗಳಿಂದ ಹಣ ಮತ್ತು ಧಾನ್ಯವನ್ನು ಉಪಯೋಗಿಸುವಿಕೆಯಿಂದ ಬರುವ ಪಾಪಗಳು ನಾಶವಾಗುವುವು. ನೀರು, ಎಣ್ಣೆ ಮುಂತಾದುವನ್ನು ಉಪಯೋಗಿಸುವುದರಿಂದ ಉಂಟಾಗುವ ದೋಷಗಳು ನಿವಾರಣೆಯಾಗುವುದು ಅದು ಗೋಮೂತ್ರದಿಂದ,

ಕಾಯಿಕಾದಿತ್ರಯಾಣಾಂ ತು ಕ್ಷೀರದಧ್ಯಾಜ್ಯಕೈಸ್ತಥಾ ।
ತಥಾ ತೇಷಾಂ ಚ ಪುಷ್ಟಿಶ್ಚ ವಿಜ್ಞೇಯಾ ಹಿ ವಿಪಶ್ಚಿತಾ ॥೪೬॥

೪೬ ದೇಹ, ಮಾತು, ಮನಸ್ಸಿನಿಂದ ಉಂಟಾಗುವ ಪಾಪಗಳು ಹಾಲು, ಮೊಸರು, ತುಪ್ಪಗಳಿಂದ ನಾಶವಾಗುವುವು. ಹಾಗೇ ದಾನ ಮಾಡಿದವನ ಮನೆಯಲ್ಲಿ ಸಹ ಹಾಲು, ಮೊಸರು, ತುಪ್ಪಗಳು ಸಮೃದ್ಧವಾಗುವುದು.

ವಿ.ವಿ.:- ಗೋದಾನದಿಂದ ಎಲ್ಲಾ ದೇವತೆಗಳೂ ಪ್ರೀತರಾಗುವರು. ಗೋದಾನಮಾಡುವಿಕೆಯಿಂದ ಕೇವಲ ಗೋದಾನದ ಫಲವಲ್ಲದೇ ಗತ್ಯದಿಂದ ಸಹ ಅಂದರೆ ಹಸುವಿನಿಂದಾಗುವ ಹಾಲೇ ಮುಂತಾದ ಪದಾರ್ಥಗಳನ್ನು ದಾನ ಮಾಡಿದಂತಾಗಿ ಮೇಲೆ ಹೇಳಿದ ಪಾಪಗಳು ನಾಶವಾಗುವುದೆಂದ ತಾತ್ಪರ್ಯವು.

ಭೂದಾನಂ ತು ಪ್ರತಿಷ್ಠಾರ್ಥಮಿಹ ಚಾಮುತ್ರ ಚ ದ್ವಿಜಾಃ ।
ತಿಲದಾನಂ ಬಲಾರ್ಥಂ ಹಿ ಸದಾ ಮೃತ್ಯುಜಯಂ ವಿದುಃ ॥೪೭॥

೪೭ ಭೂದಾನದಿಂದ ಇಲ್ಲಿ ಮತ್ತು ಪರಲೋಕದಲ್ಲಿ ಸಹ ವಿಶೇಷವಾದ ಸ್ಥಾನ ಲಭ್ಯವಾಗುವುದು. ಎಳ್ಳಿನದಾನದಿಂದ ಬಲವುಂಟಾಗುವುದು ಹಾಗೇ ಅಪಮೃತ್ಯು ನಾಶವಾಗುವುದು.

ವಿ.ವಿ.:- ತಿಲದಾನದ ವೈಶಿಷ್ಟ್ಯವು ಅನೇಕ ಕಡೆಗಳಲ್ಲಿ ವಿಶೇಷವಾಗಿ ವಿವರಿಸಲ್ಪಡುವುದು. 'ತಿಲಾಃ ಪಾಪಹರಃ ನಿತ್ಯಂ' ಎಂದೂ ಅಂದರೆ ಪಾಪಗಳನ್ನು ನಾಶಪಡಿಸುವುದೆಂದೂ ಹೇಳಿದೆ. ಆಗಮಶಾಸ್ತ್ರದಲ್ಲಿ ಸಹ ಶ್ರಾವಣ ಮಾಸದಲ್ಲಿ ತಿಲಪೂಜಾ ದಾನಾದಿಗಳು ಹೇಳಲ್ಪಟ್ಟಿದೆ. ವೇದದಲ್ಲೂ ಸಹ ತಿಲದ ವೈಶಿಷ್ಟ್ಯತೆಯನ್ನು ಹೀಗೆ ಹೇಳಿದೆ. ತಿಲಾಃ ಪುನಂತು ಮೇ ಪಾಪಂ ಯತ್ಕಿಂಚದ್ದುರಿತಂ ಮಯ ಸ್ವಾಹಾಃ ಚೋರಸ್ಯಾನ್ನಂ ನವ ಶ್ರಾದ್ಧಂ ಬ್ರಹ್ಮಹಾ ಗುರುತಲ್ಪಗಃ ಗೋಸ್ತೇಯಾಗಂ ಸುರಪಾನಂ ಭ್ರೂಣಹತ್ಯಾ ತಿಲಾ ಶಾಂತಿಗ್ ಶಮಯಂತು ಸ್ವಾಹಾ ಎಂದರೆ ಎಳ್ಳು ನಮ್ಮ ಪಾಪಗಳನ್ನು ನಾಶಪಡಿಸುತ್ತದೆ. ಬ್ರಹ್ಮಹತ್ಯಾದಿ ಪಾಪಗಳನ್ನು ನಾಶಪಡಿಸುತ್ತದೆ. ಆದ್ದರಿಂದ ತಿಲದಾನಕ್ಕೆ ಸಮನಾದ ಉತ್ತಮ ದಾನ ಬೇರಾವುದಿಲ್ಲ.

**ಹಿರಣ್ಯಂ ಜಾಠರಾಗ್ನೇಸ್ತು ವೀರ್ಯದಂ ವೃದ್ಧಿದಂ ತಥಾ ।**
**ಆಜ್ಯಂ ಪುಷ್ಟಿಕರಂ ವಿದ್ಯಾದ್ವಸ್ತ್ರಮಾಯುಷ್ಕರಂ ವಿದುಃ ॥೪೮॥**

೪೮ ಚಿನ್ನವು ಜಾಠರಾಗ್ನಿಯನ್ನು ಅಭಿವೃದ್ಧಿಗೊಳಿಸುವುದು. ಸಾಮರ್ಥ್ಯವನ್ನು ನೀಡುವುದು, ತುಪ್ಪದ ದಾನದಿಂದ ದೇಹಪುಷ್ಟಿ ಉಂಟಾಗುವುದು. ವಸ್ತ್ರದಾನದಿಂದ ಆಯಸ್ಸು ಅಭಿವೃದ್ಧಿಯಾಗುವುದು.

**ಧಾನ್ಯಮನ್ನಸಮೃದ್ಧ್ಯರ್ಥಂ ಮಧುರಾಹಾರದಂ ಗುಡಂ ।**
**ರೌಪ್ಯಂ ರೇತೋಽಭಿವೃದ್ಧ್ಯರ್ಥಂ ಷಡ್ರಸಾರ್ಥಂ ತು ಲಾವಣಂ ॥೪೯॥**

೪೯ ಧಾನ್ಯದಾನದಿಂದ ಅನ್ನ ಸಮೃದ್ಧಿ ಉಂಟಾಗುವುದು. ಬೆಲ್ಲದ ದಾನದಿಂದ ಮಧುರಾ (ಸಿಹಿ) ಹಾರವು ಲಭ್ಯವಾಗುವುದು. ಬೆಳ್ಳಿಯ ದಾನದಿಂದ ರೇತಸ್ಸು ಅಭಿವೃದ್ಧಿಯಾದುವುದು. ಉಪ್ಪಿನ ದಾನದಿಂದ ಷಡ್ರಸಗಳು ಅಭಿವೃದ್ಧಿಯಾಗುವುದು.

**ಸರ್ವಂ ಸರ್ವಸಮೃದ್ಧ್ಯರ್ಥಂ ಕೂಷ್ಮಾಂಡಂ ಪುಷ್ಟಿದಂ ವಿದುಃ ।**
**ಪ್ರಾಪ್ತಿದಂ ಸರ್ವಭೋಗಾನಾಮಿಹ ಚಾಮುತ್ರ ಚ ದ್ವಿಜಾಃ ॥೫೦॥**

೫೦ ಕುಂಬಳಕಾಯಿಯನ್ನು ದಾನ ಮಾಡಿದರೆ ದೇಹ ಪುಷ್ಟಿಯುಂಟಾಗುವುದು. ಎಲ್ಲ ರೀತಿಯ ಸಮೃದ್ಧಿಗಾಗಿ ಎಲ್ಲವನ್ನೂ ದಾನ ಮಾಡಬಹುದು. ಹಾಗೆ ಮಾಡುವುದರಿಂದ ಇಹ ಮತ್ತು ಪರರಲ್ಲಿ ಎಲ್ಲ ಭೋಗ-ಭಾಗ್ಯಗಳು ದೊರಕುವುವು.

**ಯಾವಜ್ಜೀವನಮುಕ್ತಂ ಹಿ ಕನ್ಯಾದಾನಂ ತು ಭೋಗದಂ ।**
**ಪನಸಾಮ್ರಕಪಿತ್ಥಾನಾಂ ವೃಕ್ಷಾಣಾಂ ಫಲಮೇವ ಚ ॥೫೧॥**

೫೧ ಕನ್ಯಾದಾನ ಮಾಡಿದರೆ ತಾನು ಜೀವಿಸಿರುವ ಪರ್ಯಂತವೂ ಭೋಗಗಳ ಲಭಿಸುವುವು. ಹಲಸಿನ ಹಣ್ಣು, ಬೇಲದ ಹಣ್ಣು, ಮಾವಿನ ಹಣ್ಣು, ಬಾಳೇ ಹಣ್ಣು

**ಕದಲ್ಯಾದ್ಯೌಷಧೀನಾಂ ಚ ಫಲಂ ಗುಲ್ಮೋದ್ಭವಂ ತಥಾ ।**
**ಮಾಷಾದೀನಾಂ ಚ ಮುದ್ಗಾನಾಂ ಫಲಂ ಶಾಕಾದಿಕಂ ತಥಾ ॥೫೨॥**

೫೨ ಉಳಿದ ಉಪಯೋಗಿಸಲು ಯೋಗ್ಯವಾದ ಹಣ್ಣುಗಳು ಹಾಗೇ ಬಳ್ಳಿಗಳೇ ಬಿಡುವ ದ್ರಾಕ್ಷಿ ಮುಂತಾದ ಹಣ್ಣು, ಉದ್ದು, ಹೆಸರು ಮುಂತಾದ ಕಾಳುಗಳನು ತರಕಾರಿಗಳನ್ನು,

**ಮರೀಚಿಸರ್ಷಪಾದ್ಯಾನಾಂ ಶಾಕೋಪಕರಣಂ ತಥಾ ।**
**ಯದೃತೌ ಯತ್ಫಲಂ ಸಿದ್ಧಂ ತದ್ದೇಯಂ ಹಿ ವಿಪಶ್ಚಿತಾ ॥೫೩॥**

೫೩ ಮೆಣಸು, ಸಾಸಿವೆ ಮುಂತಾದ ಅಡಿಗೆ ಪದಾರ್ಥಗಳನ್ನು ಹಾಗೇ ಯಾವ ಯಾ ಋತುಗಳಲ್ಲಿ ಯಾವ ಯಾವ ಪದಾರ್ಥ, ಹಣ್ಣುಗಳು ಬಿಡುವುದೋ ಅದೆಲ್ಲವನ್ನು ಬುದ್ಧಿವಂತನು ದಾನ ಮಾಡಬೇಕು.

**ಶ್ರೋತ್ರಾದೀಂದ್ರಿಯತೃಪ್ತಿಶ್ಚ ಸದಾ ದೇಯಾ ವಿಪಶ್ಚಿತಾ ।**
**ಶಬ್ದಾದಿದಶಭೋಗಾರ್ಥಂ ದಿಗಾದೀನಾಂ ತು ತುಷ್ಟಿದಾ ॥೫೪॥**

೫೪ ಕಿವಿಯೇ ಮುಂತಾದ ಇಂದ್ರಿಯ ತೃಪ್ತಿಗಾಗಿ ಅದಕ್ಕೆ ಸಂಬಂಧಿಸಿದವುಗಳನ್ನು (ಸಂಗೀತ) ದಾನ ಮಾಡಬೇಕು. ಶಬ್ದಾದಿ ಹತ್ತು ಪದಾರ್ಥಗಳನ್ನು ದಾನ ಮಾಡಬೇಕು. ಇದರಿಂದ ದಿಗ್ ದೇವತೆಗಳು ತೃಪ್ತರಾಗುವರು ಅದರಿಂದ ಭೋಗ ಭಾಗ್ಯಗಳು ದೊರಕುವುವು.

ವಿ.ವಿ.:- ಕಿವಿ, ಚರ್ಮ, ಕಣ್ಣು, ನಾಲಿಗೆ, ಮೂಗು ಈ ಇಂದ್ರಿಯ ತೃಪ್ತಿ ಎಂದರೆ ಸುಶ್ರಾವ್ಯವಾದ ಸಂಗೀತ, ದೇವರ ನಾಮ ಕೇಳಿಸುವುದು. ಚರ್ಮಕ್ಕೆ ಅಂದರೆ ತೀರ್ಥ ಪ್ರಸಾದಗಳ ಲೇಪನ, ಕಣ್ಣಿಗೆ ಉತ್ತಮವಾದ ದೇವ ಸಂಬಂಧವಾದ ದೃಶ್ಯಗಳನ್ನು ತೋರಿಸುವಿಕೆ, ನಾಲಿಗೆಗೆ ಅಂದರೆ ಅವರವರಿಗೆ ಇಷ್ಟವಾದ ಪದಾರ್ಥಗಳನ್ನು ಮಾಡಿ

ಭೋಜನ ಮಾಡಿಸುವುದು. ಘ್ರಾಣೇಂದ್ರಿಯಕ್ಕೆ ಸುವಾಸನೆಯನ್ನು ಉಂಟುಮಾಡುವುದು. ಇಂದ್ರಿಯ ತೃಪ್ತಿಯಾಗುವುದು. ಹಾಗೇ ಕರ್ಮೇಂದ್ರಿಯಗಳು ಐದರ ತೃಪ್ತಿಯಿಂದ ಸಹ ದಿಗ್ದೇವತೆಗಳು ತೃಪ್ತರಾಗುವರು. ವಾಕ್-ಮಾತು, ಪಾಣಿ-ಕೈ, ಪಾದ, ಪಾಯು, ಉಪಸ್ಥಗಳೆಂಬ ಕರ್ಮಕ್ಕೆ ಸಂಬಂಧಿಸಿದ ಇಂದ್ರಿಯಗಳನ್ನು ಉತ್ತಮವಾದ ಪುರಾಣಶ್ರವಣ, ದಾನ, ಗಮನ, ಭೋಗಾದಿಗಳಿಂದ ತೃಪ್ತಪಡಿಸಬೇಕು.

**ವೇದಶಾಸ್ತ್ರಂ ಸಮಾದಾಯ ಬುದ್ಧ್ವಾ ಗುರುಮುಖಾತ್ಸ್ವಯಂ ।**
**ಕರ್ಮಣಾಂ ಫಲಮಸ್ತೀತಿ ಬುದ್ಧಿರಾಸ್ತಿಕ್ಯಮುಚ್ಯತೇ ॥೫೫॥**

೫೫ ಗುರುಮುಖದಿಂದ ವೇದಾಧ್ಯಯನ ಮತ್ತು ಶಾಸ್ತ್ರಾಧ್ಯಯನಗಳನ್ನು ಮಾಡಿ ಕರ್ಮಗಳಿಗೆ ಫಲ ಉಂಟೆಂದು ತಿಳಿಯುವುದೇ ಆಸ್ತಿಕ ಬುದ್ಧಿಯು.

**ಬಂಧುರಾಜಭಯಾದ್ಬುದ್ಧಿಃ ಶ್ರದ್ಧಾ ಸಾ ಚ ಕನೀಯಸೀ ।**
**ಸರ್ವಾಭಾವೇ ದರಿದ್ರಸ್ತು ವಾಚಾ ವಾ ಕರ್ಮಣಾ ಯಜೇತ್ ॥೫೬॥**

೫೬ ಇನ್ನು ಬಂಧು ಮತ್ತು ರಾಜನ ಭಯದಿಂದ ಸನ್ಮಾರ್ಗದಲ್ಲಿ ನಡೆಯುವ ಬುದ್ಧಿಯು ಶ್ರದ್ಧೆಯೆನಿಸಿಕೊಳ್ಳುವುದು. ಇದು ಆಸ್ತಿಕ್ಕೆ ಬುದ್ಧಿಗಿಂತ ಉತ್ತಮವಾದುದಲ್ಲ. ಪೂಜಿಸಲು ಯಾವ ಸಾಮಗ್ರಿಯೂ ಇಲ್ಲದ ದರಿದ್ರನು ಮಂತ್ರ ಪಠನಗಳಿಂದ, ಸತ್ಕರ್ಮಗಳಿಂದ ದೇವರನ್ನು ಪೂಜಿಸಬೇಕು.

**ವಾಚಿಕಂ ಯಜನಂ ವಿದ್ಯಾನ್ಮಂತ್ರಸ್ತೋತ್ರಜಪಾದಿಕಂ ।**
**ತೀರ್ಥಯಾತ್ರಾ ವ್ರತಾದ್ಯಂ ಹಿ ಕಾಯಿಕಂ ಯಜನಂ ವಿದುಃ ॥೫೭॥**

೫೭ ಮಂತ್ರಗಳ ಪಠನ, ಸ್ತೋತ್ರಗಳ ಪಠನ, ಜಪ ಮುಂತಾದುವು ವಾಕ್ಕಿನಿಂದ ಮಾಡುವ ಪೂಜೆಯು, ತೀರ್ಥಯಾತ್ರೆ, ವ್ರತಾಚರಣೆ ಮುಂತಾದುವು ದೇಹದಿಂದ ಮಾಡುವ ಭಗವತ್ಸೇವೆಯು.

**ಯೇನ ಕೇನಾಪ್ಯುಪಾಯೇನ ಹ್ಯಲ್ಪಂ ವಾ ಯದಿ ವಾ ಬಹು ।**
**ದೇವತಾರ್ಪಣಬುದ್ಧ್ಯಾ ಚ ಕೃತಂ ಭೋಗಾಯ ಕಲ್ಪತೇ ॥೫೮॥**

೫೮ ಈ ಮೇಲೆ ಹೇಳಿದ ಕರ್ಮಗಳನ್ನು ಯಾವ ರೀತಿಯಿಂದಲಾದರೂ ಸ್ವಲ್ಪವಾಗಲಿ

ಅಥವಾ ಹೆಚ್ಚಾಗಿಯೇ ಆಗಲಿ ದೇವತಾರ್ಪಣ ಬುದ್ಧಿಯಿಂದ ಮಾಡಿದ್ದೇ ಆದರೆ ಉತ್ತಮವಾದ ಭೋಗವು ಲಭಿಸುವುದು.

**ತಪಶ್ಚರ್ಯಾ ಚ ದಾನಂ ಚ ಕರ್ತವ್ಯಮುಭಯಂ ಸದಾ ।**
**ಪ್ರತಿಶ್ರಯಂ ಪ್ರದಾತವ್ಯಂ ಸ್ವವರ್ಣಂ ಗುಣಶೋಭಿತಂ ॥೫೯॥**

೫೯ ತಪಸ್ಸು, ದಾನ ಇವುಗಳನ್ನು ಸದಾ ಮಾಡುತ್ತಿರಬೇಕು. ಗುಣವಂತನಾದ ಸ್ವಜಾತಿಯವನಿಗೆ ಆಶ್ರಯ ನೀಡಬೇಕು.

**ದೇವಾನಾಂ ತೃಪ್ತಯೇಽತ್ಯರ್ಥಂ ಸರ್ವಭೋಗಪ್ರದಂ ಬುಧೈಃ ।**
**ಇಹಾಮುತ್ರೋತ್ತಮಂ ಜನ್ಮ ಸದಾ ಭೋಗಂ ಲಭೇದ್ಬುಧಃ ॥೬೦॥**

೬೦ ದೇವತೆಗಳ ತೃಪ್ತಿಗಾಗಿ ಸಕಲ ಭೋಗಗಳನ್ನು ನೀಡುವಂತಹ ಇಹ-ಪರಗಳಲ್ಲೂ ಉತ್ತಮ ಜನ್ಮ, ಉತ್ತಮವಾದ ಸಂಸ್ಕಾರ ಉಂಟಾಗುವುದಕ್ಕೋಸ್ಕರ ಸತ್ಕರ್ಮಗಳನ್ನು ಮಾಡಿದರೆ ಉತ್ತಮ ಭೋಗಗಳು ಲಭಿಸುವುದು.

**ಈಶ್ವರಾರ್ಪಣಬುದ್ಧ್ಯಾ ಹಿ ಕೃತ್ವಾ ಮೋಕ್ಷಫಲಂ ಲಭೇತ್ ।**
**ಯ ಇಮಂ ಪಠತೇಽಧ್ಯಾಯಂ ಯಃ ಶೃಣೋತಿ ನರಸ್ಸದಾ ॥೬೧॥**
**ತಸ್ಯ ವೈ ಧರ್ಮಬುದ್ಧಿಶ್ಚ ಜ್ಞಾನಸಿದ್ಧಿಃ ಪ್ರಜಾಯತೇ ।**

೬೧ ಮೇಲಿನ ಎಲ್ಲಾ ಕರ್ಮಗಳನ್ನು ಈಶ್ವರಾರ್ಪಣ ಬುದ್ಧಿಯಿಂದ ಮಾಡಿದ್ದಾದರೆ ಮೋಕ್ಷ ಫಲವು ಲಭ್ಯವಾಗುವುದು. ಯಾರು ಈ ಅಧ್ಯಾಯವನ್ನು ಓದುವರೋ, ಅಥವಾ ಯಾರು ಕೇಳುವರೋ ಅಂತಹವರಿಗೆ ಧರ್ಮಬುದ್ಧಿಯೂ, ಜ್ಞಾನಸಿದ್ಧಿಯೂ ಉಂಟಾಗುವುದು.

ವಿ.ವಿ.:- ಭಗವದ್ಗೀತೆಯಲ್ಲೂ ಸಹ ಈ ಅಂಶವನ್ನೇ ಶ್ರೀ ಕೃಷ್ಣ ಪರಮಾತ್ಮನು ತಿಳಿಸಿದ್ದಾನೆ. 'ಪರಸ್ಪರಂ ಭಾವಯಂತಃ ಶ್ರೇಯಃ ಪರಮವಾಪ್ಸ್ಯಥ' ಎಂದರೆ ದೇವತೆಗಳನ್ನು ನಾವು ಪೂಜಾದಿಗಳಿಂದ ತೃಪ್ತಿಪಡಿಸಿದರೆ ನಮ್ಮಗಳಿಗೆ ಸಕಲ ಭೋಗಗಳನ್ನು ಅನುಗ್ರಹಿಸಿ ಕಾಪಾಡುವರು ಪಂಚ ಭೂತಗಳಿಂದ ನಮಗೆ ಸುಖವನ್ನು ನೀಡುವರು.

ಈಶ್ವರಾರ್ಪಣ ಬುದ್ಧಿಯಿಂದ ಅಂದರೆ 'ಕರ್ಮಣ್ಯೇವಾಧಿಕಾರಸ್ತೇ ಮಾಫಲೇಷು ಕದಾಚನ' ಎಂಬ ಶ್ಲೋಕದ ಅಭಿಪ್ರಾಯವಾಗಿದೆ. ಕರ್ಮದಲ್ಲಿ ನಿನಗೆ ಅಧಿಕಾರ ಫಲದಲ್ಲಿಲ್ಲ.

ಅಂದರೆ ನಿನ್ನ ಕರ್ಮಕ್ಕೆ ತಕ್ಕಂತಹ ಫಲವನ್ನು ನಾನೇ ನೀಡುವೆನು ಎಂದರ್ಥ. ಅಂದರೆ ಕಾಮ್ಯಕರ್ಮವಾದರೆ ಭೋಗಾದಿ ಫಲ ನಿಷ್ಕಾಮ ಕರ್ಮವಾದರೆ ಮೋಕ್ಷಫಲಗಳನ್ನು ನೀಡುವನು ಎಂದು ಅಭಿಪ್ರಾಯ.

**ಇತಿ ಶ್ರೀ ಶಿವಮಹಾಪುರಾಣೇ ವಿದ್ಯೇಶ್ವರಸಂಹಿತಾಯಾಂ ಪಂಚದಶೋಽಧ್ಯಾಯಃ**
**ಇಲ್ಲಿಗೆ ಶ್ರೀ ಶಿವಮಹಾಪುರಾಣದ ವಿದ್ಯೇಶ್ವರ ಸಂಹಿತೆಯಲ್ಲಿ**
**ಹದಿನೈದನೇ ಅಧ್ಯಾಯವು ಮುಗಿದುದು.**

||ಶ್ರೀಃ||

||ಓಂ ನಮಃ ಶಿವಾಯ||

ಅಥ ಶ್ರೀ ಶಿವಮಹಾಪುರಾಣೇ
ವಿದ್ಯೇಶ್ವರಸಂಹಿತಾಯಾಂ

# ಷೋಡಶೋಽಧ್ಯಾಯಃ

## ಹದಿನಾರನೇ ಅಧ್ಯಾಯವು

||ಋಷಯ ಊಚುಃ||

ಪಾರ್ಥಿವಪ್ರತಿಮಾಪೂಜಾವಿಧಾನಂ ಬ್ರೂಹಿ ಸತ್ತಮ|
ಯೇನ ಪೂಜಾವಿಧಾನೇನ ಸರ್ವಾಭೀಷ್ಟಮವಾಪ್ಯತೇ ||೧||

೧ ಋಷಿಗಳು ಹೇಳುತ್ತಾರೆ. ಎಲೈ ಸೂತ ಮಹರ್ಷಿಯೇ ನಮಗೆ ಪಾರ್ಥಿವ ವಿಗ್ರಹದ ಪೂಜಾವಿಧಾನವನ್ನು ಹೇಳು. ಯಾವ ಪೂಜಾವಿಧಿಯಿಂದ ಸಕಲ ಇಷ್ಟಾರ್ಥಗಳೂ ಹೊಂದಬಹುದು.

||ಸೂತ ಉವಾಚ||

ಸುಸಾಧು ಪೃಷ್ಟಂ ಯುಷ್ಮಾಭಿಃ ಸದಾ ಸರ್ವಾರ್ಥದಾಯಕಂ |
ಸದ್ಯೋ ದುಃಖಸ್ಯ ಶಮನಂ ಶೃಣುತ ಪ್ರಬ್ರವೀಮಿ ವಃ ||೨||

೨ ಸೂತರು ಹೇಳುತ್ತಾರೆ. ಎಲೈ ಋಷಿಗಳಿರಾ ಚೆನ್ನಾಗಿ ಕೇಳಿದಿರಿ. ಸರ್ವಾರ್ಥಸಾಧಕವಾದ ಕೇಳಿದೊಡನೆ ಸಕಲ ದುಃಖಗಳನ್ನು ಪರಿಹರಿಸುವ ಈ ವಿಚಾರವನ್ನು ಹೇಳುತ್ತೇನೆ ಕೇಳಿರಿ.

ಅಪಮೃತ್ಯುಹರಂ ಕಾಲಮೃತ್ಯೋಶ್ಚಾಪಿ ವಿನಾಶನಂ |
ಸದ್ಯಃ ಕಲತ್ರಪುತ್ರಾದಿಧನಧಾನ್ಯಪ್ರದಂ ದ್ವಿಜಾಃ ||೩||

೩ ಮತ್ತು ನೀವು ಕೇಳಿದ ವಿಚಾರವು ಅಪಮೃತ್ಯು ಮತ್ತು ಕಾಲಮೃತ್ಯುಗಳನ್ನು ನಾಶಪಡಿಸುವಂತಹದು. ಬೇಗನೇ ಪತ್ನಿ, ಮಕ್ಕಳು, ಧನ, ಧಾನ್ಯಗಳನ್ನು ನೀಡುಂತಹದ್ದಾಗಿರುವುದು.

ಅನ್ನಾದಿಭೋಜ್ಯಂ ವಸ್ತ್ರಾದಿ ಸರ್ವಮುತ್ಪದ್ಯತೇ ಯತಃ ।
ಮೃದಾದಿಪ್ರತಿಮಾಪೂಜಾ ಸರ್ವಾಭೀಷ್ಟಪ್ರದಾ ಭುವಿ ॥೪॥

೪ ಅನ್ನ ಮೊದಲಾದ ಆಹಾರ ವಸ್ತುಗಳನ್ನು ವಸ್ತ್ರ ಮುಂತಾದ ಭೋಗ್ಯವಸ್ತುಗಳನ್ನು ನೀಡುವಂತಹದ್ದಾಗಿರುವುದು. ಭೂಮಿಯಲ್ಲಿ ಒಟ್ಟಿನಲ್ಲಿ ಹೇಳುವುದಾದರೆ ಮಣ್ಣು ಮೊದಲಾದ ಪದಾರ್ಥಗಳಿಂದ ನಿರ್ಮಿತವಾದ ವಿಗ್ರಹವು ಸಕಲೇಷ್ಟಾರ್ಥಗಳನ್ನು ನೀಡುವುದು.

ಪುರುಷಾಣಾಂ ಚ ನಾರೀಣಾಮಧಿಕಾರೋಽತ್ರ ನಿಶ್ಚಿತಂ ।
ನದ್ಯಾಂ ತಡಾಗೇ ಕೂಪೇ ವಾ ಜಲಾಂತಮೃರ್ದಮಾಹರೇತ್ ॥೫॥

೫ ಈ ಪಾರ್ಥಿವ ವಿಗ್ರಹ ಪೂಜೆಗೆ ಸ್ತ್ರೀಯರೂ ಪುರುಷರೂ ಅಧಿಕಾರವುಳ್ಳವರಾಗಿರುವರು. ಇಂತಹ ಮಣ್ಣಿನ ವಿಗ್ರಹವನ್ನು ತಯಾರಿಸುವುದಕ್ಕಾಗಿ ಮಹಾನದೀ, ಸರೋವರ ಬಾವಿ ಮುಂತಾದುವುಗಳ ಮಣ್ಣನ್ನು ತರಬೇಕು.

ಸಂಶೋಧ್ಯ ಗಂಧಚೂರ್ಣೇನ ಪೇಷಯಿತ್ವಾ ಸುಮಂಡಪೇ ।
ಹಸ್ತೇನ ಪ್ರತಿಮಾಂ ಕುರ್ಯಾತ್ಕ್ಷೀರೇಣ ಚ ಸುಸಂಸ್ಕೃತಾಂ ॥೬॥

೬ ಹಾಗೆ ತಂದಥಹ ಮಣ್ಣನ್ನು ಶುದ್ಧಿ ಮಾಡಿ ಗಂಧದ ಪುಡಿಯನ್ನು ಬೆರೆಸಿ ಹದವಾಗಿ ಕಲಸಬೇಕು. ಹಾಲನ್ನು ಸೇರಿಸಿ ಕೈಯಿಂದ ವಿಗ್ರಹವನ್ನು ಮಾಡಬೇಕು.

ಅಂಗಪ್ರತ್ಯಂಗಕೋಪೇತಾಮಾಯುಧೈಶ್ಚ ಸಮನ್ವಿತಾಂ ।
ಪದ್ಮಾಸನಸ್ಥಿತಾಂ ಕೃತ್ವಾ ಪೂಜಯೇದಾದರೇಣ ಹಿ ॥೭॥

೭ ಅಂಗ, ಪ್ರತ್ಯಂಗಗಳಿಂದ ಕೂಡಿದ ಹಾಗೇ ಆ ದೇವತಾ ಸಂಬಂಧವಾದ ಆಯುಧಗಳಿಂದಲೂ ಕೂಡಿರುವಂತೆ ಹಾಗೆ ಪದ್ಮಾಸನದಲ್ಲಿ ಕುಳಿತಿರುವಂತ ನಿರ್ಮಿಸಿ ಭಕ್ತಿ ಶ್ರದ್ಧೆಗಳಿಂದ ಪೂಜಿಸಬೇಕು.

ವಿ.ವಿ.:- ಅಂಗವೆಂದರೆ ತಲೆ, ಕೈ, ಕಾಲು ಮೊದಲಾದ ಪ್ರಧಾನ ಅಂಗಗಳು, ಪ್ರತ್ಯಂಗವೆಂದರೆ ಕಿವಿ, ಬೆರಳು, ಇತ್ಯಾದಿ ಸಣ್ಣದಾಗಿರುವ ಅಂಗಗಳು.

ವಿಘ್ನೇಶಾದಿತ್ಯವಿಷ್ಣೂನಾಮುಂದಾಯಾಶ್ಚ ಶಿವಸ್ಯ ಚ ।
ಶಿವಸ್ಯ ಶಿವಲಿಂಗಂ ಚ ಸರ್ವದಾ ಪೂಜಯೇದ್ದ್ವಿಜಃ ॥೮॥

೮ ಗಣಪತಿ, ಸೂರ್ಯ, ವಿಷ್ಣು, ಪಾರ್ವತಿ ಮತ್ತು ಶಿವನ ವಿಗ್ರಹಗಳನ್ನು ಶಿವಲಿಂಗವನ್ನು ಸಹ ನಿರ್ಮಿಸಿ ಪೂಜಿಸಬೇಕು.

**ಷೋಡಶೈರುಪಚಾರೈಶ್ಚ ಕುರ್ಯಾತ್ತತ್ಫಲಸಿದ್ಧಯೇ।**
**ಪುಷ್ಪೇಣ ಪ್ರೋಕ್ಷಣಂ ಕುರ್ಯಾದಭಿಷೇಕಂ ಸಮಂತ್ರಕಂ ॥೯॥**

೯ ಹೀಗೆ ನಿರ್ಮಿಸಿ ಷೋಡಶೋಪಚಾರಗಳಿಂದ ಪೂಜಿಸಿದ್ದೇ ಆದರೆ ಅದಕ್ಕೆ ತಕ್ಕಂತಹ ಫಲ ಸಿದ್ಧಿಯಾಗುವುದು. ಹೂವಿನಿಂದ ಪ್ರೋಕ್ಷಣೆ ಮಾಡಿ ಮಂತ್ರಸಹಿತ ಅಭಿಷೇಕವನ್ನು ವಿಗ್ರಹಕ್ಕೆ ಮಾಡಬೇಕು.

**ಶಾಲ್ಯನ್ನೇನೈವ ನೈವೇದ್ಯಂ ಸರ್ವಂ ಕುಡವಮಾನತಃ।**
**ಗೃಹಂ ತು ಕುಡವಂ ಜ್ಞೇಯಂ ಮಾನುಷೇ ಪ್ರಸ್ಥಮಿಷ್ಯತೇ ॥೧೦॥**

೧೦ ಶಾಲ್ಯನ್ನದಿಂದ ನೈವೇದ್ಯ ಮಾಡಬೇಕು. ಇಂತಹ ನೈವೇದ್ಯವು ಒಂದು ಕುಡುವ ಪ್ರಮಾಣವಿರಬೇಕು. ಮನೆಯ ದೇವರುಗಳಿಗೆ ಕುಡುವ ಪ್ರಮಾಣ, ಮನುಷ್ಯರಿಂದ ಸ್ಥಾಪಿಸಲ್ಪಟ್ಟ ದೇವಾಲಯದ ದೇವರುಗಳಿಗೆ ಪ್ರಸ್ಥ ಪ್ರಮಾಣವಿರಬೇಕು.

**ದೈವೇ ಪ್ರಸ್ಥತ್ರಯಂ ಯೋಗ್ಯಂ ಸ್ವಯಂಭೋಃ ಪ್ರಸ್ಥಪಂಚಕಂ।**
**ಏವಂ ಪೂರ್ಣಫಲಂ ವಿದ್ಯಾದಧಿಕಂ ವೈ ದ್ವಯಂ ತ್ರಯಂ ॥೧೧॥**

೧೧ ದೇವತೆಗಳಿಂದ ಪ್ರತಿಷ್ಠಾಪಿಸಲ್ಪಟ್ಟ ದೇವರುಗಳಿಗೆ ಮೂರು ಪ್ರಸ್ಥ ಪ್ರಮಾಣವು, ಉದ್ಭವ ಲಿಂಗ (ಸ್ವಯಂ ಉದ್ಭಾವ)ಗಳು ಮುಂತಾದ ಮೂರ್ತಿಗಳಿಗೆ ಐದು ಪ್ರಸ್ಥ ಪ್ರಮಾಣವೂ ನಿವೇದನವಾಗಬೇಕು. ಈ ರೀತಿ ಅನುಸರಿಸಿದರೆ ಪೂರ್ಣವಾದ ಫಲಪ್ರಾಪ್ತವಾಗುವುದು. ಇದಕ್ಕೆ ಹೆಚ್ಚಾಗಿ ನಿವೇದನೆ ಮಾಡಿದ್ದಾದರೆ ಅದಕ್ಕೆ ತಕ್ಕಂತೆ ಅದರ ಎರಡರಷ್ಟು, ಮೂರರಷ್ಟು, ಫಲಪ್ರಾಪ್ತವಾಗುವುದು.

ವಿ.ವಿ.:- ಪ್ರಸ್ಥ ಎಂದರೆ ೧ ಸೇರು
ಕುಡುವ ಎಂದರೆ ೧ ಪಾವು
೪ ಕುಡುವ =೧ ಪ್ರಸ್ಥ ಎಂದರೆ ೧ ಸೇರು
ಆಢಕ ಎಂದರೆ ೪ ಸೇರು. ಈ ರೀತಿ ಈಗಿನ ಅಳತೆ ಪ್ರಮಾಣ ತಿಳಿಯುವುದು.

ಸಹಸ್ರಪೂಜಾಯಾ ಸತ್ಯಂ ಸ್ತ್ಯಯಲೋಕಂ ಲಭೇದ್ದ್ವಿಜಃ
।ದ್ವಾದಶಾಂಗುಲಮಾಯಾಮಂ ದ್ವಿಗುಣಂ ಚ ತತೋಽಧಿಕಂ ॥೧೨॥
ಪ್ರಮಾಣಮಂಗುಲಸ್ಯೈಕಂ ತದೂರ್ಧ್ವಂ ಪಂಚಕತ್ರಯಂ ।
ಆಯೋದಾರುಕೃತಂ ಪಾತ್ರಂ ಶಿವಮಿತ್ಯುಚ್ಯತೇ ಬುಧೈಃ ॥೧೩॥

೧೨, ೧೩ ಸಹಸ್ರ ಪೂಜೆಯನ್ನು ಮಾಡಿದರೆ ಸತ್ಯ ಲೋಕ ಪ್ರಾಪ್ತವಾಗುವುದು. ಹನ್ನೆರಡು ಅಂಗುಲ ಅಗಲ, ಹದಿನೈದು ಅಂಗುಲ ಎತ್ತರ, ಒಂದಂಗುಲ ದಪ್ಪವಾಗಿ ಇರುವ ಕಬ್ಬಿಣ ಮತ್ತು ಮರದಿಂದ ಮಾಡಲ್ಪಟ್ಟ ಅಳತೆಗೆ 'ಶಿವ' ಎಂದು ಹೆಸರು.

ತದಷ್ಟಭಾಗಃ ಪ್ರಸ್ಥಸ್ಸ್ಯಾತ್ತಚ್ಚತಃ ಕುಡವಂ ಮತಂ ।
ದಶಪ್ರಸ್ಥಂ ಶತಪ್ರಸ್ಥಂ ಸಹಸ್ರಪ್ರಸ್ಥಮೇವ ಚ ॥೧೪॥

೧೪ ಇದರ ಎಂಟನೇ ಭಾಗಕ್ಕೆ ಪ್ರಸ್ಥ ಪ್ರಮಾಣವೆಂದು ಹೆಸರು. ಇದರ ನಾಲ್ಕನೇ ಒಂದು ಭಾಗಕ್ಕೆ ಕುಡುವ ಎಂದು ಹೆಸರು. ಹತ್ತು ಪ್ರಸ್ಥ, ನೂರು ಪ್ರಸ್ಥ, ಸಾವಿರ ಪ್ರಸ್ಥ,

ಜಲತೈಲಾದಿಗಂಧಾನಾಂ ಯಥಾಯೋಗ್ಯಂ ಚ ಮಾನತಃ ।
ಮಾನುಷಾರ್ಷಸ್ವಯಂಭೂನಾಂ ಮಹಾಪೂಜೇತಿ ಕಥ್ಯತೇ ॥೧೫॥

೧೫ ಪ್ರಮಾಣ, ನೀರು, ಎಣ್ಣೆ ಮತ್ತು ಗಂಧ ಮೊದಲಾದುವನ್ನು ಕ್ರಮವಾಗಿ ಮಾನುಷ ಋಷಿ ಪ್ರೋಕ್ತ, ಸ್ವಯಂಭೂ ದೇವರುಗಳಿಗೆ ಅರ್ಪಿಸಿದರೆ ಅದಕ್ಕೆ ಮಹಾಪೂಜೆಯೆಂದು ಹೆಸರು.

ಅಭಿಷೇಕಾದಾತ್ಮಶುದ್ಧಿರ್ಗಂಧಾತ್ಪುಣ್ಯಮವಾಪ್ಯತೇ ।
ಆಯುಸ್ತೃಪ್ತಿಶ್ಚ ನೈವೇದ್ಯಾದ್ಧೂಪಾದರ್ಥಮವಾಪ್ಯತೇ ॥೧೬॥

೧೬ ದೇವರುಗಳಿಗೆ ಅಭಿಷೇಕ ಮಾಡುವಿಕೆಯಿಂದ ಆತ್ಮಶುದ್ಧಿಯೂ, ಗಂಧ ಸಮರ್ಪಣೆಯಿಂದ ಪುಣ್ಯವೂ, ನೈವೇದ್ಯ ಮಾಡುವಿಕೆಯಿಂದ ಆಯಸ್ಸು, ತೃಪ್ತಿಯೂ, ಧೂಪದಿಂದ ಧನವೂ ಪ್ರಾಪ್ತವಾಗುತ್ತದೆ.

ದೀಪಾಜ್ಞಾನಮವಾಪ್ನೋತಿ ತಾಂಬೂಲಾದ್ಭೋಗಮಾಪ್ನುಯಾತ್ ।
ತಸ್ಮಾತ್ಸ್ನಾನಾದಿಕಂ ಷಟ್ಕಂ ಪ್ರಯತ್ನೇನ ಪ್ರಸಾಧಯೇತ್ ॥೧೭॥

೧೭ ದೀಪ ಸಮರ್ಪಣೆಯಿಂದ ಜ್ಞಾನವೂ, ತಾಂಬೂಲ ನಿವೇದನದಿಂದ ಭೋಗವೂ ದೊರಕುವುದು. ಆದ್ದರಿಂದ ಈ ಮೇಲೆ ಹೇಳಿದ ಸ್ನಾನವೇ ಮೊದಲಾದ ಆರು ಉಪಚಾರಗಳನ್ನು ಪ್ರಯತ್ನ ಪೂರ್ವಕವಾಗಿ ಮಾಡಬೇಕು.

ನಮಸ್ಕಾರೋ ಜಪಶ್ಚೈವ ಸರ್ವಾಭೀಷ್ಟಪ್ರದಾವುಭೌ ।
ಪೂಜಾಂತೇ ಚ ಸದಾ ಕಾರ್ಯೌ ಭೋಗಮೋಕ್ಷಾರ್ಥಿಭಿರ್ನರೈಃ ।\f2 18।।

೧೮ ದೇವರಿಗೆ ಮಾಡುವ ಸಾಷ್ಟಾಂಗ ನಮಸ್ಕಾರ ಮತ್ತು ಜಪಗಳು ಸಕಲಾಭೀಷ್ಟಗಳನ್ನು ನೀಡುವುದು. ಈ ಎರಡು ಕಾರ್ಯಗಳನ್ನು ಭೋಗ ಮೋಕ್ಷವನ್ನಪೇಕ್ಷಿಸುವವರು, ಪೂಜೆಯ ಕೊನೆಯಲ್ಲಿ ಮಾಡಬೇಕು.

ಸಂಪೂಜ್ಯ ಮನಸಾ ಪೂರ್ವಂ ಕುರ್ಯಾತ್ತತ್ತತ್ಸದಾ ನರಃ ।
ದೇವಾನಾಂ ಪೂಜಯಾ ಚೈವ ತತ್ತಲ್ಲೋಕಮವಾಪ್ನುಯಾತ್ ।।೧೯।।

೧೯ ಮೊದಲು ಪರಿಶುದ್ಧವಾದ ಮನಸ್ಸಿನಿಂದ ಚೆನ್ನಾಗಿ ಪೂಜಿಸಿ ನಂತರ ಆ ದೇವತಾ ಸಂಬಂಧವಾದ ಕಾರ್ಯಗಳನ್ನು (ಮೇಲೆ ಹೇಳಿದ) ಮಾಡಬೇಕು. ನಾವುಯಾವ ದೇವತೆಯನ್ನುಪೂಜಿಸುತ್ತೇವೆಯೋ ಆ ದೇವತಾಲೋಕ ಪ್ರಾಪ್ತವಾಗುವುದು.

ತದವಾಂತರಲೋಕೇ ಚ ಯಥೇಷ್ಟಂ ಭೋಗ್ಯಮಾಪ್ಯತೇ ।
ತದ್ವಿಶೇಷಾನ್ ಪ್ರವಕ್ಷ್ಯಾಮಿ ಶೃಣುತ ಶ್ರದ್ಧಯಾ ದ್ವಿಜಾಃ ।।೨೦।।

೨೦ ನಂತರ ಆ ಲೋಕಗಳನ್ನು ಹೊಂದಿ ಅಲ್ಲಿ ಬೇಕಾದ ಭೋಗಗಳನ್ನು ಅನುಭವಿಸಬಹುದು. ಎಲೈ ಬ್ರಾಹ್ಮಣೋತ್ತಮರೇ ಆದಿಶೇಷತೆಯನ್ನು ಹೇಳುತ್ತೇನೆ, ಕೇಳಿರಿ.

ವಿಘ್ನೇಶಪೂಜಯಾ ಸಮ್ಯಗ್ಭೂರ್ಲೋಕೇಽಭಿಷ್ಟಮಾಪ್ನುಯಾತ್ ।
ಶುಕ್ರವಾರೇ ಚತುರ್ಥ್ಯಾಂ ಚ ಸಿತೇ ಶ್ರಾವಣಭಾದ್ರಕೇ ।।೨೧।।

೨೧ ಗಣಪತಿಯನ್ನು ಪೂಜಿಸುವಿಕೆಯಿಂದ ಭೂಲೋಕದಲ್ಲಿ ಎಲ್ಲಾ ಇಷ್ಟಾರ್ಥಗಳೂ ಲಭಿಸುವುವು. ಈ ಗಣಪತಿಯ ಪೂಜೆಯು ಶುಕ್ರವಾರ, ಶುಷ್ಟ ಚತುರ್ಥೀ ತಿಥಿಯಲ್ಲಿ (ಶುಕ್ಲ ಚತುರ್ಥಿ) ಶ್ರಾವಣ ಭಾದ್ರಪದ ಮಾಸದ ಶುಕ್ಲ ಚತುರ್ಥಿಯಲ್ಲಿ ವಿಶೇಷ ಫಲದಾಯಿನಿಯು.

ವಿ.ವಿ.:- ಪೂಜೆ ಎಂದರೆ ನಾವು ಹೀಗೆ ವಿಚಾರ ಮಾಡಬಹುದು. ಭೂಮಿ, ನೀರು, ಅಗ್ನಿ, ವಾಯು, ಆಕಾಶಗಳೆಂಬ ಪಂಚಭೂತಗಳಿಂದ ಉಪಕಾರವನ್ನು ಹೊಂದುತ್ತಿರುವ ನಾವು ಈ ಐದರಿಂದಾದ ಶರೀರವುಳ್ಳವರು. ಇದಕ್ಕೆ ಕೃತಜ್ಞತೆಯನ್ನು ಸಲ್ಲಿಸುವುದೇ ಪೂಜೆಯು. ಈ ಐದೂ ಪರಮಾತ್ಮನಾದ ಪ್ರತಿಯೊಂದು ಜೀವಿಗಳ ಕ್ಷೇಮಕ್ಕಾಗಿ ಸೃಷ್ಟಿಸಲ್ಪಟ್ಟಿತು. ಇದನ್ನೇ ತೈತ್ರರೀಯೋಪನಿಷತ್ತಿನಲ್ಲಿ ಆತ್ಮನ ಆಕಾಶಸ್ಸಂಭೂತಃ ಆಕಾಶಾದ್ವಾಯುಃ ವಾಯೋರಗ್ನಿಃ ಆಗ್ನೇರಾಮ ಅದ್ಭ್ಯಃ ಪೃಥವೀ ಪೃಥಿವ್ಯಾ ಓಷಧಯಃ ಓಷಧೀಭ್ಯೋಪ್ಯನ್ನಂ, ಅನ್ನಾಪುರುಷಃ ಸವಾ ಏಷಪುರುಷೋನ್ನರಸಮಯಃ ಎಂದು ಮನುಷ್ಯನು ಅನ್ನರಸಮಯನಾಗಲು ಪಂಚಭೂತಗಳು ಹೇಗೆ ಸಹಕರಿಸಿವೆ ಎಂದು ತಿಳಿಯಬಹುದು. ಹಾಗೇ ಈ ಐದರ ಅಂಶಗಳು ದೇಹದಲ್ಲಿದ್ದು ತಮ್ಮ ತಮ್ಮ ಕಾರ್ಯಗಳನ್ನು ನೆರವೇರಿಸುತ್ತಿವೆ. ಆದ್ದರಿಂದ ಇದಕ್ಕೆಲ್ಲಾ ಕಾರಣನಾದ ಪರಮಾತ್ಮನಿಗೆ ಇವುಗಳಿಂದಲೇ ಉಪಚರಿಸುವುದೇ ಪೂಜೆ ಎನ್ನಬಹುದು. ಹೇಗೆಂದರೆ ಭೂಸಂಭಂದವಾದದ್ದು, ಗಂಧ, ಸುವಾಸನೆ ಇಂದ ಕೂಡಿದದ್ದು, ಪತ್ರೆ, ತುಲಸಿ ಇತ್ಯಾದಿಗಳು ವಾಯ್ವಾತ್ಮಕವಾದದ್ದು ಧೂಪ, ಅಗ್ನ್ಯಾತಕ್ರವಾದದ್ದು ಧೀಠ, ಜಲಸಂಬಂಧವಾದದ್ದು, ಅಭಿಷೇಕ, ಅರ್ಘ್ಯ, ಪಾದ್ಯಾ ಚಮನಗಳು, ದೇವತಾಸಂಬಂಧವಾದ ಮಂತ್ರ, ಸ್ತೋತ್ರ ಇತ್ಯಾದಿಗಳು ಆಕಾಶ ಸಂಬಂಧವಾದದ್ದು ಏಕೆಂದರೆ ಖಾಲಿ ಜಾಗವಿದ್ದರೇ ಶಬ್ದ ಉತ್ಪತ್ತಿ ಆಗುವುದು ಇದನ್ನೇ ಶಬ್ದ ಗುಣ ಮಾಕಾಶಂ ಎಂದಿದ್ದಾರೆ. ಹೀಗೆ ಅವನು ನೀಡಿರುವ ವಸ್ತುಗಳನ್ನು ಅವನಿಗೆ ಸಮರ್ಪಿಸಿ ಎಲ್ಲವೂ ಅವನ ಅನುಗ್ರಹವೇ ಎಂದು ತಿಳಿಯುವುದು. ನನ್ನದೆನ್ನುವುದನ್ನು ಮರೆಯುವುದೇ ಭಗವಂತನಿಗೆ ಅರ್ಪಿಸುವ ಪೂಜೆ ಎನಿಸಿದೆ. ಇದನ್ನೇ ದಾಸ ಶ್ರೇಷ್ಟರಾದ ಪುರಂದರ ದಾಸರು ಕೆರೆಯ ನೀರನ್ನು ಕೆರೆಗೆ ಚೆಲ್ಲಿ ವರವ ಪಡೆದವರಂತೆ ಕಾಣಿರೋ ಎಂದು ಅತ್ಯಂತ ಮಾರ್ಮಿಕವಾಗಿ ತಿಳಿಸಿದರು. ಹೀಗೆ ಪೂಜಾ ವೈಶಿಷ್ಟ್ಯ ಶುದ್ಧವಲ್ಲವೆಂದುತಿಳಿಸಿದ್ದಾರೆ. ಎಂದರೆ ಸೂರ್ಯೋದಯಾ ನಂತರ ಎಂಟು ಘಳಿಗೆಗಿಂತಲೂ ನಕ್ಷತ್ರವು ಹೆಚ್ಚಾಗಿರಬೇಕು. ಇದನ್ನೇ ಶೈವಾಗಮದಲ್ಲಿ 'ಯದೃಕ್ಷಮಷ್ಟನಾಡ್ಯೂನಂ ತತ್ಕೃತ್ಯಂ ನಿಷ್ಫಲಂಭವೇತ್' ಎಂದರೆ ಯಾವ ನಕ್ಷತ್ರವು ಎಂಟು ಘಳಿಗೆಗಿಂತಲೂ ಕಡಿಮೆ ಇರುವುದೋ ಅಂತಹ ದಿನದಲ್ಲಿ ಮಾಡಿದ ಕೃತ್ಯ ನಿಷ್ಫಲವೆಂದು ಹೇಳಿದ್ದಾರೆ. ಅಂದರೆ ನಕ್ಷತ್ರ ಕ್ಷಯದೋಷವಾಯಿತು. ಹಾಗೇ ನಕ್ಷತ್ರವು ಆದಿನ ಪೂರ್ತಿ ಇರಬೇಕು. ಹಾಗೇ ಪೂರ್ಣದಿನವಿರುವ ನಕ್ಷತ್ರವು ಶ್ರೇಷ್ಠವು.

ಭಿಷಗೃಕ್ಷೇ ಧನುರ್ಮಾಸೇ ವಿಘ್ನೇಶಂ ವಿಧಿವದ್ಯಜೇತ್ ।
ಶತಂ ಪೂಜಾ ಸಹಸ್ರಂ ವಾ ತತ್ಸಂಖ್ಯಾಕದಿನೈರ್ವ್ರಜೇತ್ ॥೨೨॥

೨೨ ತಿಥಿಯ ಮೊದಲ ಭಾಗದಲ್ಲಿ ದೇವತಾ ಪೂಜೆಯು ಪೂರ್ಣಫಲವನ್ನು ಮನುಷ್ಯರಿಗೆ ನೀಡುವುದು. ರಾತ್ರಿವ್ಯಾಪಿಯಾದ ತಿಥಿಯು ಅಂದರೆ ಮಧ್ಯಾಹ್ನ ನಂತರ ಇರುವ ತಿಥಿಯು ಪಿತೃಕಾರ್ಯಕ್ಕೆ ಶ್ರೇಷ್ಠವು.

ದೇವಾಗ್ನಿಶ್ರದ್ಧಯಾ ನಿತ್ಯಂ ಪುತ್ರದಂ ಚೇಷ್ಟದಂ ನೃಣಾಂ ।
ಸರ್ವಪಾಪಪ್ರಶಮನಃ ತತ್ತದ್ದುರಿತನಾಶನಂ ॥೨೩॥
ವಾರಪೂಜಾಂ ಶಿವಾದೀನಾಮಾತ್ಮಶುದ್ಧಿಪ್ರದಾಂ ವಿದುಃ ।
ತಿಥಿನಕ್ಷತ್ರಯೋಗಾನಾಮಾಧಾರಂ ಸಾರ್ವಕಾಮಿಕಂ ॥೨೪॥
ತಥಾ ವೃದ್ಧಿಕ್ಷಯಾಭಾವಾತ್ಪೂರ್ಣಬ್ರಹ್ಮಾತ್ಮಕಂ ವಿದುಃ ।
ಉದಯಾದುದಯಂ ವಾರೋ ಬ್ರಹ್ಮಪ್ರಭೃತಿ ಕರ್ಮಣಾಂ ॥೨೫॥
ತಿಥ್ಯಾದೌ ದೇವಪೂಜಾ ಹಿ ಪೂರ್ಣಭೋಗಪ್ರದಾ ನೃಣಾಂ ।
ಪೂರ್ವಭಾಗಃ ಪಿತೃಣಾಂ ತು ನಿಶಿ ಯುಕ್ತಃ ಪ್ರಶಸ್ಯತೇ ॥೨೬॥

೨೬ ತಿಥಿಯ ಮೊದಲ ಭಾಗದಲ್ಲಿ ದೇವತಾ ಪೂಜೆಯು ಪೂರ್ಣಫಲವನ್ನು ಮನುಷ್ಯರಿಗೆ ನೀಡುವುದು. ರಾತ್ರಿ ವ್ಯಾಪಿಯಾದ ತಿಥಿಯು ಅಂದರೆ ಮಧ್ಯಾಹ್ನ ನಂತರ ಇರುವ ತಿಥಿಯು ಪಿತೃಕಾರ್ಯಕ್ಕೆ ಶ್ರೇಷ್ಠವು.

ಪರಭಾಗಸ್ತು ದೇವಾನಾಂ ದಿವಾಯುಕ್ತಃ ಪ್ರಶಸ್ಯತೇ ।
ಉದಯವ್ಯಾಪಿನೀ ಗ್ರಾಹ್ಯಾ ಮಧ್ಯಾಹ್ನೇ ಯದಿ ಸಾ ತಿಥಿಃ ॥೨೭॥

೨೭ ಹಗಲು ಇರುವ ತಿಥಿಯ ಕೊನೆ ಭಾಗವು ದೇವಕರ್ಮಕ್ಕೆ ಪ್ರಶಸ್ತವಾದುದು ಮಧ್ಯಾಹ್ನ ವ್ಯಾಪಿನಿಯಾದರೆ ಅಂದರೆ ಮಧ್ಯಾಹ್ನದ ದೇವಕಾರ್ಯಕ್ಕೆ ಉದಯ ವ್ಯಾಪಿಯಾದ ತಿಥಿಯು ಶ್ರೇಷ್ಠವಾದದ್ದಾಗಿರುತ್ತದೆ.

ದೇವಕಾರ್ಯೇ ತಥಾ ಗ್ರಾಹ್ಯಾಸ್ತಿಥಿಯಕ್ಷಾದಿಕಾಃ ಶುಭಾಃ ।
ಸಮ್ಯಗ್ವಿಚಾರ್ಯ ವಾರಾದೀನ್ ಕುರ್ಯಾತ್ಪೂಜಾಜಪಾದಿಕಂ ॥೨೮॥

೨೮ ದೇವಕಾರ್ಯದಲ್ಲಿ ತಿಥಿಯಂತೆ ನಕ್ಷತ್ರಗಳೂ ಶುಭಕರಗಳು, ಹೀಗಿರುವ ದೇ

ಕಾರ್ಯಗಳಲ್ಲಿ ವಾರ, ತಿಥಿ, ನಕ್ಷತ್ರಗಳ ವಿಚಾರಗಳನ್ನು ಚೆನ್ನಾಗಿ ವಿಮರ್ಶಿಸಿ ಪೂಜಾ, ಜಪಾದಿಗಳನ್ನು ಆಚರಿಸಬೇಕು.

**ಪೂರ್ಜಾಯತೇ ಹ್ಯನೇನೇತಿ ವೇದೇಷ್ವರ್ಥಸ್ಯ ಯೋಜನಾ |**
**ಪೂಭೋಗಫಲಸಿದ್ಧಿಶ್ಚ ಜಾಯತೇ ತೇನ ಕರ್ಮಣಾ ||೨೯||**

೨೯ ಪೂಜಾ ಎಂದೆರಡು ಅಕ್ಷರದಿಂದ ಈ ಅರ್ಥವಿದೆ. ಪೂಃಎಂದರೆ ಭೋಗವು. ಇಂತಹ ಭೋಗವು ಇದರಿಂದ ಜಾ ಎಂದರೆ ಜಾಯತೇ ಜನಿಸುವುದು ಎಂದರ್ಥ. ಆದ್ದರಿಂದ ಪೂಜಾ ಶಬ್ದಕ್ಕೆ ಭೋಗಪ್ರದವೆಂದು ಅರ್ಥ. ಪೂಜೆಯಿಂದ ಭೋಗಪ್ರಾಪ್ತವಾಗುವುದು ಹೀಗೆಂದು ವೇದದಲ್ಲಿ ಅರ್ಥವನ್ನು ನಿರೂಪಿಸಿರುವುದು.

**ಮನೋಭಾವಾಂಸ್ತಥಾ ಜ್ಞಾನಮಿಷ್ಟಭೋಗಾರ್ಥಯೋಜನಾತ್ |**
**ಪೂಜಾಶಬ್ದಾರ್ಥ ಏವಂ ಹಿ ವಿಶ್ರುತೋ ಲೋಕವೇದಯೋಃ ||೩೦||**

೩೦ ಮನಸ್ಸಿನ ಸಕಲ ಇಷ್ಟಾರ್ಥಗಳನ್ನೂ, ದಿವ್ಯಾ ಜ್ಞಾನವನ್ನೂ, ಭೋಗಗಳನ್ನೂ ನೀಡುವುದರಿಂದ ಪೂಜಾಶಬ್ದವು ಲೋಕದಲ್ಲಿ ಹಾಗೂ ವೇದಗಳಲ್ಲಿ ಪ್ರಸಿದ್ಧವಾಗಿರುವುದು.

**ನಿತ್ಯನೈಮಿತ್ತಿಕಂ ಕಾಲಾತ್ಸದ್ಯಃ ಕಾಮ್ಯೇ ಸ್ವಮಷ್ಮಿತೇ |**
**ನಿತ್ಯಂ ಮಾಸಂ ಚ ಪಕ್ಷಂ ಚ ವರ್ಷಂ ಚೈವ ಯಥಾಕ್ರಮಂ ||೩೧||**

೩೧ ನಿತ್ಯ, ನೈಮಿತ್ತಿಕ ಕರ್ಮಗಳ ಫಲವು ಕಾಲಾನಂತರದಲ್ಲಿ ಲಭಿಸುವುದು. ಆದರೆ ಕಾಮ್ಯ ಪೂಜೆಯ ಫಲವು ತಕ್ಷಣವೇ ದೊರಕುವುದು. ಪ್ರತಿನಿತ್ಯ, ಪ್ರತಿಮಾಸ, ಪ್ರತಿಪಕ್ಷ, ಪ್ರತಿವರ್ಷಗಳಲ್ಲಿ ಮಾಡತಕ್ಕ ಯಥಾಕ್ರಮವಾದ,

**ತತ್ತತ್ಕರ್ಮಫಲಪ್ರಾಪ್ತಿಸ್ಸ್ಯಾದ್ದೃಕ್ಷಾಪಕ್ಷಯಃ ಕ್ರಮಾತ್ |**
**ಮಹಾಗಣಪತೇಃ ಪೂಜಾ ಚತುರ್ಥ್ಯಾಂ ಕೃಷ್ಣಪಕ್ಷಕೇ ||೩೨||**

೩೨ ಕರ್ಮಗಳಿಗೆ ಆಯಾಯಾ ದರ್ಜೆಯಲ್ಲಿ ಫಲಪ್ರಾಪ್ತವಾಗುವುದು. ಹಾಗೆ ಪಾಪಗಳೂ ನಾಶವಾಗುವುದು. ಮಹಾಗಣಪತಿಯ ಪೂಜೆಯನ್ನು ಕೃಷ್ಣಪಕ್ಷದ ಚತುರ್ಥಿಯಲ್ಲಿ ಮಾಡಿದರೆ,

ಪಕ್ಷಪಾಪಕ್ಷಯಕರೀ ಪಕ್ಷಭೋಗಫಲಪ್ರದಾ ।
ಚೈತ್ರೇ ಚತುರ್ಥ್ಯಾಂ ಪೂಜಾ ಚ ಕೃತಾ ಮಾಸಫಲಪ್ರದಾ ॥೩೩॥

೩೩ ಆ ಪಕ್ಷದಲ್ಲಿ ಮಾಡಿದ ಪಾಪಗಳೆಲ್ಲಾ ನಾಶವಾಗಿ ಮುಂದಿನ ಹದಿನೆ ದಿನಗಳೂ ಭೋಗವನ್ನು ನೀಡುವುದು. ಚೈತ್ರಮಾಸದ ಚತುರ್ಥಿಯ ಮಹಾಗಣಪತಿಯನ್ನು ಪೂಜಿಸಿದರೆ ಒಂದು ತಿಂಗಳು ಕಾಲ ಫಲನೀಡುವುದು.

ವರ್ಷಬೋಗಪ್ರದಾ ಜ್ಞೇಯಾ ಕೃತಾ ವೈ ಸಿಂಹಬಾದ್ರಕೇ ।
ಶ್ರಾವಣಾದಿತ್ಯವಾರೇ ಚ ಸಪ್ತಮ್ಯಾಂ ಹಸ್ತಭೇ ದಿನೇ ॥೩೪॥

೩೪ ಸಿಂಹ ಮಾಸ ಮತ್ತು ಭಾದ್ರಪದ ಮಾಸದ ಯೋಗವಿರುವ ಚತುರ್ಥಿಯ ಪೂಜಿಸಿದರೆ ಒಂದು ವರ್ಷ ಕಾಲ ಪರ್ಯಂತ ಭೋಗಪ್ರಾಪ್ತಿಯಾಗುವುದು. ಶ್ರಾ ಮಾಸದ ಭಾನುವಾರ, ಸಪ್ತಮಿ ತಿಥಿ, ಹಸ್ತಾ ನಕ್ಷತ್ರದ ದಿನ (ಈ ಯೋಗ ಪ್ರಾಪ್ತವಾದ ಹಾಗೆಯೇ,

ಮಾಘಶುಕ್ಲೇ ಚ ಸಪ್ತಮ್ಯಾಮಾದಿತ್ಯಯಜನಂ ಚರೇತ್ ।
ಜ್ಯೇಷ್ಠಭಾದ್ರಕಸೌಮ್ಯೇ ಚ ದ್ವಾದಶ್ಯಾಂ ಶ್ರವಣರ್ಕ್ಷಕೇ ॥೩೫
ದ್ವಾದಶ್ಯಾಂ ವಿಷ್ಣುಯಜನಮೀಷ್ಟಸಂಪತ್ಕರಂ ವಿದುಃ ।
ಶ್ರಾವಣೇ ವಿಷ್ಣುಯಜನಮಿಷ್ಟಾರೋಗ್ಯಪ್ರದಂ ಭವೇತ್ ॥೩೬॥

೩೫, ೩೬ ಮಾಘ ಶುದ್ಧ ಸಪ್ತಮೀ ದಿನದಲ್ಲಿ ಸೂರ್ಯನನ್ನು ಪೂಜಿಸಬೇಕು. ಜ್ಯೇ ಭಾದ್ರಪದ ಮಾಸಗಳಲ್ಲಿ ಭುಧವಾರ, ದ್ವಾದಶಿ, ಶ್ರವಣ ನಕ್ಷತ್ರ ಯೋಗವಿದ್ದ ದಿನದ ವಿಷ್ಣುವನ್ನು ಪೂಜಿಸಿದರೆ ಇಷ್ಟಾರ್ಥ ಸಿದ್ಧಿಸುವುದು. ಹಾಗೆಯೇ ಸಕಲ ಸಂಪತ್ತನ್ನು ಯೋಗದ ದಿನವುನೀಡುವುದು. ಶ್ರಾವಣ ಮಾಸದ ದ್ವಾದಶಿಯಲ್ಲಿ ವಿಷ್ಣುವ ಪೂಜಿಸುವಿಕೆಯಿಂದ ಇಷ್ಟಾರ್ಥಸಿದ್ಧಿಯು, ಆರೋಗ್ಯವು ಲಭಿಸುವುದು.

ಗವಾದೀ‌ನ್ ದ್ವಾದಶಾನರ್ಥಾನ್ ಸಾಂಗಾನ್ ದತ್ವಾ ತು ಯತ್ಫಲಂ ।
ತತ್ಫಲಂ ಸಮವಾಪ್ನೋತಿ ದ್ವಾದಶ್ಯಾಂ ವಿಷ್ಣುತರ್ಪಣಾತ್ ॥೩೭॥

೩೭ ಸಾಂಗವಾದ ಹನ್ನೆರಡು ಗೋದಾನವನ್ನು ಮಾಡಿದರೆ ಯಾವ ಫ ಉಂಟಾಗುವುದೋ ಅಂತಹ ಫಲವು ದ್ವಾದಶಿಯಲ್ಲಿ ವಿಷ್ಣುವನ್ನು ಪೂಜಿಸಿದ ಲಭಿಸುವುದು.

ವಿ.ವಿ.:- ಸಾಂಗಗೋದಾನವೆಂದರೆ ಗೋದಾನ ವಿಚಾರದಲ್ಲಿ ಅಲಂಕರಿಸಿರುವ ಮತ್ತು ಅದಕ್ಕೆ ಉಪಯೋಗಿಸುವ ವಸ್ತುಗಳಿಂದ ಒಡಗೂಡಿದ ಎಂದರ್ಥ. ಅಂದರೆ ಚಿನ್ನದ ಮೊಗಸನ್ನು ಕೊಂಬುಗಳಿಗೆ ಹಾಕಿರಬೇಕು. ಗೊರಸುಗಳಿಗೆ ಬೆಳ್ಳಿಯ ಮೊಗಸು ಬೆನ್ನಮೇಲೆ ರೇಷ್ಮೆ ಅಥವಾ ಜರತಾರಿಯ ವಸ್ತ್ರ, ಬಾಲಕ್ಕೆ ಮುತ್ತಿನ ಕುಚ್ಚು ಉಪಯೋಗಿಸುವ ಪಾತ್ರೆಗಳು ಅಂದರೆ ಹಾಲು ಕರೆಯುವ, ನೀರು ಕುಡಿಸುವ ಪಾತ್ರೆ. ಹೀಗೆ ಸಾಂಗ ಗೋದಾನವೆಂದರೆ,

ದ್ವಾದಶ್ಯಾಂ ದ್ವಾದಶಾನ್ ವಿಪ್ರಾನ್ ವಿಷ್ಣೋರ್ದ್ವಾದಶನಾಮತಃ ।
ಷೋಡಶೈರುಪಚಾರೈಶ್ಚ ಯಜೇತ್ತತ್ಪ್ರೀತಿಮಾಪ್ನುಯಾತ್ ॥೩೮॥

೩೮ ದ್ವಾದಶ ತಿಥಿಯಲ್ಲಿ ಹನ್ನೆರಡು ಜನ ಬ್ರಾಹ್ಮಣರನ್ನು ವಿಷ್ಣುವಿನ ಹನ್ನೆರಡು ನಾಮಗಳಿಂದ ಷೋಡಶೋಪಚಾರಗಳಿಂದ ಪೂಜಿಸಿದರೆ ವಿಷ್ಣುವಿನ ಪ್ರೀತಿಪಾತ್ರನಾಗುವನು.

ಏವಂ ಚ ಸರ್ವದೇವಾನಾಂ ತತ್ತದ್ದ್ವಾದಶನಾಮಕೈಃ ।
ದ್ವಾದಶಬ್ರಹ್ಮಯಜನಂ ತತ್ತತ್ಪ್ರೀತಿಕರಂ ಭವೇತ್ ॥೩೯॥

೩೯ ಇದೇ ರೀತಿಯಾಗಿ ಎಲ್ಲಾ ದೇವತೆಗಳನ್ನೂ ಅವರ ಹನ್ನೆರಡು ನಾಮಗಳಿಂದ ಹನ್ನೆರಡು ಜನ ಬ್ರಾಹ್ಮಣರನ್ನು ಪೂಜಿಸಿದ್ದೇ ಆದರೆ ಆಯಾ ದೇವತೆಗಳಿಗೆ ಪ್ರೀತಿ ಪಾತ್ರರಾಗುವರು. ಅಂದರೆ ಆಯಾ ದೇವತೆಗಳು ಸುಪ್ರೀತರಾಗುವರು.

ಕರ್ಕಟೇ ಸೋಮವಾರೇ ಚ ನವಮ್ಯಾಂ ಮೃಗಶೀರ್ಷಕೇ ।
ಅಂಬಾಂ ಯಜೇದ್ಭೂತಿಕಾಮಃ ಸರ್ವಭೋಗಫಲಪ್ರದಾಂ ॥೪೦॥

೪೦ ಕರ್ಕಾಟಕ ಮಾಸದ ನವಮಿ, ಮೃಗಶಿರಾ ನಕ್ಷತ್ರಯೋಗವಿದ್ದಾಗ ಸೋಮವಾರವೂ ಸೇರಿರುವ ದಿನದಲ್ಲಿ ಐಶ್ವರ್ಯಕಾಮಿಯು ದೇವಿಯನ್ನು (ಪಾರ್ವತಿಯನ್ನು) ಪೂಜಿಸಿದರೆ ಸಕಲ ಭೋಗಗಳೂ ಲಭಿಸುವುದು.

ಆಶ್ವಯುಕ್ಶುಕ್ಲನವಮೀ ಸರ್ವಾಭೀಷ್ಟಫಲಪ್ರದಾ ।
ಆದಿವಾರೇ ಚತುರ್ದಶ್ಯಾಂ ಕೃಷ್ಣಪಕ್ಷೇ ವಿಶೇಷತಃ ॥೪೧॥

೪೧ ಹಾಗೆಯೇ ಆಶ್ವಯುಜ ಶುಕ್ಲ ನವಮಿಯೂ ಸಕಲ ಇಷ್ಟಾರ್ಥಗಳನ್ನು

ನೀಡುವುದು. (ದೇವಿ ಪೂಜೆಯು) ಆದಿತ್ಯವಾರ, ಚತುರ್ದಶೀ ತಿಥಿಯು ಕೃಷ್ಣಪಕ್ಷದಲ್ಲಿ ಉಂಟಾದರೆ ಅದೂ ವಿಶೇಷ ಫಲಪ್ರಾಪ್ತವಾಗುವುದು.

ಆದ್ರ್ರಾಯಾಂ ಚ ಮಹಾದ್ರ್ರಾಯಾಂ ಶಿವಪೂಜಾ ವಿಶಿಷ್ಯತೇ ।
ಮಾಘಕೃಷ್ಣಚತುರ್ದಶ್ಯಾಂ ಸರ್ವಾಭೀಷ್ಟಫಲಪ್ರದಾ ॥೪೨॥

೪೨ ಪ್ರತಿ ಆದ್ರ್ರಾ ನಕ್ಷತ್ರದಲ್ಲಿಯೂ ಮಹಾದರ್ಾ ಎಂದರೆ ಧನುರ್ಮಾಸದ ಆದ್ರ್ರಾನಕ್ಷತ್ರದಲ್ಲಿ ಈಶ್ವರನ ಪೂಜೆಯು ವಿಶೇಷವಾದುದು. ಮಾಘ ಕೃಷ್ಣ ಚತುರ್ದಶಿಯು ಅಂದರೆ ಶಿವರಾತ್ರಿಯು ಸಕಲಾಭೀಷ್ಟಗಳನ್ನು ನೀಡುವುದು.

ಆಯುಷ್ಕರೀ ಮೃತ್ಯುಹರಾ ಸರ್ವಸಿದ್ಧಿಕರೀ ನೃಣಾಂ ।
ಜ್ಯೇಷ್ಠಮಾಸೇ ಮಹಾದ್ರ್ರಾಯಾಂ ಚತುರ್ದಶೀದಿನೇಽಪಿ ಚ ॥೪೩॥

೪೩ ಹಾಗೆಯೇ ಶಿವರಾತ್ರಿ ದಿನವು ಆಯಸ್ಸನ್ನು ನೀಡುವಂತಹದು, ಮೃತ್ಯು ನಾಶಕರವೂ ಆಗಿದೆ. ಸರ್ವಸಿದ್ಧಿಯನ್ನೂ ನೀಡುತ್ತದೆ. ಜ್ಯೇಷ್ಠಮಾಸದಲ್ಲಿ ಚತುರ್ದಶಿ ಆದ್ರ್ರಾನಕ್ಷತ್ರ ಸೇರಿರುವಾಗ,

ಮಾರ್ಗಶೀರ್ಷಾದ್ರ್ರಕಾಯಾಂ ವಾ ಷೋಡಶೈರುಪಚಾರಕೈಃ ।
ತತ್ತನ್ಮೂರ್ತಿಶಿವಂ ಪೂಜ್ಯ ತಸ್ಯ ವೈ ಪಾದದರ್ಶನಂ ॥೪೪॥

೪೪ ಮಾರ್ಗಶಿರಮಾಸದ ಆದ್ರ್ರಾ ನಕ್ಷತ್ರದಲ್ಲಿಯಾಗಲೀ ಷೋಡಶೋಪಚಾರಗಳಿಂದ ಈಶ್ವರನನ್ನು ಪೂಜಿಸಿದರೆ ಮತ್ತು ಈಶ್ವರನ ಪಾದದರ್ಶನಮಾಡಿದರೆ,

ಶಿವಸ್ಯ ಯಜನಂ ಜ್ಞೇಯಂ ಭೋಗಮೋಕ್ಷಪ್ರದಂ ನೃಣಾಂ ।
ವಾರಾದಿದೇವಯಜನಂ ಕಾರ್ತಿಕೇ ಹಿ ವಿಶಿಷ್ಯತೇ ॥೪೫॥

೪೫ ಮಾನವರು ಭೋಗ ಮೋಕ್ಷಗಳನ್ನು ಹೊಂದುವರು. ವಾರದ ಅಧಿಪತಿಗಳನ್ನು ಕಾರ್ತಿಕ ಮಾಸದಲ್ಲಿ ಪೂಜಿಸುವುದು ಸಹ ವಿಶೇಷ ಫಲಪ್ರದವಾಗಿರುವುದು.

ಕಾರ್ತಿಕೇ ಮಾಸಿ ಸಂಪ್ರಾಪ್ತೇ ಸರ್ವಾ ದೇವಾ ಯಜೇದ್ಬುಧಃ ।
ದಾನೇನ ತಪಸಾ ಹೋಮೈರ್ಜಪೇನ ನಿಯಮೇನ ಚ ॥೪೬॥

೪೬ ಕಾರ್ತಿಕ ಮಾಸ ಪ್ರಾರಂಭವಾದೊಡನೇ ಎಲ್ಲಾ ದೇವತೆಗಳನ್ನೂ ಪೂಜಿಸಬೇಕು. ಎಲ್ಲಾ ದೇವತೆಗಳನ್ನೂ ದಾನ, ತಪಸ್ಸು, ಹೋಮ, ಜಪಗಳಿಂದಲೂ ವ್ರತ ಮುಂತಾದ ನಿಯಮಗಳಿಂದಲೂ,

ಷೋಡಶೈರುಪಚಾರೈಶ್ಚ ಪ್ರತಿಮಾಂ ವಿಪ್ರಮಂತ್ರಕೈಃ ।
ಬ್ರಾಹ್ಮಣಾನಾಂ ಭೋಜನೇನ ನಿಷ್ಕಾಮಾರ್ತಿಹರೋ ಭವೇತ್ ॥೪೭।

೪೭ ಷೋಡಶೋಪಚಾರಗಳಿಂದಲೂ ಪ್ರತಿಮೆಗಳನ್ನು (ಶಿವ, ವಿಷ್ಣು ಮುಂತಾದ) ವೇದಮಂತ್ರಗಳಿಂದ ಪೂಜಿಸಿ ಬ್ರಾಹ್ಮಣ ಭೋಜನಾದಿಗಳನ್ನೂ ಫಲಾಪೇಕ್ಷೆ ಇಲ್ಲದೇ ಮಾಡಿದ್ದೇ ಆದರೆ ಸಕಲ ಪೀಡೆಗಳೂ ನಾಶವಾಗುವುದು.

ಕಾರ್ತಿಕೇ ದೇವಯಜನಂ ಸರ್ವಭೋಗಪ್ರದಂ ಭವೇತ್ ।
ವ್ಯಾಧೀನಾಂ ಹರಣಂ ಚೈವ ಭವೇದ್ಭೂತಗ್ರಹಕ್ಷಯಃ ॥೪೮॥

೪೮ ಕಾರ್ತಿಕ ಮಾಸದಲ್ಲಿ ದೇವತೆಗಳನ್ನು ಪೂಜಿಸಿದರೆ ಸಕಲ ಭೋಗಗಳೂ ದೊರೆಯುವುದು. ರೋಗಗಳು ನಾಶವಾಗುವುದು. ಭೂತ, ಪಿಶಾಚಿ, ಗ್ರಹಪೀಡೇ ಮುಂತಾದುವು ನಾಶವಾಗುವುವು.

ಕಾರ್ತಿಕಾದಿತ್ಯವಾರೇಷು ನೃಣಾಮಾದಿತ್ಯಪೂಜನಾತ್ ।
ತೈಲಕಾರ್ಪಾಸದಾನಾತ್ತು ಭವೇತ್ಕುಷ್ಠಾದಿಸಂಕ್ಷಯಃ ॥೪೯॥

೪೯ ಮಾನವರು ಕಾರ್ತಿಕ ಮಾಸದ ಭಾನುವಾರಗಳಲ್ಲಿ ಸೂರ್ಯನನ್ನು ಪೂಜಿಸಿದರೆ ಹಾಗೆಯೇ ಎಣ್ಣೆ, ಹತ್ತಿ ಅಥವಾ ಹತ್ತಿಯ ಬಟ್ಟೆಯನ್ನು ದಾನ ಮಾಡಿದರೆ ಕುಷ್ಠಾದಿರೋಗಗಳು ನಾಶವಾಗುವುದು.

ಹಾರೀತಕೀಮರೀಚೀನಾಂ ವಸ್ತ್ರಕ್ಷೀರಾದಿದಾನತಃ ।
ಬ್ರಹ್ಮಪ್ರತಿಷ್ಠಯಾ ಚೈವ ಕ್ಷಯರೋಗಕ್ಷಯೋ ಭವೇತ್ ॥೫೦॥

೫೦ ಅಳಲೇಕಾಯಿ, ಮೆಣಸು, ವಸ್ತ್ರ ಹಾಲುಗಳನ್ನು ದಾನಗಳಿಂದ ಬ್ರಾಹ್ಮಣನಿಗೆ ಜೀವನೋಪಾಯ ಕಲ್ಪಿಸುವುದರಿಂದ ಕ್ಷಯರೋಗವು ನಾಶವಾಗುವುದು.

ದೀಪಸರ್ಷವದಾನಾಚ್ಚ ಅಪಸ್ಮಾರಕ್ಷಯೋ ಭವೇತ್ ।
ಕೃತ್ತಿಕಾಸೋಮವಾರೇಷು ಶಿವಸ್ಯ ಯಜನಂ ನೃಣಾಂ ॥೫೧॥

೫೧ ದೀಪ, ಸಾಸುವೆ, ದಾನಗಳಿಂದ ಮೂರ್ಛೆರೋಗ, ಕ್ಷಯರೋಗಗಳು ನಾಶವಾಗುವುದು. ಹಾಗೇ ಕೃತ್ತಿಕಾ ನಕ್ಷತ್ರ, ಸೋಮವಾರದ ಸಂಬಂಧವುಳ್ಳ ವಾರದಲ್ಲಿ ಈಶ್ವರನ ಪೂಜೆಯು ಮಾನವರಿಗೆ,

ಮಹಾದಾರಿದ್ರ್ಯಶಮನಂ ಸರ್ವಸಂಪತ್ಕರಂ ಭವೇತ್ ।
ಗೃಹಕ್ಷೇತ್ರಾದಿದಾನಾಚ್ಚ ಗೃಹೋಪಕರಣಾದಿನಾ ॥೫೨॥

೫೨ ಮಹಾದಾರಿದ್ರ್ಯವನ್ನು ನಾಶ ಮಾಡಿ ಸರ್ವಸಂಪತ್ತನ್ನೂ ನೀಡುವುದು. ಮನೆಯನ್ನು ಬೇಕಾದ ವಸ್ತುಗಳನ್ನಿಟ್ಟು ದಾನ ಮಾಡಬೇಕು. ಹಾಗೆ ಭೂದಾನ ಅಂದರೆ ಹೊಲ, ಗದ್ದೆಗಳನ್ನೂ ಪರಿಕರಗಳೊಡನೆ ದಾನ ಮಾಡಬೇಕು.

ಕೃತ್ತಿಕಾಭೌಮವಾರೇಷು ಸ್ಕಂದಸ್ಯ ಯಜನಾನ್ನೃಣಾಂ ।
ದೀಪಘಂಟಾದಿದಾನಾಚ್ಚ ವಾಕ್ಸಿದ್ಧಿರಚಿರಾದ್ಭವೇತ್ ॥೫೩॥

೫೩ ಮಂಗಳವಾರ ಕೃತ್ತಿಕಾ ನಕ್ಷತ್ರಯುಕ್ತ ದಿನಗಳಲ್ಲಿ ಸುಬ್ರಹ್ಮಣ್ಯನನ್ನು ಪೂಜಿಸಿದರೆ ಹಾಗೇ ದೀಪ, ಘಂಟೆಗಳನ್ನು ದಾನ ಮಾಡಿದರೆ ವಾಕ್ಸಿದ್ಧಿಯು ಜಾಗ್ರತೆಯಾಗಿ ಲಭಿಸುವುದು.

ಕೃತ್ತಿಕಾಸೌಮ್ಯವಾರೇಷು ವಿಷ್ಣೋರ್ವೈ ಯಜನಂ ನೃಣಾಂ ।
ದಧ್ಯೋದನಸ್ಯ ದಾನಂ ಚ ಸತ್ಸಂತಾನಕರಂ ಭವೇತ್ ॥೫೪॥

೫೪ ಸೋಮವಾರ ಕೃತ್ತಿಕಾ ನಕ್ಷತ್ರ ಯೋಗದಲ್ಲಿ ವಿಷ್ಣುವನ್ನು ಪೂಜಿಸಿದರೆ ಹಾಗೇ ಮೊಸರನ್ನದ ದಾನವನ್ನು ಮಾಡಿದರೆ ಸತ್ಸಂತಾನ ಉಂಟಾಗುವುದು.

ವಿ.ವಿ.:- ಈ ಮೇಲಿನ ಮೂರು ಶ್ಲೋಕದಿಂದ ಅಂದರೆ ಕೃತ್ತಿಕಾ ಸೋಮವಾರೇಷುವಿನಿಂದ ಮುಂದೆ ೫೭ನೇ ಶ್ಲೋಕದಲ್ಲಿ ಕೃತ್ತಿಕಾ ಶನಿವಾರೇಷು ಎಂಬುವವರೆವಿಗೆ ಎರಡರ್ಥವನ್ನು ನಾವು ಚಿಂತಿಸಬಹುದಾಗಿದೆ. ಇಲ್ಲಿ ಕೃತ್ತಿಕಾ ಎಂದರೆ ನಕ್ಷತ್ರವೆಂದು ಪರಿಗಣಿಸಬಹುದು. ಇನ್ನೊಂದು ಅರ್ಥದಲ್ಲಿ ಅಂದರೆ ಪ್ರಕೃತ ವಿಚಾರವಾಗುತ್ತಿರುವುದು ಪೂಜಾ, ಮಾಸಗಳ ಶ್ರೇಷ್ಠತೆಯಿಂದಾಗಿ ಕಾರ್ತಿಕ ಮಾಸವೆಂದೂ ನಿರ್ಧರಿಸಬೇಕಾಗುವುದು. ೪೯ನೇ ಶ್ಲೋಕದಲ್ಲಿ

ಕಾರ್ತಿಕ ಎಂಬ ಪದಪ್ರಯೋಗದಿಂದ ಕಾರ್ತಿಕ ಮಾಸವೆಂಬ ಅರ್ಥವನ್ನೇ ಪರಿಗಣಿಸಬೇಕಾಗಿರುವುದರಿಂದ ಮುಂದೆಯೂ ಕಾರ್ತಿಕ ಮಾಸವೆಂದೇ ತಿಳಿಯಬೇಕು. ಹಾಗೇ ಆ ವಾರಗಳಲ್ಲಿ ನಕ್ಷತ್ರ ಯೋಗವೆಂಬುದು ಮತ್ತೊಂದು ಅಭಿಪ್ರಾಯ.
ಮೊಸರನ್ನ ದಾನ, ಇದರ ನೈವೇದ್ಯ ವಿಷ್ಣುಪ್ರಿಯ. ಹಾಗೇ ಇದರ ದಾನದಿಂದ ಸಂತಾನಪ್ರಾಪ್ತಿ ಎಂದೂ ಹೇಳಿದ್ದಾರೆ. ಇದಕ್ಕೆ ಪೂರಕವಾಗಿ ಆಗಮಶಾಸ್ತ್ರದಲ್ಲಿ (ಶೈವ) ದೇವರಿಗೆ ಅಭಿಷೇಕ ಮಾಡುವ ದ್ರವ್ಯಗಳ ಫಲವನ್ನು ವಿವರಿಸುತ್ತಾ 'ದಧಿಪುತ್ರಪ್ರದಂ' ಎಂದು ಹೇಳಿದ್ದಾರೆ. ಈಶ್ವರನಿಗೆ ವಿಶೇಷವಾಗಿ ಮೊಸರನ್ನ ಅಭಿಷೇಕ ಮಾಡುವಿಕೆಯಿಂದ ಪುತ್ರಪ್ರಾಪ್ತಿಯಾಗುವುದು ಎಂದರ್ಥ.

ಕೃತ್ತಿಕಾಗುರುವಾರೇಷು ಬ್ರಹ್ಮಣೋ ಯಜನಾದ್ಧನೈಃ ।
ಮಧುಸ್ವರ್ಣಾಜ್ಯದಾನೇನ ಭೋಗವೃದ್ಧಿರ್ಭವೇನ್ನೃಣಾಂ ॥೫೫॥

೫೫ ಕಾರ್ತಿಕ ಮಾಸದ ಗುರುವಾರದಲ್ಲಿ ಬ್ರಹ್ಮನನ್ನು ಪೂಜಿಸಿ ಧನ, ಜೇನು, ಚಿನ್ನ, ತುಪ್ಪಗಳನ್ನು ದಾನ ಮಾಡಿದರೆ ಮನುಷ್ಯರಿಗೆ ಭೋಗವೃದ್ಧಿಯಾಗುವುದು.
ವಿ.ವಿ.:- ಈ ಹಿಂದೆ ಬ್ರಹ್ಮನಿಗೆ ವಿಶೇಷ ಪೂಜೆಗಳಿಲ್ಲವೆಂದು ವಿವರಿಸಿದೆ (ಎಂಟನೇ ಅಧ್ಯಾಯದಲ್ಲಿ) ಹಾಗೆಂದರೆ ಏನು ಮಾಡಬಹುದು. ಬ್ರಹ್ಮ ಶಬ್ದಕ್ಕೆ ಬ್ರಾಹ್ಮಣವೆಂಬ ಅರ್ಥವಿದೆ. ವೇದ, ಸಿದ್ಧಾಂತಗಳನ್ನು ತಿಳಿದ ಬ್ರಾಹ್ಮಣರನ್ನು ಪೂಜಿಸಿ ಎಂದು ತಿಳಿಯಬಹುದು. ಏಕೆಂದರೆ ಗುರುಗ್ರಹವು ಬ್ರಾಹ್ಮಣ ಗ್ರಹ. ಈ ದಿನದಲ್ಲಿ ಬ್ರಾಹ್ಮಣನನ್ನು ಪೂಜಿಸಿ ದಾನ ಮಾಡುವಿಕೆಯಿಂದ ಗುರುಗ್ರಹ ಪ್ರೀತನಾಗಿ ಅನುಗ್ರಹಿಸುವನು. 'ಬ್ರಾಹ್ಮಣನ್ನೋ ಜಯಿತ್ವಾತು ಪೀಡಾಶಾಂತಿಃ ಭತೇದ್ಗುರೋ' ಎಂದೂ ಗುರುಸ್ತೋತ್ರದಲ್ಲಿ ಹೇಳಿದೆ. ಆದ್ದರಿಂದ ಇಲ್ಲಿ ಬ್ರಹ್ಮ ಎಂದರೆ ಬ್ರಾಹ್ಮಣ ಎಂಬ ಅರ್ಥ ಗ್ರಹಿಸಿದರೆ ತಪ್ಪಾಗಲಾರದು.

ಕೃತ್ತಿಕಾಶುಕ್ರವಾರೇಷು ಗಜಗೋಮೇಡಯಾಜನಾತ್ ।
ಗಂಧಪುಷ್ಪಾನ್ನದಾನೇನ ಭೋಗ್ಯವೃದ್ಧಿರ್ಭವೇನ್ನೃಣಾಂ ॥೫೬॥

೫೬ ಕಾರ್ತಿಕ ಮಾಸದ ಶುಕ್ರವಾರದಲ್ಲಿ ಗಣಪತಿಯನ್ನು ಪೂಜಿಸಿದರೆ ಹಾಗೇ ಗಂಧ, ಪುಷ್ಪ, ಅನ್ನದಾನದಿಂದ ಮಾನವರಿಗೆ ಭೋಗವೃದ್ಧಿಯಾಗುವುದು.

ವಂಧ್ಯಾ ಸುಪುತ್ರಂ ಲಭತೇ ಸ್ವರ್ಣರೌಪ್ಯಾದಿದಾನತಃ ।
ಕೃತ್ತಿಕಾಶನಿವಾರೇಷು ದಿಕ್ಪಾಲಾನಾಂ ಚ ವಂದನಂ ॥೫೭॥

೫೭ ಚಿನ್ನ, ಬೆಳ್ಳಿಯನ್ನು ದಾನಮಾಡುವುದರಿಂದ ಬಂಜೆಯ
ಪುತ್ರವತಿಯಾಗುವಳು. ಕಾರ್ತಿಕ ಮಾಸದ ಶನಿವಾರದಲ್ಲಿ ದಿಕ್ಪಾಲಕರನ್ನು ನಮಸ್ಕರಿಸು

ದಿಗ್ಗಜಾನಾಂ ಚ ನಾಗಾನಾಂ ಸೇತುಪಾನಾಂ ಚ ಪೂಜನಂ ।
ತ್ರ್ಯಂಬಕಸ್ಯ ಚ ರುದ್ರಸ್ಯ ವಿಷ್ಣೋಃ ಪಾಪಹರಸ್ಯ ಚ ॥೫೮॥

೫೮ ದಿಗ್ಗಜಗಳಿಗೆ, ನಾಗರುಗಳಿಗೆ ಸೇತುಪಾಲಕರು, ತ್ರ್ಯಂಬಕ, ವಿಷ್ಣುಗಳ
ಪೂಜಿಸಿದರೆ ಪಾಪನಾಶವಾಗುವುದು.

ಜ್ಞಾನದಂ ಬ್ರಹ್ಮಣಶ್ಚೈವ ಧನ್ವಂತರ್ಯಶ್ವಿನೋಸ್ತಥಾ ।
ರೋಗಾಪಮೃತ್ಯುಹರಣಂ ತತ್ಕಾಲವ್ಯಾಧಿಶಾಂತಿದಂ ॥೫೯॥

೫೯ ಹಾಗೇ ಜ್ಞಾನಪ್ರಾಪ್ತಿಯಾಗುವುದು. ಬ್ರಹ್ಮನನ್ನೂ, ಧನ್ವಂತರಿ, ಅಶ್ವ
ದೇವತೆಗಳನ್ನು ಪೂಜಿಸಿದರೆ ರೋಗ, ಅಪಮೃತ್ಯು ನಾಶವಾಗುವುದು. ಆಯಾ ಕಾ
ಬರುವ ರೋಗಗಳು ನಾಶವಾಗಿ ಶಾಂತಿಯುಂಟಾಗುವುದು.

ವಿ.ವಿ.:- ದಿಗ್ಗಜಗಳು - (1)ಐರಾವತ (2)ಪುಂಡರೀಕ (3)ವಾಮನ (4)ಕುಮುದ (5)ಅಂ
(6)ಪುಷ್ಪದಂತ (7)ಸಾರ್ವಭೌಮ (8)ಸುಪ್ರತೀಕ.

ದಿಗ್ಗಜಗಳ ಪತ್ನಿಯರು - (1)ಅಭಮಾ (2)ಕಪಿಲಾ (3)ಪಿಂಗಳಾ (4)ಅನುಪ
(5)ತಾಮ್ರಪರ್ಣೀ (6)ಶುಭ್ರದಂತ (7)ಅಂಗನಾ (8)ಅಂಜನಾವತಿ ಎಂಬ ೮ ಹೆಣ್ಣಾನೆಗ

ಲವಣಾಯಸತೈಲಾನಾಂ ಮಾಷಾದೀನಾಂ ಚ ದಾನತಃ ।
ತ್ರಿಕಟುಫಲಗಂಧಾನಾಂ ಜಲಾದೀನಾಂ ಚ ದಾನತಃ ॥೬೦॥

೬೦ ಉಪ್ಪು, ಕಬ್ಬಿಣ, ಎಣ್ಣೆ, ಉದ್ದು ಇವುಗಳ ದಾನಗಳಿಂದಲೂ ತಾರೇಕಾ
ಅಳಲೇಕಾಯಿ, ನೆಲ್ಲಿಕಾಯಿ, ಗಂಧ ನೀರು ಮುಂತಾದುವುಗಳಿನ್ನು ದಾನ ಮಾಡಿದರೆ

ದ್ರವಾಣಾಂ ಕಠಿಣಾನಾಂ ಚ ಪ್ರಸ್ಥೇನ ಫಲಮಾನತಃ ।
ಸ್ವರ್ಗಪ್ರಾಪ್ತಿರ್ಧನುರ್ಮಾಸೇ ಹ್ಯುರ್ಷಕಾಲೇ ಚ ಪೂಜನಂ ॥೬೧॥

೬೧ ಗಟ್ಟಿಯಾದ ವಸ್ತುಗಳನ್ನು ಒಂದು ಪ್ರಸ್ಥ ಪ್ರಮಾಣ ದಾನ ಮಾಡಿದರೆ ಹಾಗೆಯೇ ಧನುರ್ಮಾಸದಲ್ಲಿ ಉಷಃಕಾಲದಲ್ಲಿ ಶಿವ ಮೊದಲಾದ ದೇವತೆಗಳನ್ನು ಪೂಜಿಸಿದರೆ ಸ್ವರ್ಗಪ್ರಾಪ್ತವಾಗುವುದು.

ಶಿವಾದೀನಾಂ ಚ ಸರ್ವೇಷಾಂ ಕ್ರಮಾದ್ವೈ ಸರ್ವಸಿದ್ಧಯೇ ।
ಶಾಲ್ಯನ್ನಸ್ಯ ಹವಿಷ್ಯಸ್ಯ ನೈವೇದ್ಯಂ ಶಸ್ತಮುಚ್ಯತೇ ॥೬೨॥

೬೨ ಈ ಧನುರ್ಮಾಸದಲ್ಲಿ ಶಿವ ಮೊದಲಾದ ದೇವತೆಗಳನ್ನು ಪೂಜಿಸಿದರೆ ಸರ್ವಸಿದ್ಧಿಯಾಗುವುದು. ಶಾಲ್ಯನ್ನ ನೈವೇದ್ಯವು ಪ್ರಶಸ್ತವೆಂದು ಹೇಳಲ್ಪಟ್ಟಿದೆ. ಶಾಲಿ ಎಂದರೆ ಉತ್ತಮವಾದ ಭತ್ತ.

ವಿವಿಧಾನ್ನಸ್ಯ ನೈವೇದ್ಯಂ ಧನುರ್ಮಾಸೇ ವಿಶಿಷ್ಯತೇ ।
ಮಾರ್ಗಶೀರ್ಷೇಽನ್ನದಸ್ಯೈವ ಸರ್ವಮಿಷ್ಟಫಲಂ ಲಭೇತ್ ॥೬೩॥

೬೩ ಧನುರ್ಮಾಸದಲ್ಲಿ ವಿಧ ವಿಧವಾದ ಅನ್ನವನ್ನು ನಿವೇದಿಸುವುದು ವಿಶಿಷ್ಟವಾದುದು. ಮಾರ್ಗಶಿರ ಮಾಸದಲ್ಲಿ ಅನ್ನದಾನ ಮಾಡಿದರೆ ಬೇಕಾದ ಇಷ್ಟ ಫಲಗಳೆಲ್ಲವೂ ಲಭಿಸುವುದು.

ಪಾಪಕ್ಷಯಂ ಚೇಷ್ಟಸಿದ್ಧಿಂ ಚಾರೋಗ್ಯಂ ಧರ್ಮಮೇವ ಚ ।
ಸಮ್ಯಗ್ವೇದಪರಿಜ್ಞಾನಂ ಸದನುಷ್ಠಾನಮೇವ ಚ ॥೬೪॥

೬೪ ಮಾರ್ಗಶಿರ ಮಾಸದಲ್ಲಿ ಅನ್ನದಾನ ಮಾಡಿದರೆ ಪಾಪಗಳು ನಾಶವಾಗಿ ಇಷ್ಟಾರ್ಥ ಸಿದ್ಧಿಯಾಗುವುದು, ಆರೋಗ್ಯವುಂಟಾಗುವುದು. ಧರ್ಮ, ವೇದಾರ್ಥಜ್ಞಾನ ಒಳ್ಳೆಯ ಅನುಷ್ಠಾನ ಉಂಟಾಗುವುದು.

ಇಹಾಮುತ್ರ ಮಹಾಭೋಗಾನಂತೇ ಯೋಗಂ ಚ ಶಾಶ್ವತಂ ।
ವೇದಾಂತಜ್ಞಾನಸಿದ್ಧಿಂ ಚ ಮಾರ್ಗಶೀರ್ಷಾನ್ನದೋ ಲಭೇತ್ ॥೬೫॥

೬೫ ಮಾರ್ಗಶಿರ ಮಾಸದ ಅನ್ನದಾನದಿಂದ ಈ ಲೋಕ ಮತ್ತು ಪರಲೋಕದಲ್ಲಿ ಸಹ ಭೋಗಗಳನ್ನನುಭವಿಸಿ ಕೊನೆಯಲ್ಲಿ ಶಾಶ್ವತವಾದ ವೇದಾಂತ ಸಿದ್ಧಿಯಾಗಿ ಮುಕ್ತಿಯನ್ನು ಹೊಂದುವರು.

ಮಾರ್ಗಶೀರ್ಷೇ ಹ್ಯುಷಃಕಾಲೇ ದಿನತ್ರಯಮಥಾಪಿ ವಾ ।
ಯಜೇದ್ದೇವಾನ್ ಭೋಗಕಾಮೋ ನಾಧನುರ್ಮಾಸಿಕೋ ಭವೇತ್ ॥೬೬॥

೬೬ ಮಾರ್ಗಶಿರ ಮಾಸದಲ್ಲಿ ಮೂರು ದಿನಗಳು ಉಷಃಕಾಲದಲ್ಲಿ ಧನುರ್ಮಾಸದಲ್ಲಿ ದೇವತೆಗಳನ್ನು ಪೂಜಿಸಿದ್ದೇ ಆದರೆ ಭೋಗಕಾಮಿಯು ಭೋಗವನ್ನು ಹೊಂದುವನು.

ಯಾವತ್ಸಂಗವಕಾಲಂ ತು ಧನುರ್ಮಾಸೋ ವಿಧೀಯತೆ ।
ಧನುರ್ಮಾಸೇ ನಿರಾಹಾರೋ ಮಾಸಮಾತ್ರಂ ಜಿತೇಂದ್ರಿಯಃ ॥೬೭॥

೬೭ ಸಂಗಮ ಕಾಲದವರೆವಿಗೆ ಧನುರ್ಮಾಸದ ವಿಶೇಷತೆ ಇರುವುದು. ಆ ಕಾಲದವರೆವಿಗೆ ಉಪವಾಸದಿಂದರಬೇಕು. ಹೀಗೆ ಧನುರ್ಮಾಸ ಪೂರ್ತಿ ಜಿತೇಂದ್ರಿಯನಾಗಿದ್ದುಕೊಂಡು,

ಅಮಧ್ಯಾಹ್ನಂ ಜಪೇದ್ವಿಪ್ರೋ ಗಾಯತ್ರೀಂ ವೇದಮಾತರಂ ।
ಪಂಚಾಕ್ಷರಾದಿಕಾನ್ಮಂತ್ರಾನ್ಪಶ್ಚಾದಾಸುಪಿಕ್ತಂ ಜಪೇತ್ ॥೬೮॥

೬೮ ಮಧ್ಯಾಹ್ನ ಕಾಲವದರೆವಿಗೂ ವೇದಮಾತೆಯಾದ ಗಾಯತ್ರಿಯನ್ನು ಬ್ರಾಹ್ಮಣನಾದವನು ಜಪಿಸಬೇಕು. ನಂತರ ಕಾಲದಲ್ಲಿ ರಾತ್ರಿ ಮಲಗುವವರೆವಿಗೂ ಶಿವ ಪಂಚಾಕ್ಷರಿಯೇ ಮೊದಲಾದ ಮಂತ್ರಗಳನ್ನು ಜಪಿಸಬೇಕು.

ಜ್ಞಾನಂ ಲಬ್ಧ್ವಾ ಚ ದೇಹಾಂತೇ ವಿಪ್ರೋ ಮುಕ್ತಿಮವಾಪ್ನುಯಾತ್ ।
ಅನ್ಯೇಷಾಂ ನರನಾರೀಣಾಂ ತ್ರಿಸ್ನಾನೇನ ಜಪೇನ ಚ ॥೬೯॥

೬೯ ಹೀಗೆ ನಿಯಮದಿಂದ ಮಾಡಿದ್ದೇ ಆದರೆ ವಿಪ್ರನಾದವನು ದಿವ್ಯಜ್ಞಾನವನ್ನು ಹೊಂದಿ ಕೊನೆಗೆ ಮುಕ್ತಿಯನ್ನು ಹೊಂದುವನು. ಇನ್ನು ಬೇರೆ ಪುರುಷರು, ಸ್ತ್ರೀಯರು ಮೂರು ಕಾಲ ಸ್ನಾನ, ಜಪಾದಿಗಳನ್ನು,

ಸದಾ ಪಂಚಾಕ್ಷರಸ್ಯೈವ ವಿಶುದ್ಧಂ ಜ್ಞಾನಮಾಪ್ಯತೇ ।
ಇಷ್ಟಮಂತ್ರಾನ್ ಸದಾ ಜಪ್ತ್ವಾ ಮಹಾಪಾಪಕ್ಷಯಂ ಲಭೇತ್ ॥೭೦॥

೭೦ ಅಂದರೆ ಪಂಚಾಕ್ಷರ ಜಪ ಹಾಗೆ ತಮಗೆ ಇಷ್ಟವುಳ್ಳ ಸರ್ವದಾ ಜಪ ಮಾಡಿದ್ದಾದರೆ ಮಹಾ ಪಾಪಗಳು ನಾಶವಾಗಿ ಪರಿಶುದ್ಧ ಜ್ಞಾನವನ್ನು ಹೊಂದುವರು.

ಧನುರ್ಮಾಸೇ ವಿಶೇಷೇಣ ಮಹಾನ್ನೈವೇದ್ಯಮಾಚರೇತ್ ।
ಶಾಲಿತಂಡುಲಭಾರೇಣ ಮರೀಚಪ್ರಸ್ಥಕೇನ ಚ ॥೭೧॥

೭೧ ಧನುರ್ಮಾಸದಲ್ಲಿ ವಿಶೇಷವಾಗಿ ಮಹಾನ್ನೈವೇದ್ಯವನ್ನು ಮಾಡಬೇಕು. ಭಾರಪ್ರಮಾಣ ಅಕ್ಕಿ ಒಂದು ಪ್ರಸ್ಥ ಪ್ರಮಾಣ ಮೆಣಸು ಉಪಯೋಗಿಸಿ ಮಹಾನ್ನೈವೇದ್ಯ ಮಾಡಬೇಕು.

ಗಣನಾ ದ್ವಾದಶಂ ಸರ್ವಂ ಮಧ್ವಾಜ್ಯಕುಡವೇನ ಹಿ ।
ದ್ರೋಣಯುಕ್ತೇನ ಮುದ್ಗೇನ ದ್ವಾದಶವ್ಯಂಜನೇನ ಚ ॥೭೨॥

೭೨ ನೈವೇದ್ಯವು ಹನ್ನೆರಡು ವಿಧವಾಗಿರಬೇಕು. ಒಂದು ಕುಡುವ ಪ್ರಮಾಣ ಜೇನುತುಪ್ಪ, ತುಪ್ಪ, ದ್ರೋಣ ಪ್ರಮಾಣ ಹೆಸರು, ಹನ್ನೆರಡು ವಿಧವಾದ ನೆಂಚಿಕೊಳ್ಳುವ (ವ್ಯಂಜನ) ವಸ್ತುಗಳು,

ಘೃತಪಕ್ವೈರಪೂಪೈಶ್ಚ ಮೋದಕೈಃ ಶಾಲಿಕಾದಿಭಿಃ ।
ದ್ವಾದಶೈಶ್ಚ ದಧಿಕ್ಷೀರೈರ್ದ್ವಾದಶಪ್ರಸ್ಥಕೇನ ಚ ॥೭೩॥

೭೩ ತುಪ್ಪದಿಂದ ಕರಿದ ಸಿಹಿ ತಿಂಡಿಗಳು, ಕರಿಗಡುಬು, ಶಾಲ್ಯನ್ನ ಮೊದಲಾದ ಅನ್ನಗಳು, ಹಾಲು, ಮೊಸರುಗಳು ಹನ್ನೆರಡು ಪ್ರಸ್ಥಪ್ರಮಾಣ.

ನಾರಿಕೇಳಫಲಾದೀನಾಂ ತಥಾ ಗಣನಯಾ ಸಹ ।
ದ್ವಾದಶಕ್ರಮುಕೈರ್ಯುಕ್ತಂ ಷಟ್ತ್ರಿಂಶತ್ಪತ್ರಕೈರ್ಯುತಂ ॥೭೪॥

೭೪ ಹನ್ನೆರಡು ತೆಂಗಿನಕಾಯಿ, ಹನ್ನೆರಡು ಅಡಿಕೆ, ೩೬ ವಿಳ್ಳೆಯ ಎಲೆಯಿಂದ ನಿವೇದನ ಕೂಡಿರಬೇಕು.

ಕರ್ಪೂರಖುರಚೂರ್ಣೇನ ಪಂಚಸೌಗಂಧಿಕೈರ್ಯುತಂ ।
ತಾಂಬೂಲಯುಕ್ತಂ ತು ಯದಾ ಮಹಾನ್ನೈವೇದ್ಯಲಕ್ಷಣಂ ॥೭೫॥

೭೫ ಪಚ್ಚಕರ್ಪೂರ, ಖುರವೆಂಬ ಸುಗಂಧ ಚೂರ್ಣಗಳಿಂದ ಕೂಡಿದ ತಾಂಬೂಲವನ್ನು ನಿವೇದಿಸಬೇಕು. ಇದೇ ಮಹಾನ್ನೈವೇದ್ಯವೆನಿಸುವುದು.

ಮಹಾನ್ನೈವೈದ್ಯಮೇತದ್ವೈ ದೇವತಾರ್ಪಣಪೂರ್ವಕಂ ।
ವರ್ಣಾನುಕ್ರಮಪೂರ್ವೇಣ ತದ್ಭಕ್ತೇಭ್ಯಃ ಪ್ರದಾಪಯೇತ್ ॥೭೬॥

೭೬ ಈ ರೀತಿಯಾದ ಮಹಾ ನೈವೇದ್ಯವನ್ನು ದೇವರಿಗೆ ನಿವೇದನ ಮಾಡ ವರ್ಣಕ್ರಮವಾಗಿ ಆಯಾ ದೇವತೆಗಳ ನಿಷೇದವನ್ನು ಆಯಾಯಾ ದೇವರ ಭಕ್ತರಿ (ವಿನಿಯೋಗ) ಮಾಡಬೇಕು.

ಏವಂ ಚೌದನನ್ನೈವೇದ್ಯಾದ್ಭೂಮೌ ರಾಷ್ಟ್ರಪತಿರ್ಭವೇತ್ ।
ಮಹಾನ್ನೈವೇದ್ಯದಾದೇನ ನರಃ ಸ್ವರ್ಗಮವಾಪ್ನುಯಾತ್ ॥೭೭॥

೭೭ ಈ ರೀತಿಯಾಗಿ ನಿವೇದನ, ವಿನಿಯೋಗ ಮಾಡಿದವನು ಭೂಲೋಕ ರಾಜನಾಗುವನು. ಮಹಾನ್ನೈವೇದ್ಯ ದಾನದಿಂದ ಮನುಷ್ಯನು ಸ್ವರ್ಗಲೋಕ ಹೊಂದುವನು.

ಮಹಾನ್ನೈವೇದ್ಯದಾನೇನ ಸಹಸ್ರೇಣ ದ್ವಿಜರ್ಷಭಾಃ ।
ಸ್ತ್ಯಯಲೋಕಂ ಚ ತಲ್ಲೋಕೇ ಪೂರ್ಣಮಾಯ ರವಾಪ್ನುಯಾತ್ ॥೭೮॥

೭೮ ಸಾವಿರ ಮಹಾನ್ನೈವೇದ್ಯ ದಾನದಿಂದ ಎಲೈ ದ್ವಿಜಶ್ರೇಷ್ಟರೇ ಸತ್ಯಲೋಕಪ ಹೊಂದಿದ ಮನುಷ್ಯನು ಪೂರ್ಣಾಯಸ್ಸನ್ನು ಪಡೆಯುವನು.

ಸಹಸ್ರಾಣಾಂ ಚ ತ್ರಿಂಶತ್ಯಾ ಮಹಾನ್ನೈಟೆದ್ಯದಾನತಃ ।
ತದೂರ್ಧ್ವಲೋಕಮಾಪ್ಯೈವ ನ ಪುನರ್ಜನ್ಮಭಾಗ್ಭವೇತ್ ॥೭೯॥

೭೯ ಮುವತ್ತು ಸಾವಿರ ಮಹಾನ್ನೈವೇದ್ಯವನ್ನು ದಾನ ಮಾಡಿದವನು ಸತ್ಯಲೋಕಕ್ಕಿ ಶ್ರೇಷ್ಠವಾದ ಲೋಕವನ್ನು ಹೊಂದಿ ಪುನಃ ಜನ್ಮವೆತ್ತದೇ ಮೋಕ್ಷವನ್ನು ಹೊಂದುವನ

ಸಹಸ್ರಾಣಾಂ ಚ ಷಟ್ತ್ರಿಂಶಜ್ಜನ್ಮನೈವೇದ್ಯಮಿರಿತಂ ।
ತಾವನ್ನೈವೇದ್ಯದಾನಂ ತು ಮಹಾಪೂರ್ಣಂ ತದುಚ್ಯತೇ ॥೮೦॥

೮೦ ಮೂವತ್ತು ಸಾವಿರ ಮಹಾನ್ನೈವೇದ್ಯಗಳಿಗೆ 'ಜನ್ಮ ನೈವೇದ್ಯ'ವೆಂದು ಹೆಸರು ಈ ರೀತಿಯಾದ ಜನ್ಮ ನೈವೇದ್ಯಕ್ಕೆ ಮಹಾಪೂರ್ಣವೆಂದು ಹೆಸರು.

ವಿ.ವಿ.:- 'ಧನುರ್ಮಾಸ'ವು ಉಳಿದ ಮಾಸಗಳಿಗಿಂತ ಪುಣ್ಯಪ್ರದ. ಧನುರ್ಮಾಸದ ಉಪ

ಕಾಲ ಪೂಜೆಯು ಹೆಚ್ಚಿನ ಫಲನೀಡುವುದು. ಶೈವಾಗಮದಲ್ಲಿ ಮಾಸ ಪೂಜಾವಿಧಿ ಗ್ರಂಥದಲ್ಲಿ ಧನುರ್ಮಾಸ ಪೂಜಾವಿಧಿಯಲ್ಲಿ ಈ ರೀತಿ ಹೇಳಿದ್ದಾರೆ. "ಸಹಪ್ರವಾರ್ಷಿಕ ಪೂಜಾ ದಿನಮೇಕೇನ ಲಭ್ಯತೇ" ಎಂದರೆ ಸಾವಿರ ವರ್ಷದ ಪೂಜಾಫಲವು ಧನುರ್ಮಾಸದ ಒಂದು ದಿನದ ಪೂಜೆಯಿಂದ ಲಭ್ಯವಾಗುತ್ತದೆ. ಈ ಕಾಲವು ಈ ರೀತಿ ಶ್ರೇಷ್ಠ ಏಕೆಂದರೆ ದೇವತೆಗಳಿಗೆ ಉತ್ತರಾಯಣ ಹಗಲು ದಕ್ಷಿಣಾಯನ ರಾತ್ರಿ ಪ್ರಮಾಣ ನಮ್ಮ ಒಂದು ವರ್ಷದೇವತೆಗಳಿಗೆ ಈ ರೀತಿ ಒಂದು ದಿನವಾಗುವುದು. ಇದರಲ್ಲಿ ಧನುರ್ಮಾಸವು ದೇವತೆಗಳಿಗೆ ಬೆಳಗಿನ ಝಾವವಾಗುವುದು. ನಮಗೆ ಬೆಳಗಿನ ಝಾವ ೪ ಘಂಟೆ ಇದ್ದಂತೆ. ಅಂದರೆ ದೇವತೆಗಳು ಎಚ್ಚರಗೊಳ್ಳುವ ಕಾಲ. ಇದನ್ನೇ 'ಪಂಚಪಂಚುಷಃಕಾಲ' ಎಂದಿದ್ದಾರೆ. ಅಂದರೆ 'ಸೂರ್ಯಾಸ್ತಾನಂತರ ೨೫ ಘಂಟೆಗಳು' ಎಂದರ್ಥ. ಆದಕ್ಕೆ ಕಾರ್ತಿಕ ಮಾಸದ ಶುಕ್ಲ ದ್ವಾದಶಿ ಉಸತ್ಥಾನದ್ವವಾದಶೀ ಅಂದರೆ ವಿಷ್ಣುವು ಯೋಗನಿದ್ರೆಯಿಂದ ಏಳುವ ಕಾಲ. ದೇವತೆಗಳು ಏಳುವಾಗಲೇ ಅವರಿಗೆ ಪ್ರಿಯವಾದ ಪೂಜೆ ದಾನಗಳನ್ನು ಮಾಡಿದರೆ ಅವರ ಪ್ರೀತಿಗೆ ಪಾತ್ರರಾಗಬಹುದು. 'ಆದ್ದರಿಂದಲೇ ಧನುರ್ಮಾಸವು ದೇವತೆಗಳ ಪೂಜೆಗೆ ಅತ್ಯಂತ ಶ್ರೇಷ್ಠವಾದುದು' ಈ ಧನುರ್ಮಾಸದಲ್ಲಿ ಮುದ್ಗಾನ್ನ (ಪೊಂಗಲು ಅಥವಾ ಹುಗ್ಗಿ)ವನ್ನು ಹಸಿಶುಂಠಿ, ಮೆಣಸುಗಳಿಂದ ತಯಾರಿಸಿ ಮೊಸರನ್ನು ಸಹ ದೇವಕಿಗೆ ನಿವೇದಿಸಬೇಕೆಂದು ಧನುರ್ಮಾಸ ಪೂಜಾ ವಿಧಿಪಟಲದಲ್ಲಿ ವಿವರಿಸಿದೆ. ಆದ್ದರಿಂದ ಇಲ್ಲಿ ವಿಶೇಷವಾದ ಮಹಾನ್ನೈವೇದ್ಯಗಳನ್ನು ವಿವರಿಸಿದುದು. ಇದನ್ನೇ ಮೇಲೆ ತಿಳಿಸಿದ ಪಟಲದಲ್ಲಿ 'ಸಹಸ್ರಶಾಖಾ ಸಂಯುಕ್ತಂ ದಿನೇ ದಿನೇ ವಿಶೇಷಶಃ' ಎಂದು ವಿವರಿಸಿದ್ದಾರೆ.

ಪಂಚಸೌಗಂಧಿಕ:- ತಾಂಬೂಲದ ಜತೆ ಪಂಚ ಸೌಗಂಧಿಕವನ್ನು ನಿವೇದಿಸಬೇಕೆಂದು ಹೇಳಿದೆ. ಬೇರೆ ಗ್ರಂಥದಲ್ಲಿ (ಶೈವಾಗಮದ)

'ಏಲಾ ಲವಂಗ ತಕ್ಕೊಲ ಜಾತೀ ಕರ್ಪೂರ ಚೂರ್ಣಯುಕ್

ಮಧುಶರ್ಕರಯಾ ಯುಕ್ತ ಮುಖವಾದ ಎಂದು ಸ್ಮೃತಂ' ಎಂದು ಹೇಳಿದೆ.

ಈ ರೀತಿಯಿಂದ ಕೂಡಿದ ತಾಂಬೂಲವನ್ನು ಈಶ್ವರನಿಗೆ ಸಮರ್ಪಿಸಬೇಕು.

ಮಹಾಪೂರ್ಣಸ್ಯ ನೈವೇದ್ಯಂ ಜನ್ಮನೈವೇದ್ಯಮಿಷ್ಯತೇ |
ಜನ್ಮನೈವೇದ್ಯದಾನೇನ ಪುನರ್ಜನ್ಮ ನ ವಿದ್ಯತೇ ||೮೧||

೮೧ ಈ ಮಹಾಪೂರ್ಣನೈವೇದ್ಯವೇ ಜನ್ಮನೈವೇದ್ಯವೆನಿಸಿಕೊಳ್ಳುವುದು ಈ ರೀತಿಯಿಂದ, ಜನ್ಮ ನೈವೇದ್ಯದಾನದಿಂದ ಪುನರ್ಜನ್ಮವು ಇರುವುದಿಲ್ಲ ಅಂದರೆ ಮೋಕ್ಷಪ್ರಾಪ್ತವಾಗುವುದು.

ಊರ್ಜೇ ಮಾಸಿ ದಿನೇ ಪುಣ್ಯೇ ಜನ್ಮನೈವೇದ್ಯಮಾಚರೇತ್ ।
ಸಂಕ್ರಾಂತಿಪಾತಜನ್ಮರ್ಕ್ಷಪೌರ್ಣಮಾಸ್ಯಾದಿಸಂಯುತೇ ॥೬೨॥

೬೨ ಕಾರ್ತಿಕ ಮಾಸದಲ್ಲಿ ಪುಣ್ಯಕರಗಳಾದ ಸಂಕ್ರಾಂತಿ, ವ್ಯತೀಪಾತ, ಜನ್ಮನಕ್ಷ: ಪೂರ್ಣಿಮಾ ಮುಂತಾದ ದಿನಗಳಲ್ಲಿ ಅಥವಾ ಈ ರೀತಿಯಾದ ಯೋಗದಿಂದ ಕೂಡಿ ದಿನಗಳಲ್ಲಿ ಜನ್ಮ ನೈವೇದ್ಯವನ್ನು ಮಾಡಬೇಕು.

ಅಬ್ದಜನ್ಮದಿನೇ ಕುರ್ಯಾಜ್ಜನ್ಮನೈವೇದ್ಯಮುತ್ತಮಂ ।
ಮಾಸಾಂತರೇಷು ಜನ್ಮರ್ಕ್ಷಪೂರ್ಣಯೋಗದಿನೇಽಪಿ ಚ ॥೬೩॥

೬೩ ವಾರ್ಷಿಕವಾದ ಜನ್ಮ ನಕ್ಷತ್ರದಲ್ಲಿ (ಪ್ರತಿವರ್ಷದ ಹುಟ್ಟು ಹಬ್ಬದಲ್ಲಿ ಉತ್ತಮವಾದ ಜನ್ಮ ನೈವೇದ್ಯವನ್ನು ಅರ್ಪಿಸಬೇಕು. ಬೇರೆ ಮಾಸಗಳಲ್ಲೂ ಸಹ ಜನ ನಕ್ಷತ್ರ ಹಾಗೂ ಪೂರ್ಣಯೋಗಗಳಿಂದ ಕೂಡಿದ ದಿನಗಳಲ್ಲಿ ಜನ್ಮನೈವೇದ್ಯವನ ಮಾಡಬೇಕು.

ಮೇಲನೇ ಚ ತನೇರ್ವಾಪಿ ತಾವತ್ಸಾಹಸ್ರಮಾಚರೇತ್ ।
ಜನ್ಮನೈವೇದ್ಯದಾನೇನ ಜನ್ಮಾರ್ಪಣಫಲಂ ಲಭೇತ್ ॥೬೪॥

೬೪ ಶನಿಸಂಬಂದವಾದ ದಿನಗಳಲ್ಲಿ ಮೇಲೆ ಹೇಳಿದಂತೆ ಸಹಸ್ರ ನೈವೇದ್ಯವನು ಮಾಡಬೇಕು. ಜನ್ಮ ನೈವೇದ್ಯ ದಾನದಿಂದ ಜನ್ಮವನ್ನೇ ಅರ್ಪಿಸಿದ ಫಲ ಉಂಟಾಗುವುದು

ಜನ್ಮಾರ್ಪಣಾಚ್ಛಿವಃ ಪ್ರೀತಃ ಸ್ವಸಾಯುಜ್ಯಂ ದದಾತಿ ಹಿ ।
ಇದಂ ತಜ್ಜನ್ಮನೈವೇದ್ಯಂ ಶಿವಸ್ಯೈವ ಪ್ರದಾಪಯೇತ್ ॥೬೫॥

೬೫ ಜನ್ಮಾರ್ಪಣದಿಂದ ಶಿವನು ಸುಪ್ರೀತನಾಗಿ ತನ್ನ ಲೋಕವನ್ನು ಕರುಣಿಸುವನು. ಈ ರೀತಿಯಾದ ಜನ್ಮನೈವೇದ್ಯವನ್ನು ಶಿವನಿಗೆ ವಿಶೇಷವಾಗಿ ಅರ್ಪಿಸಬೇಕು.

ಯೋನಿಲಿಂಗಸ್ವರೂಪೇಣ ಶಿವೋ ಜನ್ಮನಿರೂಪಕಃ ।
ತಸ್ಮಾಜ್ಜನ್ಮನಿವೃತ್ತ್ಯರ್ಥಂ ಜನ್ಮಪೂಜಾ ಶಿವಸ್ಯ ಹಿ ॥೬೬॥

೬೬ ಕಾರಣಸ್ವರೂಪದಿಂದ ಶಿವನು ಜನ್ಮವನ್ನು ಉಂಟು ಮಾಡುವನು. ಆದ್ದರಿಂದ ಜನ್ಮ ನಿವೃತ್ತಿಗಾಗಿ ಶಿವನಿಗೆ ಜನ್ಮ ಪೂಜೆಯನ್ನು ಅರ್ಪಿಸಬೇಕು.

ಬಿಂದುನಾದಾತ್ಮಕಂ ಸರ್ವಂ ಜಗತ್ಸ್ಥಾವರಜಂಗಮಂ ।
ಬಿಂದುಃ ಶಕ್ತಿಃ ಶಿವೋ ನಾದಃ ಶಿವಶಕ್ತ್ಯಾತ್ಮಕಂ ಜಗತ್ ॥೮೭॥

೮೭ ಈ ಚರಾಚರಾತ್ಮಕವಾದ ಪ್ರಪಂಚವೆಲ್ಲವೂ ಬಿಂದು ಮತ್ತು ನಾದಾತ್ಮಕವಾದುದು ಬಿಂದುವೆಂದರೆ ಶಕ್ತಿಯು ನಾದವೆಂದರೆ ಶಿವನು ಆದ್ದರಿಂದ ಜಗತ್ತು ಶಿವ ಮತ್ತು ಶಕ್ತಿ ಸ್ವರೂಪವಾದುದು.

ನಾದಾಧಾರಮಿದಂ ಬಿಂದುರ್ಬಿಂದ್ವಾಧಾರಮಿದಂ ಜಗತ್ ।
ಜಗದಾಧಾರಭೂತೌ ಹಿ ಬಿಂದುನಾದೌ ವ್ಯವಸ್ಥಿತೌ ॥೮೮॥

೮೮ ಬಿಂದುವಿಗೆ ಆಧಾರವು ನಾದವು ಬಿಂದುವಿಗೆ ಆಧಾರಭೂತವಾದುದು ಈ ಜಗತ್ತು ಹೀಗೆ ಬಿಂದು ನಾದಗಳು ಸ್ಥಿರ ಮತ್ತು ಚರವಾದ ಪ್ರಪಂಚಕ್ಕೆ ಆಧಾರ ಭೂತವಾಗಿರುವುದು.

ಬಿಂದುನಾದಯುತಂ ಸರ್ವಂ ಸಕಲೀಕರಣಂ ಭವೇತ್ ।
ಸಕಲೀಕರಣಾಜ್ಜನ್ಮ ಜಗತ್ಪ್ರಾಪ್ನೋತ್ಯಸಂಶಯಂ ॥೮೯॥

೮೯ ಜಗತ್ತು ಬಿಂದುನಾದಗಳಿಂದ ಕೂಡಿದುದೇ ಆದರೆ ಸಂಪೂರ್ಣತೆಯು ಸೃಷ್ಟಿಮುಖವಾಗುವುದು. ಈ ರೀತಿಯಾದ ಸಂಪೂರ್ಣತೆಯಿಂದ ಜನ್ಮವು ಜಗತ್ತಿನಲ್ಲಿ ಉಂಟಾಗುವುದು. ಇದರಲ್ಲಿ ಸಂಶಯವಿಲ್ಲ.

ಬಿಂದುನಾದಾತ್ಮಕಂ ಲಿಂಗಂ ಜಗತ್ಕಾರಣಮುಚ್ಯತೇ ।
ಬಿಂದುರ್ದೇವೀ ಶಿವೋ ನಾದಃ ಶಿವಲಿಂಗಂ ತು ಕಥ್ಯತೇ ॥೯೦॥

೯೦ ಶಿವಲಿಂಗವು ಬಿಂದು ನಾದಾತ್ಮಕವಾದುದು. ಅಂದರೆ ಜಗತ್ತಿಗೆ ಕಾರಣವಾಗಿರುವುದು. ಶಿವಲಿಂಗವು ನಾದವು ದೇವಿಯು ಬಿಂದುವು. ಆದ್ದರಿಂದಲೇ ಶಿವಲಿಂಗವೆಂದು ಹೇಳಿದೆ.

ತಸ್ಮಾಜ್ಜನ್ಮನಿವೃತ್ತ್ಯರ್ಥಂ ಶಿವಲಿಂಗಂ ಪ್ರಪೂಜಯೇತ್ ।
ಮಾತಾ ದೇವೀ ಬಿಂದುರೂಪಾ ನಾದರೂಪಃ ಶಿವಃ ಪಿತಾಃ ॥೯೧॥

೯೧ ಆದ್ದರಿಂದ ಜನ್ಮ ನಿವೃತ್ತಿಗಾಗಿ ಶಿವಲಿಂಗವನ್ನು ಪೂಜಿಸಬೇಕು. ಬಿಂದು ರೂಪಳಾದ ದೇವಿಯು ಜಗತ್ತಿಗೆ ಮಾತೃಸ್ವರೂಪಳಾಗಿರುವಳು. ನಾದರೂಪಿಯಾದ ಶಿವನು ಪ್ರಪಂಚಕ್ಕೆ ತಂದೆಯಾಗಿರುವನು.

ವಿ.ವಿ.:- ಶಿವಲಿಂಗವೈಶಿಷ್ಟ್ಯವೆಂದರೆ ನಿರಾಕಾರ. ಇದರಲ್ಲಿ ಪೀಠ ಮತ್ತು ಲಿಂಗ ಎರಡೂ ಸೇರಿರುತ್ತದೆ. ಪೀಠವೇ ದೇವಿಯು ಲಿಂಗವೇ ಶಿವನು. ಪ್ರಕೃತಿ ಪುರುಷರ ಸಮ್ಮಿಲನ ಶಿವಲಿಂಗವನ್ನು ಪೂಜಿಸುವಿಕೆಯಿಂದ ಪಾರ್ವತೀ ಪರಮೇಶ್ವರರನ್ನು ಪೂಜಿಸಿದ ಫಲ ಪ್ರಾಪ್ತವಾಗುವುದು. ಜಗತ್ತಿನ ತಂದೆ, ತಾಯಿಯರನ್ನು ಜಗತ್ತಿನ ಸೃಷ್ಟಿಗೆ ಕಾರಣರಾದ ಶಿವಪಾರ್ವತಿಯರನ್ನು ಪೂಜಿಸಿದಂತಾಗುವುದು ಆದ್ದರಿಂದಲೇ ಮಹಾಕವಿಯಾದ ಕಾಳಿದಾಸನು ತನ್ನ ಮಹಾಕಾವ್ಯವಾದ 'ರಘುವಂಶ' ಕಾವ್ಯದಲ್ಲಿ

"ವಾಗರ್ಥಾವಿವ ಸಂಪೃಕ್ತೌ ವಾಗರ್ಥಪ್ರತಿಪತ್ತಯೇ
ಜಗತಃ ಪಿತಕಾ ವಂದೇ ಪಾರ್ವತೀ ಪರಮೇಶ್ವರೌ||" ಎಂದು.

ಜಗತ್ತಿಗೆ ತಂದೆ ತಾಯಿಯರಾದ ಶಿವ-ಪಾರ್ವತಿಯರನ್ನು ಮಾತು ಮತ್ತು ಅರ್ಥಗಳಂತೆ ಅನ್ಯೋನ್ಯ ಸಂಬಂದವುಳ್ಳವರೆಂದು ಸ್ತುತಿಸಿದ್ದಾನೆ. ಈ ಸ್ತುತಿಯಲ್ಲಿ ಶಿವ-ಪಾರ್ವತಿಯರ ಸಂಬಂಧದ ಶ್ರೇಷ್ಠತೆ ಕಾಣುತ್ತದೆ. ಅಂದರೆ 'ನ ಶಕ್ತಿರಹಿತಃ ಶಿವಃ ಎಂದರೆ ಶಿವನಿಲ್ಲದೇ ಶಕ್ತಿ ಇಲ್ಲ. ಶಕ್ತಿ ಇಲ್ಲದೇ ಶಿವನಿಲ್ಲ. ಇದನ್ನೇ ಆಚಾರ್ಯಶ್ರೇಷ್ಠರಾದ ಶ್ರೀಶಂಕರಭಗವತ್ಪಾದರೂ ತಮ್ಮ ಸೌಂದರ್ಯ ಲಹರಿಯಲ್ಲಿ ಪ್ರಾರಂಭದಲ್ಲಿಯೇ 'ಶಿವಃ ಶಕ್ತ್ಯಾಯುಕ್ತೋ' ಎಂದು ಸ್ತೋತ್ರ ಮಾಡಿದ್ದಾರೆ. ಶಿವನು ಶಕ್ತಿ ಇಲ್ಲದೇ ಕಾರ್ಯಪ್ರವೃತ್ತನಾಗಲಾರ ಶಕ್ತಿಯೂ ಹಾಗೆಯೇ ಆದ್ದರಿಂದಲೇ ಅದರ ಸಂಬಂಧ ವಿಶೇಷವಾದದ್ದು. ಆದ್ದರಿಂದಲೇ ಶ್ರೀ ಅನ್ನಪೂರ್ಣಾಷ್ಟಕ ರಚನಾಕಾರರೂ ಕೊನೆಯಲ್ಲಿ ಮಾತಾ ಚ ಪಾರ್ವತೀ ದೇವಿ ಪಿತಾದೇವೋ ಮಹೇಶ್ವರಃ ಎಂದಿದ್ದಾರೆ.
ತಾಯಿ-ತಂದೆ ಎಂದ ಮೇಲೆ ಯಾರೋಬ್ಬರಿಲ್ಲದಿದ್ದರೂ ಜನನವಾಗಲಾರದು. ಈ ತಾಯಿ-ತಂದೆಗಳು ಜಗತ್ತಿನ ಸೃಷ್ಟಿಗೆ ಕಾರಣರಾದವರು.

**ಪೂಜಿತಾಭ್ಯಾಂ ಪಿತೃಭ್ಯಾಂ ತು ಪರಮಾನಂದ ಏವ ಹಿ |**
**ಪರಮಾನಂದಲಾಭಾರ್ಥಂ ಶಿವಲಿಂಗಂ ಪ್ರಪೂಜಯೇತ್ ||೬೨||**

೬೨ ತಂದೆ-ತಾಯಿಯರನ್ನು ಪೂಜಿಸಿದರೆ ಪರಮಾನಂದವು ಲಭ್ಯವಾಗುವುದು. ಆ ರೀತಿಯಾದ ಪರಮಾನಂದ ಪ್ರಾಪ್ತಿಗಾಗಿ ಶಿವಲಿಂಗವನ್ನು ಪೂಜಿಸಬೇಕು.

**ಸಾ ದೇವೀ ಜಗತಾಂ ಮಾತಾ ಸ ಶಿವೋ ಜಗತಃ ಪಿತಾ |**
**ಪಿತ್ರೋಃ ಶುಶ್ರೂಷಕೇ ನಿತ್ಯಂ ಕೃಪಾಧಿಕ್ಯಂ ಹಿ ವರ್ಧತೇ ||೬೩||**

೯೩ ಆದ್ದರಿಂದ ಈ ರೀತಿಯಾದ ದೇವಿಯು ಜಗತ್ತಿಗೆ ತಾಯಿಯು, ಶಿವನು ಜಗತ್ತಿಗೆ ತಂದೆಯು. ತಂದೆ ತಾಯಿಯರ ಶುಶ್ರೂಷೆ ಮಾಡುವ ಮಗನಲ್ಲಿ ತಂದೆ ತಾಯಿಯವರಿಗೆ ವಿಶೇಷ ವಾತ್ಸಲ್ಯವುಂಟಾಗುವುದು.

ಕೃಪಯಾಂತರ್ಗತೈಶ್ಚರ್ಯಂ ಪೂಜಕಸ್ಯ ದದಾತಿ ಹಿ ।
ತಸ್ಮಾದಂತರ್ಗತಾನಂದಲಾಭಾರ್ಥಂ ಮುನಿಪುಂಗವಾಃ ॥೯೪॥

೯೪ ಹಾಗೆ ವಿಶೇಷ ವಾತ್ಸಲ್ಯ ಉಂಟಾಗಿ ತಂದೆ ತಾಯಿಯರು ಗುಪ್ತವಾದ ಐಶ್ವರ್ಯವನ್ನು ಪೂಜಕನಾದ ಪುತ್ರನಿಗೆ ನೀಡುವರು. ಆದ್ದರಿಂದ ಅಂತರ್ಗತವಾದ ಆನಂದದ ಲಾಭಕ್ಕಾಗಿ ಶಿವ-ಪಾರ್ವತಿಯರನ್ನು ಪೂಜಿಸಬೇಕು.

ಪಿತೃಮಾತೃಸ್ವರೂಪೇಣ ಶಿವಲಿಂಗಂ ಪ್ರಪೂಜಯೇತ್ ।
ಭರ್ಗಂ ಪುರುಷರೂಪೋ ಹಿ ಭರ್ಗಾ ಪ್ರಕೃತಿರುಚ್ಯತೇ ॥೯೫॥

೯೫ ಮಾತಾ-ಪಿತೃ ಸ್ವರೂಪವೆಂದರಿತು ಶಿವಲಿಂಗವನ್ನು ಪೂಜಿಸಬೇಕು. ಅವ್ಯಕ್ತವಾದ ವಸ್ತುವಿಗೆ ಆಧಾರವಾದ ಗರ್ಭವುಳ್ಳವನು. ಪುರುಷನು, ವ್ಯಕ್ತವಾದುದಕ್ಕೆ ಆಧಾರವಾದ ಗರ್ಭವು ಪ್ರಕೃತಿಯು ಇಲ್ಲಿ ಪುರುಷ ಶಿವ ಪ್ರಕೃತಿ ದೇವಿಯು.

ಅವ್ಯಕ್ತಾಂತರಧಿಷ್ಠಾನಂ ಗರ್ಭಃ ಪುರುಷ ಉಚ್ಯತೇ ।
ಸುವ್ಯಕ್ತಾಂತರಧಿಷ್ಠಾನಂ ಗರ್ಭಃ ಪ್ರಕೃತಿರುಚ್ಯತೇ ॥೯೬॥

೯೬ ಭರ್ಗ ಎಂದರೆ ಶಿವನು ಭರ್ಗ ಎಂದರೆ ಪಾರ್ವತಿ. ಶಿವಪಾರ್ವತಿಯರು ಪಿತೃಮಾತೃ ಸ್ವರೂಪವಾಗಿ ಶಿವಲಿಂಗ ಸ್ವರೂಪರಾಗಿರುವರು.

ಪುರುಷಸ್ಯಾದಿಗರ್ಭೋ ಹಿ ಗರ್ಭಾವಾನ್ ಜನಕೋ ಯತಃ ।
ಪುರುಷಾತ್ಪ್ರಕೃತೌ ಯುಕ್ತಂ ಪ್ರಥಮಂ ಜನ್ಮ ಕಥ್ಯತೇ ॥೯೭॥

೯೭ ಪುರುಷನು ಆದಿಗರ್ಭನಾಗಿ (ಶಿವನು) ಗರ್ಭವುಳ್ಳವನಾಗಿ ಜಗತ್ತಿಗೆ ತಂದೆಯಾಗಿದ್ದಾನೆ. ಪುರುಷನಿಂದ ಪ್ರಕೃತಿಯಲ್ಲಿ ಸೇರಿದ್ದಾದರೇ ಅದೇ ಮೊದಲನೇ ಜನ್ಮವು.

**ಪ್ರಕೃತೇರ್ವ್ಯಕ್ತತಾಂ ಯಾತಂ ದ್ವಿತೀಯಂ ಜನ್ಮ ಕಥ್ಯತೇ ।**
**ಜನ್ಮ ಜಂತುರ್ಮೃತ್ಯು ಜನ್ಮ ಪುರುಷಾತ್ಪ್ರಾತಿಪದ್ಯತೇ ॥೯೮॥**

೯೮ ಅನಂತರ ಪ್ರಕೃತಿಯಿಂದ ವ್ಯಕ್ತನಾಗಿ (ತೋರುವುದಾಗಿ) ದ್ವಿತೀಯ ಜನ್ಮವೆಂದು ಹೇಳಲ್ಪಟ್ಟಿದೆ. ಹೀಗೆ ಸಕಲ ಜೀವಿಗಳೂ ಪುರುಷನಾದ ಜನ್ಮ-ಮೃತ್ಯುಗಳನ್ನು ಪಡೆಯುವರು.

**ಅನ್ಯತೋ ಭಾವ್ಯತೇಽವಶ್ಯಂ ಮಾಯಯಾ ಜನ್ಮ ಕಥ್ಯತೇ ।**
**ಜೀರ್ಯತೇ ಜನ್ಮಕಾಲಾದ್ಯತ್ತಸ್ಮಾಜ್ಜೀವ ಇತಿ ಸ್ಮೃತಃ ॥೯೯॥**

೯೯ ಆದರೆ ಜನಗಳು ಬೇರೆ ಕಾರಣದಿಂದ ಜನ್ಮವೆಂದು ಹೇಳುವರು. ವಶ್ಯವಲ್ಲದ ಮಾಯೆಯಿಂದ ಜನ್ಮವೆಂದು ಹೇಳಿದೆ. ಜನ್ಮ ಕಾಲಾರಂಭ್ಯ ಕಷ್ಟಪಡುವವನಾದ್ದರಿಂದ ಜೀವನೆಂದು ಜಂತುವಿಗೆ ಹೆಸರು.

**ಜನ್ಯತೇ ತನ್ಯತೇ ಪಾಶೈರ್ಜೀವಶಬ್ದಾರ್ಥ ಏವ ಹಿ ।**
**ಜನ್ಮಪಾಶನಿವೃತ್ತ್ಯರ್ಥಂ ಜನ್ಮಲಿಂಗಂ ಪ್ರಪೂಜಯೇತ್ ॥೧೦೦॥**

೧೦೦ ಜನ್ಮ ಹೊಂದಿ ಸಂಸಾರಪಾಶದಿಂದ ಕೂಡಿದವನಾದ್ದರಿಂದಲೂ 'ಜೀವ'ನೆಂದು ಹೇಳುವರು. ಈ ರೀತಿಯಾಗಿ ಜೀವಶಬ್ದಕ್ಕೆ ಅರ್ಥವು. ಈ ರೀತಿಯಾದ ಜನನ-ಮರಣಾದಿ ಸಂಸಾರಪಾಶಗಳ ನಿವೃತ್ತಿಗಾಗಿ ಜನ್ಮಲಿಂಗವನ್ನು ಪೂಜಿಸಬೇಕು. ಶಿವನನ್ನು ಜನ್ಮನೈವೇದ್ಯದಿಂದ ಅರ್ಚಿಸಬೇಕು.

**ಭಂ ವೃದ್ಧಿಂ ಗಚ್ಛತೀತ್ಯರ್ಥಾದ್ಭಗಃ ಪ್ರಕೃತಿರುಚ್ಯತೇ ।**
**ಪ್ರಾಕೃತೈಃ ಶಬ್ದಮಾತ್ರಾದ್ಯೈಃ ಪ್ರಾಕೃತೇಂದ್ರಿಯಭೋಜನಾತ್ ॥೧೦೧॥**

೧೦೧ 'ಭಂ' ಎಂದರೆ ಅಭಿವೃದ್ಧಿಯು 'ಗ' ಎಂದರೆ ಹೊಂದುವುದು. ಈ ರೀತಿ ಭಗಶಬ್ದವು ವೃದ್ಧಿಯನ್ನು ಹೊಂದುವುದಾಗಿ ಅರ್ಥವನ್ನು ನೀಡುತ್ತದೆ. ಪ್ರಕೃತಿ ಸಂಬಂಧವಾದ ಶಬ್ದ ಮುಂತಾದ ವಿಷಯಗಳಿಂದ,

**ಭಗಸ್ಯೇದಂ ಭೋಗಮಿತಿ ಶಬ್ದಾರ್ಥೋ ಮುಖ್ಯತಃ ಕೃತಃ ।**
**ಮುಖ್ಯೋ ಭಗಸ್ತು ಪ್ರಕೃತಿರ್ಭಗವಾನ್ ಶಿವ ಉಚ್ಯತೇ ॥೧೦೨॥**

೧೦೨ ಅದೇ ಪ್ರಕೃತಿಮಯವಾದ ಇಂದ್ರಿಯಗಳಿಂದ (ಕಿವಿ ಮುಂತಾದ) ವೃದ್ಧಿಯನ್ನು ಹೊಂದುವುದರಿಂದ ಭಗವೆಂದೂ ಇದರಿಂದಲೇ ಭೋಗ ಶಬ್ದವು ಈ ಅರ್ಥದಿಂದಲೇ ಕಂಡಿರುವುದಾಗಿದೆ. ಆದ್ದರಿಂದ ಈ ರೀತಿಯಾದ ಫಲಕ್ಕೆ ಶಿವನು ಕಾರಣನಾಗಿದ್ದಾನೆ. ಆದ್ದರಿಂದಲೇ ಆತನಿಗೆ ಭಗವಾನ್ ಎಂದು ಹೇಳುವರು.

ಭಗವಾನ್ ಭೋಗದಾತಾ ಹಿ ನಾನ್ಯೋ ಭೋಗಪ್ರದಾಯಕಃ ।
ಭಗಸ್ವಾಮಿ ಚ ಭಗವಾನ್ ಭರ್ಗ ಇತ್ಯುಚ್ಯತೇ ಬುಧೈಃ ॥೧೦೩॥

೧೦೩ ಈ ರೀತಿಯಾದ ಭಗವಂತ ಭೋಗವನ್ನು ಕೊಡಲು ಶಕ್ತನು. ಬೇರೆಯವರಲ್ಲ. ಈ ರೀತಿಯಾದ ವೃದ್ಧಿಗೆ ಸ್ವಾಮಿಯಾದ್ದರಿಂದ ಆತನಿಗೆ 'ಭರ್ಗ' ಎಂದು ಹೇಳಿ ವಿದ್ವಾಂಸರು ಸ್ತುತಿಸುತ್ತಾರೆ.

ಭಗೇನ ಸಹಿತಂ ಲಿಂಗಂ ಭಗಂ ಲಿಂಗೇನ ಸಂಯುತಂ ।
ಇಹಾಮುತ್ರ ಚ ಭೋಗಾರ್ಥಂ ನಿತ್ಯಭೋಗಾರ್ಥಮೇವ ಹಿ ॥೧೦೪॥

೧೦೪ ಈ ರೀತಿಯಾದ ಭಗದಿಂದ ಲಿಂಗವೂ, ಲಿಂಗದಿಂದ ಭಾಗವೂ ಕೂಡಿರುವುದಾಗಿದೆ. ಈ ಲೋಕದಲ್ಲಿ ಮತ್ತು ಪರಲೋಕದಲ್ಲಿ ಭೋಗವು ಲಭಿಸುವುದು. ನಿತ್ಯಭೋಗಕ್ಕಾಗಿ ಈ ಶಿವಲಿಂಗ ಸ್ವರೂಪವನ್ನು ಅಂದರೆ ಶಿವನನ್ನು ಪೂಜಿಸಬೇಕು.

ಭಗವಂತಂ ಮಹಾದೇವಂ ಶಿವಲಿಂಗಂ ಪ್ರಪೂಜಯೇತ್ ।
ಲೋಕಪ್ರಸವಿತಾ ಸೂರ್ಯಸ್ತಚ್ಚಿಹ್ನಂ ಪ್ರಸವಾದ್ಭವೇತ್ ॥೧೦೫॥

೧೦೫ ಆದ್ದರಿಂದ ಭಗವಂತನೂ ಶಿವಲಿಂಗ ಸ್ವರೂಪನೂ ಆದ ಶಿವನನ್ನು ಪೂಜಿಸಬೇಕು. ಲೋಕದ ಸೃಷ್ಟ್ಯಾದಿಗಳಿಗೆ ಸೂರ್ಯನೆಂದು ತಿಳಿಯಬಹುದು. ಲಿಂಗದ ಗುರುತಿನಿಂದ ಸೂರ್ಯನೇ ಸೃಷ್ಟಿ ಕರ್ತೃವು.

ಲಿಂಗೇ ಪ್ರಸೂತಿಕರ್ತಾರಂ ಲಿಂಗಿನಂ ಪುರುಷೋ ಯಜೇತ್ ।
ಲಿಂಗಾರ್ಥಗಮಕಂ ಚಿಹ್ನಂ ಲಿಂಗಮಿತ್ಯಭಿಧೀಯತೇ ॥೧೦೬॥

೧೦೬ ಲಿಂಗದಲ್ಲಿ ಜಗತ್ತಿನ ಸೃಷ್ಟ್ಯಾದಿಗಳಿಗೆ ಕಾರಣನಾದ ಶಿವರೂಪನಾದ ಸೂರ್ಯನನ್ನು ಪೂಜಿಸಬೇಕು. ಲಿಂಗದ ಅರ್ಥವೆಂದರೆ ಕಾರಣ ವಸ್ತುವನ್ನು

ಜ್ಞಾಪಿಸುವುದೆಂದರ್ಥ ಅಂದರೆ ಜಗತ್ತಿನ ಸೃಷ್ಟ್ಯಾದಿಗಳಿಗೆ ಕಾರಣಸ್ವರೂಪನೆಂದು ಆದ್ದರಿಂದಲಿಂಗವೆಂದು ಹೇಳಲ್ಪಟ್ಟಿದೆ.

**ಲಿಂಗಮರ್ಥಂ ಹಿ ಪುರುಷಂ ಶಿವಂ ಗಮಯತೀತ್ಯದಃ ।**
**ಶಿವಶಕ್ತ್ಯೋಶ್ಚ ಚಿಹ್ನಸ್ಯ ಮೇಲನಂ ಲಿಂಗಮುಚ್ಯತೇ ॥೧೦೭॥**

೧೦೭ ಲಿಂಗವೆಂಬುದರ ಅರ್ಥ ಪುರುಷನೆಂದು, ಶಿವನೆಂದು ಗಮಯತಿ ಎಂದರೆ ಹೋಗುವುದು ಎಂದರೆ ಶಕ್ತಿಯಲ್ಲಿ ಸೇರುವುದು ಎಂದರ್ಥ. ಶಿವ-ಶಕ್ತಿಯರ ಸೇರುವಿಕೆಯೇ ಅದರ ಗುರುತೇ ಲಿಂಗವೆಂದು ಹೇಳಲ್ಪಟಿದ್ದೆ. ಲಿಂಗವೆಂದರೆ ಶಿವ-ಶಕ್ತಿಯರ, ಪ್ರಕೃತಿ-ಪುರುಷರ ಸಮ್ಮಿಲನ ಎಂದರ್ಥ.

**ಸ್ವಚಿಹ್ನಪೂಜನಾತ್ಪ್ರೀತಶ್ಚಿಹ್ನ ಕಾರ್ಯಂ ನ ವೀಯತೇ ।**
**ಜನ್ಮಾದಿ ಚಿಹ್ನಕಾರ್ಯಂ ಸ್ಯಾಜ್ಜನ್ಮಾದ್ಯಂ ವಿನಿವರ್ತತೇ ॥೧೦೮॥**

೧೦೮ ಈ ರೀತಿ ಗುರುತಿನ ಸ್ವರೂಪನಾದ ಈಶ್ವರನನ್ನು ಪೂಜಿಸಿದ್ದೇ ಆದರೆ ಪ್ರೀತನಾದ ಶಿವನ ಚಿನ್ನ ಕಾರ್ಯದಲ್ಲಿ ಅಂದರೆ ಜನ್ಮಾದಿ ಕಾರ್ಯಗಳಲ್ಲಿ ಭಕ್ತನನ್ನು ಸೇರಿಸುವುದಿಲ್ಲ. ಅಂದರೆ ಜನ್ಮಾದಿಗಳಿಂದ ರಹಿತನಾಗಿ ಮುಕ್ತನಾಗುವಂತೆ ಮಾಡುವನು ಎಂದು ಅರ್ಥ.

**ಪ್ರಾಕೃತೈಃ ಪುರುಷೈಶ್ಚಾಪಿ ಬಾಹ್ಯಾಭ್ಯಂತರಸಂಭವೈಃ ।**
**ಷೋಡಶೈರುಪಚಾರೈಶ್ಚ ಶಿವಲಿಂಗಂ ಪ್ರಪೂಜಯೇತ್ ॥೧೦೯॥**

೧೦೯ ಪ್ರಾಕೃತರಾದ ಅಂದರೆ ಈ ರೀತಿಯಾಗಿರುವ ಶಿವತತ್ವದ ತಿಳುವಳಿಕೆಯಿಲ್ಲದ ಜನರೂ ಸಹ ಬಾಹ್ಯ ಮತ್ತು ಆಂತರಿಕವಾದ (16) ಉಪಚಾರಗಳಿಂದ ಶಿವಲಿಂಗವನ್ನು ಪೂಜಿಸಬೇಕು.

ವಿ.ವಿ.:- ಬಾಹ್ಯ ಎಂದರೆ ಹೊರಗಿನ ಪ್ರಪಂಚಕ್ಕೆ ತಕ್ಕಂತೆ ಶಾಸ್ತ್ರೋಕ್ತವಾದ ಪದಾರ್ಥಗಳಿಂದ ಈಶ್ವರನನ್ನು ಹೂ, ಗಂಧ ಇತ್ಯಾದಿಗಳಿಂದ ಪೂಜಿಸುವುದು.
'ಆಂತರಿಕ' ಎಂದರೆ ಮಾನಸಿಕವಾಗಿ ಕಲ್ಪಿಸಿದ ಪದಾರ್ಥಗಳಿಂದ ಮಾಡುವ ಈಶ್ವರಾರಾಧನೆ ಮಾನಸಿಕವಾಗಿ ಎಲ್ಲವೂ (16 ಉಪಚಾರಗಳೂ) ಕಲ್ಪಿತ. ಅಂದರೆ ಹೊರಗೆ ಸುಮ್ಮನೆ ಕುಳಿತಂತೆ ಮನಸ್ಸಿನಲ್ಲಿ ಸಕಲ ಉಪಚಾರಗಳೂ ಹೃದಯ ಕಮಲದಲ್ಲಿರುವ ಈಶ್ವರನಿಗೆ ನಡೆಯುತ್ತದೆ. ಇದನ್ನೇ ಶಿವಮಾಸ ಪೂಜಾಸ್ತೋತ್ರದಲ್ಲಿ ಆಚಾರ್ಯರು ಚೆನ್ನಾಗಿ

ವಿವರಿಸಿದ್ದಾರೆ. ಇದನ್ನೇ ಶೈವಾಗಮದಲ್ಲಿ ಅಂತರ್ಯಾಗವೆಂಬ ಹೆಸರಿನಿಂದ ವಿವರಿಸಿದ್ದಾರೆ. 'ಹೃದಯೇ ಸೋಮಮಂಡಲೇ ' ಇತ್ಯಾದಿ ಅಂದರೆ ಹೃದಯ ಮಧ್ಯದಲ್ಲಿರುವ ಚಂದ್ರಮಂಡಲ, ಅದರ ಮಧ್ಯದಲ್ಲಿ ಬಿಳಿಯ ಕಮಲ. ಅದರ ಮಧ್ಯೆದಲ್ಲಿ ಜ್ಯೋತಿ ಸ್ವರೂಪನಾದ ಈಶ್ವರನನ್ನು ಬ್ರಹ್ಮರಂಧ್ರದಿಂದ ಸುರಿದ ಅಮೃತ ಧಾರೆಯಿಂದ ಅಭಿಷೇಕ ಮಾಡಿ, ವೈರಾಗ್ಯವೆಂಬ ಗಂಧದಿಂದಲೇ ಅಹಿಂಸೆಯೇ ಮೊದಲಾದ ಅಷ್ಟ-ಪುಷ್ಪದಿಂದ ಪೂಜಿಸಿ, ಅಹಂಕಾರ ರೂಪವಾದ ಧೂಪ, ಶಿವಜ್ಞಾನವೆಂಬ ದೀಪ, ಮನಸ್ಸನ್ನೇ ನೈವೇದ್ಯವೆಂದು ಕಲ್ಪಿಸಿ ಹೃದ್ಗತ ಶಿವನನ್ನು ಆರಾಧಿಸಬೇಕೆಂದು ಹೇಳಿದ. ಈ ರೀತಿಯಾದ ಪೂಜೆಯೇ ಮಾನಸಿಕವಾದ ಅಥವಾ ಅಂತರಿಕವಾದ ಪೂಜೆಯೆಂದು ವಿವರಿಸಲಾಗಿದೆ. ಈ ರೀತಿಯಾದ ಪೂಜೆಯಿಂದ ಮನುಷ್ಯನು ಅರಿಷಡ್ವರ್ಗಗಳನ್ನು ಗೆದ್ದು 'ಸೋಹಂ ಭಾವೇನ ಪೂಜಯೇತ್' ಶಿವಃ ಶಿವಮರ್ಚಯೇತ್ ಎಂಬ ಉಕ್ತಿಯಂತೆ ತಾನೇ ಶಿವನಾಗಿ ಬಾಹ್ಯದಲ್ಲಿ ಶಿವನನ್ನು ಪೂಜಿಸಬೇಕು. ಶ್ರೀ ಲಲಿತಾಸಹಸ್ರನಾಮದ ಬಿಂದು ನಾಮದಲ್ಲಿ ಸಹ ಆಂತರಿಕವಾದ ಪೂಜೆಯೇ ಬಾಹ್ಯಪೂಜೆಗಿಂತ ಶ್ರೇಷ್ಠವೆಂತಲೂ ಅದರಿಂದಲೇ ದೇವರು ತೃಪ್ತನಾಗುವನೆಂತಲೂ ಹೇಳಿದೆ. ಅದೇ 'ಅಂತರ್ಮುಖ ಸಮಾರಾಧ್ಯಾ ಬಹಿರ್ಮುಖ ಸುಮಲಾಭಾ' ಎಂಬ ನಾಮ. ಆದ್ದರಿಂದ ಆಂತರಿಕವಾದ ಪೂಜೆಯು ಶ್ರೇಷ್ಠ.

ಏವಮಾ ದಿತ್ಯವಾರೇ ಹಿ ಪೂಜಾ ಜನ್ಮನಿವರ್ತಿಕಾ ।
ಆದಿವಾರೇ ಮಹಾಲಿಂಗಂ ಪ್ರಣವೇನೈವ ಪೂಜಯೇತ್ ॥೧೧೦॥

೧೧೦ ಹೀಗೆಯೇ ಭಾನುವಾರದಲ್ಲಿ ಈ ರೀತಿಯಾದ ಶಿವಲಿಂಗವನ್ನು ಪೂಜಿಸಿದ್ದಾದರೆ ವಿಶೇಷವಾಗಿ ಓಂಕಾರದಿಂದ ಪೂಜಿಸಿದರೆ ಜನ್ಮವು ನಾಶವಾಗಿ ಮುಕ್ತಿಪ್ರಾಪ್ತವಾಗುವುದು.

ಆದಿವಾರೇ ಪಂಚಗವ್ಯೈರಭಿಷೇಕೋ ವಿಶಿಷ್ಯತೇ ।
ಗೋಮಯಂ ಗೋಜಲಂ ಕ್ಷೀರಂ ದಧ್ಯಾಜ್ಯಂ ಪಂಚಗವ್ಯಕಂ ॥೧೧೧॥

೧೧೧ ಭಾನುವಾರದಲ್ಲಿ ಈಶ್ವರನಿಗೆ ಪಂಚಗವ್ಯಾಭಿಷೇಕವು ವಿಶೇಷ ಫಲದಾಯಿನಿಯು. ಪಂಚಗವ್ಯಗಳು ಯಾವುವೆಂದರೆ ಗೋಮಯ (ಸಗಣಿ), ಗೋಮೂತ್ರ (ಗಂಜಲ), ಹಾಲು, ಮೊಸರು, ತುಪ್ಪ ಇವುಗಳೇ ಆಗಿವೇ ಇವು ಹಸುವಿನದ್ದಾಗಿರಬೇಕು.

ಕ್ಷೀರಾದ್ಯಾಂ ಚ ಪೃಥಕ್ಚೈವ ಮಧುನಾ ಚೇಕ್ಷುಸಾರಕೈಃ ।
ಗವ್ಯಕ್ಷೀರಾನ್ನ ನೈವೇದ್ಯಂ ಪ್ರಣವೇನೈವ ಕಾರಯೇತ್ ॥೧೧೨॥

೧೧೨ ಬೇರೆ ಬೇರೆಯಾಗಿ ಹಾಲು ಮೊಸರು, ಜೇನುತುಪ್ಪ, ಬೆಲ್ಲ ಮುಂತಾದ ವಸ್ತುಗಳಿಂದ ಶಿವನನ್ನು ಅಭಿಷೇಕ ಮಾಡಿ, ಹಾಲಿನಿಂದ ತಯಾರಿಸಿದ ಕ್ಷೀರಾನ್ನ ನೈವೇದ್ಯವನ್ನು ಓಂಕಾರದಿಂದ ನೈವೇದ್ಯ ಮಾಡಬೇಕು.

**ಪ್ರಣವಂ ಧ್ವನಿಲಿಂಗಂ ತು ನಾದಲಿಂಗಂ ಸ್ವಯಂಭುವಃ ।**
**ಬಿಂದುಲಿಂಗಂ ತು ಯಂತ್ರಂ ಸ್ಯಾನ್ಮಕಾರಂ ತು ಪ್ರತಿಷ್ಠಿತಂ ॥೧೧೩॥**

೧೧೩ ಓಂಕಾರವು ಧ್ವನಿಲಿಂಗವು, ಉದ್ಭವಿಸಿದ ಲಿಂಗವು, ನಾದ ಲಿಂಗವು, ಯಂತ್ರವು ಬಿಂದುಲಿಂಗವು, ಮಕಾರವು ಪ್ರತಿಷ್ಠಿತಲಿಂಗವು.

**ಉಕಾರಂ ಚರಲಿಂಗಂ ಸ್ಯಾದಕಾರಂ ಗುರುವಿಗ್ರಹಂ ।**
**ಷಡ್ಲಿಂಗಪೂಜಯಾ ನಿತ್ಯಂ ಜೀವನ್ಮುಕ್ತೋ ನ ಸಂಶಯಂ ॥೧೧೪॥**

೧೧೪ ಉಕಾರವು ಚರಲಿಂಗವು ಆಕಾರವು ದೊಡ್ಡದಾದ ಲಿಂಗವು, ಈ ಆರು ಲಿಂಗಗಳನ್ನು ನಿತ್ಯವೂ ಪೂಜಿಸಿದವನು. ಜೀವನ್ಮುಕ್ತನಾಗುವನು ಇದರಲ್ಲಿ ಸಂಶಯವಿಲ್ಲ.

**ಶಿವಸ್ಯ ಭಕ್ತ್ಯಾ ಪೂಜಾ ಹಿ ಜನ್ಮಮುಕ್ತಿಕರೀ ನೃಣಾಂ ।**
**ರುದ್ರಾಕ್ಷಧಾರಣಾತ್ಪಾದಮರ್ಧಂ ವೈ ಭೂತಿಧಾರಣಾತ್ ॥೧೧೫॥**

೧೧೫ ಶಿವನನ್ನು ಭಕ್ತಿಯಿಂದ ಪೂಜಿಸುವಿಕೆಯಿಂದ ಮನುಷ್ಯರಿಗೆ ಮುಕ್ತಿಯು ಲಭಿಸುವುದು. ರುದ್ರಾಕ್ಷಿ ಧಾರಣೆಯಿಂದ ಶಿವಪೂಜೆಯು ಕಾಲುಭಾಗದಷ್ಟು ಫಲ ದೊರಕುವುದು. ವಿಭೂತಿಧಾರಣೆಯಿಂದ ಅರ್ಧದಷ್ಟು ಫಲಪ್ರಾಪ್ತವಾಗುವುದು.

**ತ್ರಿಪಾದಂ ಮಂತ್ರಜಾಪ್ಯಾಚ್ಚ ಪೂಜಯಾ ಪೂರ್ಣಭಕ್ತಿಮಾನ್ ।**
**ಶಿವಲಿಂಗಂ ಚ ಭಕ್ತಂ ಚ ಪೂಜ್ಯ ಮೋಕ್ಷಂ ಲಭೇನ್ನರಃ ॥೧೧೬॥**

೧೧೬ ಶಿವಪಂಚಾಕ್ಷರೀ ಮಂತ್ರ ಜಪದಿಂದ ಮುಕ್ಕಾಲುಭಾಗ ಫಲ, ಭಕ್ತಿ ಉಂಟಾಗುವುದು, ಶಿವನ ಪೂಜೆಯಿಂದ ಪೂರ್ಣಭಕ್ತಿಯುಂಟಾಗುವುದು. ಶಿವಲಿಂಗವನ್ನೂ, ಶಿವಭಕ್ತನನ್ನು ಪೂಜಿಸುವಿಕೆಯಿಂದ ಮುಕ್ತಿಯು ದೊರಕುವುದು.

**ಯ ಇಮಂ ಪಠತೇಽಧ್ಯಾಯಂ ಶೃಣುಯಾದ್ವಾ ಸಮಾಹಿತಃ ।**
**ತಸ್ಯೈವ ಶಿವಭಕ್ತಿಶ್ಚ ವರ್ಧತೇ ಸುದೃಢಾ ದ್ವಿಜಾಃ ॥೧೧೭॥**

೧೧೭ ಯಾರು ಈ ಅಧ್ಯಾಯವನ್ನು ಶ್ರದ್ಧೆಯಿಂದ ಕೇಳುವರೋ ಅಂತಹವರಿಗೆ ಶಿವನಲ್ಲಿ ದೃಢವಾದ ಭಕ್ತಿಯುಂಟಾಗಿ ಅಭಿವೃದ್ಧಿಯಾಗುವುದು.

**ಇತಿ ಶ್ರೀ ಶಿವಮಹಾಪುರಾಣೇ ವಿದ್ಯೇಶ್ವರಸಂಹಿತಾಯಾಂ ಷೋಡಶೋಽಧ್ಯಾಯಃ**

ಇಲ್ಲಿಗೆ ಶಿವಮಹಾಪುರಾಣದಲ್ಲಿ ವಿದ್ಯೇಶ್ವರ ಸಂಹಿತೆಯಲ್ಲಿ

ಹದಿನಾರನೇ ಅಧ್ಯಾಯವು ಮುಗಿದುದು.

